



ಮನೆಗೆ ಬರುವ ಅಂಚೆಯಲ್ಲಿ, ಬರೇ ಆಮಂತ್ರಣ, ರಸೀದಿಗಳಂಥ ಮುದ್ರಿತ ಕಾಗದಪತ್ರಗಳೇ ಇದ್ದರೆ ಬೇಜಾರಾಗುತ್ತದೆ. ಆ ಒಣಕಟ್ಟಿನಲ್ಲಿ, ಹಸಿರೆಲೆಯಂಥ ಒಂದಾದರೂ ಅಂತರ್‌ದೇಶಿ, ಆಪ್ತ ಮುಖದಂತೆ ತೋರುವ ಕೈಬರಹದ ಕಾರ್ಡೊಂದು ಇದ್ದರೆ ಜೀವಕ್ಕೆಂಥದೋ ಖುಷಿ.

ನಮ್ಮ ಸಾಹಿತ್ಯಲೋಕವೂ ಈಗ, ಅಂತರ್‌ದೇಶಿ ಮತ್ತು ಕಾರ್ಡುಗಳಿಲ್ಲದ junk mail ತುಂಬಿತುಳುಕುವ ಅಂಚೆಪೆಟ್ಟಿಗೆಯಂತೆ ಆಗತೊಡಗಿದೆಯೇ? ಒಳಬಾಳಿನ ಸುಳಿವೇ ಇಲ್ಲದ, ಒಣ ಬಹಿರಂಗ ಚಟುವಟಿಕೆಯಂತಾಗಿದೆಯೇ? ಎಷ್ಟೊಂದು ವಿಚಾರಗೋಷ್ಠಿಗಳು, ಪ್ರಶಸ್ತಿಗಳು, ದತ್ತಿ ಉಪನ್ಯಾಸಗಳು, ಬಿಡುಗಡೆ ಸಮಾರಂಭಗಳು, ತಾಲೂಕು, ಜಿಲ್ಲಾಮಟ್ಟದ ಸಂಕಿರಣಗಳು, ಸಮ್ಮೇಳನಗಳು... ಆದರೂ ಎಲ್ಲೂ ಮನಸ್ಸುಗಳ ನಿಜವಾದ ಸಂಪರ್ಕ, ಸಂವಾದ ಸಾಧ್ಯವಾಗುತ್ತಿಲ್ಲ ಯಾಕೆ? ಬಿಸಿಲಲ್ಲಿ ಕಾದ ತಗಡಿನ ಖುರ್ಚಿಗಳಂಥ ಪ್ರಬಂಧಗಳು, ತಮ್ಮನ್ನು ಬಿಟ್ಟರೆ, ಮತ್ತಾವುದರಲ್ಲೂ ಆಸ್ಥೆಯೇ ಇಲ್ಲದ ಸಾಹಿತಿಗಳು, ಅತ್ಯಾಧುನಿಕ ಮುದ್ರಣದಲ್ಲಿ, ಇಸ್ಪೀಟು ಪ್ಯಾಕುಗಳಂತೆ ಪಳಪಳ ಹೊಳೆಯುತ್ತ ಬರುವ ಪುಸ್ತಕಗಳು... ಎಲ್ಲೂ ಮನುಷ್ಯನ ಬೆರಳ ಗುರುತಿಲ್ಲ, ಉಸಿರಿನ ಬಿಸಿಯಿಲ್ಲ.

ಬಾಜಾಬಜಂತ್ರಿ, ವಿಡಿಯೋ, ವೇದಿಕೆ, ಚರ್ಚೆ, ಚಪ್ಪಾಳೆ, ಕ್ಯಾಮೆರಾಗಳಿಂದ ದೂರ... ಮನಸ್ಸಿನ ತೋಟದಲ್ಲಿ, ಯಾರ ಕಣ್ಣಿಗೆ ಬೀಳದಂತೆ, ಒಳ್ಳೆಯ ಸಾಹಿತ್ಯ ಸದ್ದಿಲ್ಲದೆ ಅರಳುತ್ತದೆ. ಜಗದ ಪಾಡು ಅಲ್ಲಿ, ಜೀವದ ಹಾಡಾಗುತ್ತದೆ, ಎದೆಯ ಹಾಲಾಗುತ್ತದೆ.

ಓದು ಮತ್ತು ಬರವಣಿಗೆ ಪ್ರೇಮದಂತೆ, ಸ್ವಪ್ನದಂತೆ. ಅದರ ಖಾಸಗಿತನವನ್ನು, ಏಕಾಂತವನ್ನು ಕಾಪಾಡಿಕೊಳ್ಳುವುದೇ ಲೇಖಕನ ಅಗ್ನಿದಿವ್ಯ. ಆಗ ಆತನಿಗೆ, ಈ ಸಮ್ಮೇಳನ-ಗಿಮ್ಮೇಳನಗಳು, ದೂರದ ಅಪರಿಚಿತ ಕಾಂಪೌಂಡಿನಲ್ಲಿ ನಡೆವ ಯಾರದೋ ಮದುವೆಯ ಸಮಾರಂಭದಂತೆ ಕಾಣುತ್ತವೆ.

ಸಾಹಿತ್ಯದ ಹೆಸರಿನಲ್ಲಿ ಎಲ್ಲರನ್ನು ದಣಿಸುವ, ಇಂಥ ಕರ್ಕಶ ಬಹಿರಂಗ ಚಟುವಟಿಕೆಗಳೆಲ್ಲವೂ ಕೆಲಕಾಲ ಬರಖಾಸ್ತುಗೊಳ್ಳಬೇಕು. ಜೀವ ಜಾಲವನ್ನು ಪೋಷಿಸುವ ಮೌನವೊಂದು ಕನ್ನಡದ ಪಾಕಶಾಲೆಗೆ ಮರಳಬೇಕು.

ಆ 'pen' drop silenceನಲ್ಲೆ ಹೊಸ ಬರಹಗಾರರ ಕಾಣ್ಕೆಗಳು ಕಣ್ತೊಡೆಯಬಲ್ಲವು.

ಸಂಪಾದಕ



ಋತ್ವಿಕ್

ಭಾವ ಲೋಕ

## ಕತೆಗಳು



## ಶತಮಾನದ ಮೆಲುಕು



## ವಿಶ್ವ ಭಾರತಿ





# ಭಾವನಾ

ಸಂಪುಟ -1 ಸಂಚಿಕೆ - 4

ಜುಲೈ 2000



ಪ್ರಕಾಶಕರು, ಮುದ್ರಕರು, ಮಾಲಿಕರು
**ವಿಜಯ ಸಂಕೇಶ್ವರ**
ಆನಂದ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್

ಪ್ರಧಾನ ಸಂಪಾದಕರು
**ಸಂತೋಷಕುಮಾರ ಗುಲ್ವಾಡಿ**

ಸಂಪಾದಕ
**ಜಯಂತ ಕಾಯ್ಕಿಣಿ**

ಮುಖಪುಟ ಜಲವರ್ಣ ಚಿತ್ರ: ಜಾನ್ ಫರ್ನಾಂಡಿಸ್

ಸಂಚಿಕೆಯ ಕಲಾವಿದರು: ಇಕ್ಬಾಲ್ ಅಹ್ಮದ್, ಸೃಜನ್, ಶಂಕರ ಪಾಟೀಲ, ಕೆ.ಎನ್. ರಾಮಚಂದ್ರನ್, ಸಂಗು, ಬಾಗೂರು ಮಾರ್ಕಂಡೇಯ, ದೇವದಾಸ್, ರಾಮಕೃಷ್ಣ, ಪ್ರತಿಭಾ ನಂದಕುಮಾರ್, ಶ್ರೀಪಾದ್.

**ಸಂಪಾದಕೀಯ ಕಾರ್ಯಾಲಯ**
ನಂ. 32, 2ನೆಯ ಮುಖ್ಯರಸ್ತೆ, ವೈಯಾಳಿಕಾವಲ್
ಬೆಂಗಳೂರು - 560 003
ದೂರವಾಣಿ : 3365312, 3365313
ಫ್ಯಾಕ್ಸ್: 080-3340311

ಪ್ರಧಾನ ಕಛೇರಿ
ಗಿರಿರಾಜ ಅನೆಕ್ಸ್
ಸರ್ಕ್ಯೂಟ್ ಹೌಸ್ ರಸ್ತೆ, ಹುಬ್ಬಳ್ಳಿ
ದೂರವಾಣಿ: 0836-253656, 253657
ಫ್ಯಾಕ್ಸ್: 0836-253630



ಸರಿಯಾಗಿ ಆರು ಘಂಟೆಗೆ, ಬಿಡಾರದ ಕೋಳಿಯಲ್ಲ, ದಿನೂ ತಂದ ವಾಚಿನಕೋಳಿ 'ಕೊ ಕ್ಕೊ ಕೋಂ ಕೋಂ' ಕೂಗಿದಾಗ ಎಚ್ಚೆತ್ತ ಪದ್ದು ಚಿಕ್ಕಿ, ಕಣ್ಣು ಬಿಡಬೇಕೆಂದರೆ, ರೆಪ್ಪೆಗಳ ಮೇಲೆ ಯಾರೊ ಕಲ್ಲು ಹೇರಿಟ್ಟ ಭಾಸ, ಮಗ್ಗುಲಾಗತೊಡಗಿದರೆ ಮೈಕೈಯೆಲ್ಲ ಗುದ್ದಿ ಹಣ್ಣು ಮಾಡಿದ ನೋವು. ಅದೇ ಅರೆ ಭ್ರಮೆಯಲ್ಲಿ ಕಣ್ಣು ಮುಚ್ಚಿದವಳು, 'ರಾಮ ರಾಮಾ' ಎಂಬ ಗಂಡನ ನರಳಿಕೆಗೆ ಧಡಕ್ಕನೆ ಎದ್ದು ಕುಳಿತಳು.

ಹೌದು, ಹೊರಗೆ ಬೆಳ್ಳಂಬೆಳಗಾಗಿ ಬಿಟ್ಟಿದೆ. ಅಂಗಳದ ತುದಿಯ ತೆಂಗಿನ ಗಿಡದಲ್ಲಿ ಆಗಲೇ, ಕಾಗೆ ಗುಬ್ಬಿಗಳ ಕಟಿಪಿಟಿ ಶುರುವಾಗಿದೆ. ಕೊಟ್ಟಿಗೆಯ ಮಂದಿ ಕರೆಯುತ್ತಿದ್ದಾರೆ, ಒಂಬತ್ತೂವರೆ ಬಸ್ಸು ಬರುವುದರೊಳಗಾಗಿ ತಾನು ಮಾಡಬೇಕಿರುವ ಕೆಲಸಗಳ ರಾಶಿ ನೆನೆದೇ ಎದೆಯೊಡೆದು ಗಂಟಲಿಗೆ ಬರುತ್ತಿದೆ. ಆದರೆ ಶರೀರ ಮಾತ್ರ ಏನೇ ಆದರೂ ಈ ಜನ್ಮದಲ್ಲಿ ಮೇಲೇಳಲಾರೆನೆಂಬ ಹಟ ತೊಟ್ಟುಬಿಟ್ಟಿದೆ.... ಸಾಯ್ಲಿ, ಎಲ್ಲಾ ಹುಲಿ ತಿಂದು ಹೋಗ್ಲಿ. ಮನೆ-ಮಕ್ಕು-ಸಂಸಾರ ಎಂದು ಒಂದು ಹದಿಮೂರು ವರ್ಷದಿಂದ ಜೀವ ತೇಯ್ದಿದ್ದಕ್ಕೆ, ಆತಲ್ಲ ಸಮಾ ಮಂಗಳಾರ್ತಿ! ಸಾಕೊ? ಇನ್ನೂ ಬೇಕೊ? ಋಣವೇ ಋಣವೆ. ಮನೆಗೆ ಬೇಕು ಮಕ್ಕಿಗೆ ಬೇಕು ಎಂದು ಆ ಪರಿ ಉಪವಾಸ, ವನವಾಸ ಮಾಡಿ ಮಂತನ ಮಾಡಿಟ್ಟೆ ಹೌದ? ಒಂದೊಂದು ಮೆಟ್ಟು ಜಾಗಕ್ಕಾಗಿ ದಾಯಾದಿಗಳ ಕೈಲಿ ಹೊಡೆದಾಡಿದೆ ಹೌದ? ಬೆಟ್ಟದಲ್ಲಿ, ಹಿತ್ತಿಲಲ್ಲಿ ಎಂದಿಲ್ಲದೆ ಗಡಿ ಒತ್ತಿ, ಹುಲ್ಲು, ಸೊಪ್ಪು ಕ್ಶೊದು, ಗಂಡನನ್ನು ಮುಂದು ಮಾಡಿಕೊಂಡು ಜಗಳಕ್ಕೆ ನಿಂತೆ ಹೌದ?.... ಹೆಂಗಾತು ಈಗ?....

ಮುಚ್ಚಿದ ಕಣ್ಣೆವೆಗಳೊಳಗೆ-ಮುಚ್ಚಿಹೋದ ಮನಸ್ಸಿನೆದುರು ಯಾರದೊ ಸಪೂರದನಿ, ಹಗೂರ ಮಾತು.... ಯಾರು? ಯಾರದೂ?....

ಇಲ್ಲ, ಇನ್ನು ಸಾಧ್ಯವಿಲ್ಲ ಅನ್ನುತ್ತ ಚಿಕ್ಕಿ ದಡಬಡಿಸಿ ಹಾಸಿಗೆ ಸುತ್ತಿ, ಸೀದಾ ಬಚ್ಚಲಿಗೇ ಹೋಗಿ ನಿಂತಳು. ರಾತ್ರಿಯ ಇಡೀ ಅಧ್ಯಾಯದ ನೆನಪನ್ನು ಸೋಪಿನೊಂದಿಗೆ ತೊಳೆದುಬಿಟ್ಟು, ಒಲೆ ಬೂದಿ ತೆಗೆದು, ಸಗಣಿ ಸಾರಿಸಿ, ಬೆಂಕಿ ಒಟ್ಟಿ, ಚಾಕ್ಕೆ ನೀರಿಡುವ ಹೊತ್ತಿಗೆ ಮತ್ತೆ ಹಾಸಿಗೆಯಿಂದ 'ರಾಮ ರಾಮಾ-ರಾಮಾ ರಾಮಾ' ನರಳಿಕೆ, ದೇವ್ರೆ! ಪೆಟ್ಟು ಜೋರಾಗಿಯೇ ಬಿದ್ದಿರ್ಬೇಕು. ಇಲ್ಲಾಂದ್ರೆ ಹಾಗೆಲ್ಲ ನರಳುವ ಜನವೇ ಅಲ್ಲ. ಇಡೀ ದಿನ, ಗಡಿಯಾರದ ಮುಳ್ಳಿನಂತೆ, ಮೇಲೇರಿ ಇಳಿವ ಸೂರ್ಯನಂತೆ, ತಾನಾಯಿತು ತನ್ನ ಕೆಲಸವಾಯಿತು. ಹೆಚ್ಚೆಂದರೆ ನಾಲ್ಕು ಮೋಟು ಬೀಡಿಯಾಯಿತು. ತೀರಾ ಉಮೇದಿ ಬಂದಾಗ, ಭಂಗಿ ಸೊಪ್ಪಿನ ಪಾನಕವಾಯಿತು. ಹೊರ್ಗೂ ಯಾರೇ ಬರಲಿ, ಹೋಗಲಿ; ಯಾರಿಗೆ ಆರಾಮವಿರಲಿ, ಬಿಡಲಿ, ತನ್ನ ಹ್ವಾರ್ಯ ಬಿಟ್ಟಿದ್ದೂ ಇಲ್ಲ. ಹೆಂಡತಿ ಮಕ್ಕಳ ವ್ಯಾಜ್ಯದಲ್ಲಿ ಉಪ್ಪು-ಉಪ್ಪಿನ ಕಲ್ಲು ಅಂದಿದ್ದೂ ಇಲ್ಲ. ಅಂಥಾದ್ರಲ್ಲಿ.....

ಕುನ್ನಿಗೊಡ್ಡೆ! ನಿನಗೊಳ್ಳೆ ಕಾಲಕ್ಕೆ ಬಂದಿದ್ದಲ್ಲ ಇಂಥಾ ಬುದ್ಧಿ, ತಡೆ ತಡೆ ಮಾಡ್ತೇನೆ ನಿಂಗೊಂದ್ ಮದುವೇಯ... ಅವಳು ಕರಕರ ಹಲ್ಲು ಕಡಿದು, ಗಂಡನ ಹತ್ತಿರ ಹೋಗಿ, ಬಗ್ಗಿ, "ಇಕಾ, ಇಕಳಿ ಚಾ ತಂದೆ" ಅಂದಾಗ, ಅವನು ಮತ್ತಷ್ಟು 'ಹುಹುಹು' ಗುಟ್ಟುತ್ತ, ಮೆಲ್ಲಗೆ ಮೇಲೆದ್ದು, ಗೋಡೆ ಹಿಡಿದುಕೊಂಡು, ಮುಖ ತೊಳೆಯಲು ಹೊಂಟಿದ್ದು ಕಂಡು ಮತ್ತಷ್ಟು ಮೈ ಉರಿಯಿತು. ಇಲ್ಲ, ಇನ್ನು ಸುಮ್ಮನಿರೋದಿಲ್ಲ. ಇಡೀ ಎಂಟಾನೆಂಟು ವರ್ಷ, ತನ್ನದೇ ಎಂಜಲು-ತನ್ನದೇ ಬಚ್ಚಲು ಹೇಳೋದ್ಯಾರಿಗೆ ಎಂದು ಸಹಿಸಿದ್ದೇ ಸಹಿಸಿದ್ದು. ಒಳಗಿನ ಹೊಗೆ ಹೊರಬೀಳದಿದ್ಹಾಂಗೆ ಮುಚ್ಚಿಟ್ಕೊಂಡಿದ್ದೇ ಕೊಂಡಿದ್ದು. ಇಲ್ಲ, ಇನ್ನು ಮುಚ್ಚಿಟ್ಟುಕೊಳ್ಳಲಾರೆ, ಪುಂಡಂಗರ್ಧ ರಾಜ್ಯ ಉಂಬಳಿಯಂತೆ, ನೋಡ್ತೇನೆ, ನಾನೂ ನೋಡೇಬಿಡ್ತೇನೆ, ಹಂ,.... ಒಲೆಯ ಹಾಯ್ಗದ ಸೌದೆಯೊಂದಿಗೆ ತಾನೂ ಧಗಧಗಿಸುತ್ತ ಚಿಕ್ಕಿ ಕೊಟ್ಟಿಗೆಯತ್ತ ನಡೆದಳು.

ನಡೆದದ್ದೇನೊ ಹೌದು, ಆದರೆ ಎಮ್ಮೆ ಕರೆಯಲು ತುದಿಗಾಲಲ್ಲಿ ಕೂತರೆ, ಮೇಲೇಳಲಿಕ್ಕಾಗುತ್ತಿಲ್ಲ. ಶರೀರದ ಯಾವ್ಯಾವ ಭಾಗ ನೋಯುತ್ತಿದೆಯೆಂದು ತಿಳಿಯುತ್ತಲೂ ಇಲ್ಲ. ಬಿದ್ದಿದ್ದು ಮೂರೇ ಮೂರು ಲತ್ತೆ, ಕಬ್ಬಿಣದ ಸರಳಿಂದ... ಐವತ್ನಾಲ್ಕರ ಶರೀರಕ್ಕೆ. ಅದೂ ಆರು ಬಾಣಂತನದಲ್ಲಿ ಅತ್ತ ಹೋಗಿ ಇತ್ತ ಬಂದದ್ದು. (ಆದರಲ್ಲೇ ಮೂರು ಹಾಳು ಬಾಣಂತನ ಬೇರೆ) ಸೊಂಟ ಮುರಿಯದೆ ಶಾಬೀತಾಗಿ ಉಳಿದದ್ದೇ ಹೆಚ್ಚು. ಇನ್ನೊಂದು ಚಣ ಅಲ್ಲೇ ಇದ್ದಿದ್ದರೆ, ಬಹುಶಃ, ಕೈ ಕಾಲು ಮುರಿದೇ ಕುಂಡ್ರಿಸುತ್ತಿದ್ದ ಮಗ ಬಹಾದ್ದೂರ. ಆ ಕರ್ರೊ ಕತ್ತಲಲ್ಲಿ, ಪೆಟ್ಟು ತಿಂದ ಎಮ್ಮೆ ಬಿದ್ಹಾಕಿ ಓಡುವಂತೆ ಓಡಿ, ಸೌದೆ ಮನೆ ಹಿಂದೆ ಅಡಗಿ ಕೂತಿದ್ದಕ್ಕೆ ಈಗ ಮೇಲೆದ್ದು ಓಡಾಡುತ್ತಿರುವುದು. ಇರ್ಲಿ, ನೋಡಿಯೇ ಬಿಡೋಣ.... ನಾನಂದ್ರೆ ಏನಂತ ತಿಳ್ಕೊಂಡಿದಾನೆ ಕುನ್ನಿ ಹಂ... ಕಟ್ಟಿಸಿಕೊಂಡ ಹಲ್ಲು ತುಂಡಾಗಿ ಬಿಡಬಾರದೆಂಬ ಹುಶಾರಿಯಲ್ಲೇ ಮತ್ತೊಮ್ಮೆ ಹಲ್ಲು ಕರ ಕರ ಮಾಡಿ, ಪದ್ದು ಚಿಕ್ಕಿ ಉಪ್ಪಿಟ್ಟು ಕೆದಕತೊಡಗಿದಳು.

ಉಪ್ಪಿಟ್ಟಾಯಿತು. ಮತ್ತೊಂದು ಚಹಾ ಕುದಿಯಿತು. ಉಪ್ಪಿಟ್ಟು ಕಂಡಿದ್ದೇ, ದಿನೂನ ಮುಖ ಸಿಂಡರಿಸಿದರೂ, ಮಾತಿಲ್ಲದೆ ಮೂವರೂ ತಿಂದು ಮುಗಿಸಿಯಾಯಿತು. ಮೇಲೇಳುವಾಗ "ದಿನೂ" ಎಂದು ದೈನ್ಯದಿಂದ ಅವಳು ಕರೆದದ್ದಕ್ಕೆ 'ಏನು?' ಎಂಬಂತೆ ಅಮ್ಮನ ಮುಖ ನೋಡಿದ, ಕರುಣೆಯಿಂದಲೊ? ತಾತ್ಸಾರದಿಂದಲೊ?...

"ತಮಾ, ನೀನೂ ನಂಜೊತೆ ಪ್ಯಾಟಿಗೆ ಬಂದ್ಬಿಡು. ಆ ರೊಣಪನ ಸೊಕ್ಕು ಅದೆಷ್ಟಿದ್ಯೊ ನೋಡಿಬಿಡೋಣ. ಆ ಹವಾಲ್ದಾರಣ್ಣ ನಿಂಗೊ

ತ್ತಿದೆಯಲ್ಲ...'', ಅಮ್ಮನ ಮಾತಿಗೆ ಮಗ ಉತ್ತರಿಸ ದಿದ್ದರೂ ನರಳುತ್ತಿದ್ದ ಅಪ್ಪ ತಲೆಯೆತ್ತಿ, ಪಟಕ್ಕನೆ ಬಾಯಿಬಿಟ್ಟ.

''ಹೆಡ್ಡೀ ಹೆಡ್ಡಿ, ನಿನ್ನ ತಲೆ ಏನು ಹನ್ನೆರಡಾಣೆ ಆಗ್ಹೋಯ್ತೇನೆ? ಹೊಟ್ಟೆ ಮಗನ ಹಿಡಿದು ಪೋಲೀಸ್ರಿಗೆ ಕೊಡ್ಲಿಕ್ಕೆ ಹೊಂಟೀಯಲ್ಲ. ಥೂ ನಿನ ಜನ್ಮಕ್ಕೆ....''. ಅದೇನೊ ಮಹಾ ಹೇಳಿಬಿಟ್ಟೆ ನೆಂಬಂತೆ ತಲೆ ತಗ್ಗಿಸಿ, ಬಗ್ಗಿದ ಶರೀರವನ್ನು ಇನ್ನಷ್ಟು ಮುದ್ದೆಗೊಳಿಸಿ, ಬೆವರೊರೆಸಿಕೊಳ್ಳತೊಡಗಿದ. ಎಂದೂ ಇಲ್ಲದ ಗಂಡನ ಈ ಪರಿಗೆ, ಮಿಕಿ ಮಿಕಿನೋಡುತ್ತ, ಚಿಕ್ಕಿ ಇನ್ನಷ್ಟು ಬೆಂಕಿಯಾದಳು.

''ಹಾಂ ಹಂ, ಹೌದು. ನಾ ಹೆಡ್ಡಿಯಾಗಿ ದ್ದಕ್ಕೇ ನಿಮ್ಮೆಲ್ರ ತಿಪ್ಪೆ ಬಳೀತಾ ಬಿದ್ದಿರೋದು. ನೀವು ಮಾ ಬುದವಂತ್ರು, ದಿನ ದಿನಾ ಮಗನ ಕೈಲಿ ಲತ್ತೆ ತಿಂತಾ ಕುಂತಿರಿ. ನಾನೆಲ್ಲಾದ್ರೂ ದೇಶಾಂತ್ರ ಹೊಂಟ್ಹೋಗ್ತೇನೆ, ಈ ನಮನಿ ಜಗಳ-ರಗಳೆ-ಹೊಡೆದಾಟ ಇನ್ನು ನೋಡ್ಲಾರೆ...'' ಬುಸು ಗುಟ್ಟುತ್ತ ಅವಳು ಮೇಲೆದ್ದಾಗ, ಮಗ ಅಪ್ಪನ ಕೈ ಹಿಡಿದು, ''ಅಪಾ ನೀ ಸುಮ್ನಿರು. ಅವ್ನನ್ನೇನು ಯಾರೂ ಕೊಂದು ಹಾಕೋದಿಲ್ಲ. ಅಲ್ಲಿ ಪೋಲೀಸ್ರ ಬೂಟುಗಾಲಿನ ರುಚಿ ಕಂಡ್ರೆ ಮಾತ್ರ ಅವ್ನಿಗೆ ಬುದ್ಧಿ ಬರೋದು. ಅವನ ನೆತ್ತಿಗೇರಿದ ಪಿತ್ಥ ಇಳಿಸ್ಲಿಕ್ಕೆ ಅವರೇ ಸಮ. ನೀ ಅಡ್ಡ ಬರ್ಬೇಡ...'' ಅನ್ನುತ್ತ ಅಲ್ಲಿಂದೆದ್ದ.

ಎದ್ದಿದ್ದೇನೊ ಹೌದು. ಆದರೆ ಹೋಗುವದೆಲ್ಲಿಗೆ? ನಿಂತ ಭೂಮಿಯ ಸೀಮೆ ದಾಟಿ, ಸಾಮಾನ್ಯರು ಇನ್ಯಾವ ಗ್ರಹಕ್ಕೆ ಹೋಗಲು ಸಾಧ್ಯವಿದೆ? ಮಣ್ಣ ಮೇಲಿನ, ಕಲ್ಲು ಮುಳ್ಳಿನ ದಾರಿಯ ಹೊರತಾದ ಹಾದಿ ಎಲ್ಲಿದೆ?.... ಈ ನೆಲದ ಮೇಲಿನ ಸಮಸ್ತ ಕ್ಷುದ್ರತೆಯೂ ಮನೆ ಮಾಡಿ ನಿಂತ ಮನೆ, ಅಲ್ಲಿ ಅವನ ಬುದ್ಧಿ ಬಲ್ಲಾ ದಂದಿನಿಂದ ಜಗಳವಿಲ್ಲದ ದಿನವೇ



ಇಲ್ಲ. ಇವನು ಶಾಲೆ ಕಲಿಯುವ ಹೊತ್ತಿನಲ್ಲೇ, ಇಬ್ಬರು ಅತ್ತಿಗೆಯರು-ಅಕ್ಕಂದಿರು-ಅವರ ಒಂದೊಂದು ಮರಿಗಳು ಗಿಜಿಬಿಜಿ ತುಂಬಿ ಕೊಂಡ ಗೂಡಿನಲ್ಲಿ, ಬೆಳಗಾಗೆದ್ದು ಚಾ ಕುಡಿಯು ವಾಗಲೇ, ಒಬ್ಬಳ ಮಗನಿಗೆ ಇನ್ನೊಬ್ಬಳು ತುಪ್ಪ ಹಾಕಲಿಲ್ಲವೆಂದು ಜಗಳ, ಇಲ್ಲಾ ದೋಸೆ ಗರಿ ಯಾಗಲಿಲ್ಲವೆಂಬ ಆಕ್ರೋಶ, ಇಲ್ಲಾ ಹಲ್ಲು ಪುಡಿಗಾಗಿ, ಇಲ್ಲಾ ಸೋಪಿಗಾಗಿ, ಮತ್ತೆಲ್ಲ ಸಾಯಲಿ, ಮಗುವಿನ ಹಾಲಿಗೆ ಚಿಟಿಕೆ ಸಕ್ಕರೆ ಹಾಕಿದ್ದಕ್ಕೂ ಯಜಮಾನ ಅಣ್ಣನ ಗೌಜೀ ಗೌಜು. ಅವನಿಗೆ 'ಸೋ' ಅನ್ನುವ ಹೆಂಡತಿ. ಸತ್ತೂ, ಬಿದ್ದೂ ಗೇಯಲಿಕ್ಕೆ ಮನೆಜನ ಬೇಕು, ಉಂಡು-ತಿಂದು, ಉಟ್ಟು- ತೊಟ್ಟು ಮಾಡಲು ಬೇಡ ಅಂದ್ರೆ ಯಾರು ಕೇಳ್ತಾರೆ? ಎಂದು ಉಳಿದವರ ಆಕ್ರೋಶ. ತಾಯಿ ಒಮ್ಮೆ ಕೃಷ್ಣ ಪಕ್ಷ, ಒಮ್ಮೆ ಶುಕ್ಲ ಪಕ್ಷ. ಪಂಕ್ತಿಯ ಬುಡದಲ್ಲೇ ಕೂತು, ಕಂಕಿಂ ಎನ್ನದೇ ಬಂದಿದ್ದು ತಿಂದು, ಮೇಲೇ ಳುತ್ತಿದ್ದ ಅಪ್ಪನಂತೆ ಈ ಸಣ್ಣವನೂ ಉಪ್ಪಿಗೂ ಇಲ್ಲ, ಸೊಪ್ಪಿಗೂ ಇಲ್ಲ. ಅಂತೂ, ಹೇಗೊ ಎಳೆದು ಕೊಂಡು ಬಂದ ಸಂಸಾರದ ತೇರು, ಇವನು ಎಸ್ಸೆಸ್ಸೆಲ್ಸಿಯಲ್ಲಿದ್ದಾಗ ಹರಿದು ಮೂರು ಚೂರಾಗಿತ್ತು.

ಆಗಲಿ, ಮಹಾ ಏನಾಯ್ತು? ಕಾಯಿ ಬಂದು ಬಂದು, ಹೇರಿಕೊಂಡ ಮಾವಿನ ಟೊಂಗೆ ಮುರಿದುಬಿದ್ದಿದ್ದಕ್ಕೆ ಮರಕ್ಕೆ ಯಾಕೆ ಚಿಂತೆ? ಇನ್ನೊಂದು ಬದಿಯಿಂದ ಚಿಗುರಿಕೊಂಡ ರಾಯ್ತಪ್ಪ, ಅಂದರೆ ಅದಲ್ಲ ಪ್ರಶ್ನೆ. ಇದ್ದ ಎರಡೆ ಕರೆ ತೋಟದಲ್ಲಿ ನಾಲ್ಕು ಪಾಲು ಮಾಡಿದಾಗ ಯಾರಿಗೆ ಸಾಕಾಗುತ್ತದೆ?... ಇಡೀ ವರ್ಷಕ್ಕೆ ನಾಲ್ಕು ಕ್ವಿಂಟಾಲು ಅಡಿಕೆ ಕೊಯ್ದು, ಯಾವ ಕುಟುಂಬ ಸುಖ ವಾಗಿರಲು ಸಾಧ್ಯ?...

ತನಗೆ ಕೊಟ್ಟ ತೋಟ ಹಾಳು, ಅಡಿಕೆ ಯಾಗುವುದಿಲ್ಲ, ಎಂದು ಹಿರಿಯವನು- ತನ್ನದು ಮತ್ತೂ ಖರಾಬು, ಸಣ್ಣವನ

ತೋಟ ತನಗೆ ಬೇಕು ಎಂದು ನಡುವಿನವನು-ಒಮ್ಮೆ ಎಲ್ಲರೂ ಒಪ್ಪಿಕೊಂಡು ಹಿಸೆ ಕರಾರು ಬರೆದಾದ ಮೇಲೆ ತಕರಾರು ಮಾಡಿದ್ರೆ ಯಾರು ಕೇಳ್ತಾರೆ? ಎಂದು ತಾಯಿ-ಹ್ಯಾಗೆ ಕೇಳೋದಿಲ್ಲ ನೋಡೇಬಿಡ್ತೇವೆ ಎಂದು ಅವರಿಬ್ಬರು. ಅದೆಲ್ಲ ಹಾಳಾಯ್ತು, ಒಂದು ಒಗ್ಗರಣೆ ಸೌಂಟಿಗಾಗಿ, ಒಂದು ಎಣ್ಣೆ ಗಿಂಡಿಗಾಗಿ, ಒಂದು ದೀಪದ ಶಮೆ, ಒಂದು ಶ್ಯಾವಂತಿಗೆ ಹಿಳ್ಳಿಗಾಗಿಯೂ ಹತ್ತಿ ಹರಿಯದ ಜಗಳ... ಹತ್ತಿರದ ನೆಂಟರಿಷ್ಟರು, ನೆಂಟರಲ್ಲದ ಹಿರಿಯ ಪಂಚರು-ಯಾರೇ ಬಂದು ಹೇಳಿದರೂ ಮತ್ತಷ್ಟು ಜಡಕಾಗುವ ಜಗಳ... ಕಂಡೂ ಕಂಡೂ ತಲೆ ಕೆಟ್ಟುಹೋದ ದಿನು, ಯಾರಿಗೂ ಸುದ್ದಿ ಕೊಡದೆ ಬೊಂಬಾಯಿ ಬಸ್ಸು ಹತ್ತಿದವನು, ಹೋದ ಎಂಟೇ ದಿನಕ್ಕೆ ಕುದಿಯುವ ಜ್ವರ ಹೊತ್ತು ವಾಪಸು ಬಂದಾಗ, ತಾಯಿ ಬುದ್ಧಿ ಹೇಳಿ, ತನ್ನ ಏಕೈಕ ಆಪದ್ಧನವಾದ ವಠಾಣೆ ಸರ ಮಾರಿ, ಊರ ಬಸ್‌ಸ್ಟಾಪಿನಲ್ಲಿ ಗೂಡಂಗಡಿ ಹಾಕಿ ಕೊಟ್ಟಿದ್ದಳು.

...ತಾಯಿಯ ಮಾತಿನಂತೆ ಮಿಂದು, ಅಂಗಿ, ಪ್ಯಾಂಟು ತೊಟ್ಟ ದಿನು ಅಮ್ಮನನ್ನು ಕರೆದರೆ, ಅವಳಿನ್ನೂ ಪಾತ್ರೆ ತಿಕ್ಕುತ್ತಿದ್ದಾಳೆ, ಘಂಟೆ ಆಗಲೇ ಒಂಬತ್ತು. ಇನ್ನರ್ಧ ತಾಸಿನಲ್ಲಿ, ಇವಳು ಮಿಂದು, ಸೀರೆಯುಟ್ಟು ಹೊರಟಂತೇ ಸೈ. ಶಾಲೆಮನೆ ಘಟ್ಟ ಹತ್ತುತ್ತಿದ್ದಾಗಲೇ ಬಸ್ಸು 'ಬುರ್ರ್' ಎಂದು ಹೋಗಿ ಯಾಗಿರುತ್ತದೆ, ಥತ್, ಹಾಳ್‌ಬಿದ್ಹೋಗ್ಲಿ!.... ಮನಸ್ಸಿನಲ್ಲೇ ಅಲವತ್ತುಕೊಳ್ಳುತ್ತ, ''ಅಮಾ, ನೀ ಮೀಯ್ಲಿಕ್ಹೋಗು. ಇದಿಷ್ಟು ನಾ ತೊಳಿತೇನೆ'' ಅಂದ ಮಗನ ಮಾತಿಗೆ ತಾಯಿ ತಿರುಗಿ ಮಾತಾಡಲೂ ಇಲ್ಲ, ಕೆಲಸ ಬಿಟ್ಟು ಮೇಲೇಳಲೂ ಇಲ್ಲ. ಅವನ ಮುಖವನ್ನೇ ಮಿಕಿ ಮಿಕಿ ನೋಡಿದಳು ಮಾತ್ರ.

ಇವನೊಬ್ಬನಿಗಾದರೂ ಅಮ್ಮ ಎಂಬ ಮಮಕಾರ, ಮುಳ್ಳು ಮೊನೆಯಷ್ಟಾದರೂ ಇದ್ದಿದ್ದರೆ, ಒಂದು ದಿನ ಬಿಡದೆ, ಮೂರೆಮ್ಮೆ ಕರೆದ ಹಾಲನ್ನು, ತಾನೇ ಪೇಟೆಗೆ ಹೊತ್ತೊಯ್ದು ಮಾರಬೇಕಿರಲಿಲ್ಲ... ಮತ್ತೆ ಮನೆಗೆ ಬಂದು ಹಸಿಬಿಸಿ ಕೂಳು ಕುಚ್ಚಬೇಕಿರಲಿಲ್ಲ... ಅದೆಲ್ಲ ಸಾಯ್ಲಿ, ಹೊಂತಗಾರ ಪೋರ ಅಂಬವನು ಕನಿಷ್ಠ, ದನಕರ ಮೈ ತೊಳೆಸಿ, ಸಗಣಿ ಬಾಚಿ, ಹುಲ್ಲು ತಂದು ಹಾಕುವಷ್ಟಾದರೂ ಸಹಾಯ ಮಾಡಿದ್ದರೆ?....

ಪದ್ದು ಚಿಕ್ಕಿ, ದೊಡ್ಡದೊಂದು ನಿಟ್ಟುಸಿರಿನೊಂದಿಗೆ ಪಾತ್ರೆಗಳನ್ನೆತ್ತಿ ಒಳಗೊಯ್ದಳು.

ಒಳಗೆ ಎಂಜಲುಬಾಳೆ, ಬಾಳೆಗೆ ಮುತ್ತಿಕೊಂಡ ನೊಣದ ರಾಶಿ, ಒಲೆಮೂಲೆಯಲ್ಲಿ ಪರಮಾನಂದದಿಂದ ಕಣ್ಣು ಮುಚ್ಚಿದ ಬೆಕ್ಕು.... ಈಗಿದನ್ನೆಲ್ಲ ಚೊಕ್ಕಗೊಳಿಸುತ್ತ ಕೂತರೆ ಬಸ್ಸು ತಪ್ಪಿ, ಮತ್ತೊಂದು ತಾಸು ಬಿಸಿಲಲ್ಲಿ ತಾಪ ತೆಗಿಯಬೇಕು. 'ಸತ್ತಿರ್ಲಿ ಎಲ್ಲವೂ ಇದ್ದ ಹಾಂಗೆ' ಅಂದುಕೊಳ್ಳುತ್ತ ಚಿಕ್ಕಿ, ಬರಬರ ಎರಡು ಚೊಂಬು ಮಿಂದು, ತಲೆಬಾಚಿ, ಅಡರಾ ಬಡರಾ ಸೀರೆ ಸುತ್ತಿಕೊಂಡು, ನಾಲ್ಕಾರು ಕ್ಯಾನುಗಳಿಗೆ ಹಾಲು ಅಳೆದು, ಎಲ್ಲದಕ್ಕೂ ಮರೆಯದೆ ಒಂದೊಂದು ಲೋಟ ನೀರು ಸೇರಿಸಿ, ಕ್ಯಾನುಗಳನ್ನೆಲ್ಲ ಕೈ ಚೀಲಕ್ಕೆ ತುಂಬಿ, ಚಪ್ಪಲಿ ಮೆಟ್ಟಿದಾಗ ದಿನು, ಮಾತಿಲ್ಲದೆ ಅವಳನ್ನು ಹಿಂಬಾಲಿಸಿದ.

ಬ್ಯಾಡ ಬ್ಯಾಡಂದ್ರೂ, ಹಿಂಬಾಲಿಸಿ ಬರುವ ನೆನಪುಗಳ ಭಾರ ಹೊತ್ತು ಮನೆ ಮುಂದಿನ ಘಟ್ಟ ಏರುತ್ತಿರುವಾಗಲೇ ದೂರದಲ್ಲೆಲ್ಲೊ ಬಸ್ಸಿನ ಸದ್ದು. ಹಾಲಿನ ಚೀಲವನ್ನು ಮಗನ ಕೈಗೆ ದಾಟಿಸಿದ್ದೇ, ಚಿಕ್ಕಿ ನಿಜಕ್ಕೂ ಓಡತೊಡಗಿದಳು. ಓಡಿ ಬಸ್ ಸ್ಟಾಪ್ ತಲುಪುವುದಕ್ಕೂ, ಬಸ್ಸು ಬಂದು ನಿಲ್ಲುವುದಕ್ಕೂ ಸರಿಯಾಯಿತು. ಯಾವತ್ತೂ ದಿನ ತುಂಬಿದ ಬಸುರಿಯಂತೆ ತುಂಬಿಕೊಂಡಿರುತ್ತಿದ್ದ ಬಸ್ಸು, ಇವತ್ತೇಕೊ ಖಾಲಿಯಿರುವದು ಕಂಡು, 'ಹಯ್ಯಪ್ಪ! ಸದ್ಯ' ಅನ್ನಿಸಿ, ಮಗನ ಕೈಯಿಂದ ಕೈ ಚೀಲಗಳನ್ನಿಸಿದುಕೊಂಡು ತೊಡೆಯ ಮೇಲಿರಿಸಿ ಕುಳಿತುಕೊಂಡಾಗಲೂ, ಏನ್ ಮಾಡ್ಲಿ? ಈಗೇನ್ ಮಾಡ್ಲಿ? ಎಂಬ ಗೊಂದಲ ಕಾಡುತ್ತಿದೆ. ಏನಾ

ದರೂ ಮಾಡಲೇಬೇಕೆ? ಎಂಬ ಅನುಮಾನ ಎದೆಯಲ್ಲಿ ಕೈ ಹಾಕಿ ಎಳೆದಾಡುತ್ತಿದೆ... ಎಷ್ಟಂದ್ರೂ, ತಾನೇ ಬಸಿರಾಗಿ, ಹೆತ್ತು, ಹಾಲುಣಿಸಿ ಬೆಳೆಸಿದ ಮಗ. ತಾನಿಷ್ಟೆಲ್ಲ ಕಷ್ಟಪಟ್ಟಿದ್ದಾದ್ರೂ ಮತ್ಯಾಕೆ? ತನ್ನ ಕಷ್ಟ ತನ್ನ ಮಕ್ಳಿಗೆ ಬರಬಾರ್ದು. ತನ್ನ ದುಃಖದ ಝಳ ತನ್ನ ಮಕ್ಳು ಮರಿಗೆ ತಾಗಬಾರ್ದು, ಅವ್ರು ಸುಖವಾಗಿರ್ಬೇಕು. ಅವ್ರು ಸೂಡಿದ ಹೂ ಬಾಡ ಬಾರ್ದು. ಅವ್ರು ಮಕ್ಳು ಮರಿ ಕಂಡು, ನಾಕು ಕಾಲ ಗನಾತ್ನಾಗಿ ಬದುಕಿಕೊಂಡು ಹೋಗ್ಬೇಕು ಎಂದೇ ಅಲ್ಲವೆ-ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಒಂದೇ ಸೂರಿನಡಿಗೆ ಬದುಕಲು ಸಾಧ್ಯವಿಲ್ಲ ವೆಂದಾಗ, ಆತು ತಮಾ, ನಿಮ್ಮ ನಿಮ್ಮ ಪಾಲು ನೀವು ತಗಂಡು ನಿಮ್ಮ ನಿಮ್ಮಷ್ಟಕ್ಕೆ ನೆರುಂಬ್ಸಾಗಿ ಇರಿ, ಎಂದು ಹಿಸೆ ಮಾಡಿ ಕೊಟ್ಟಿದ್ದು? ಅದರಲ್ಲೂ, ಕಟ್ಟಿದ ಮನೆಯನ್ನು ಅವರಿಬ್ಬರಿಗೆ ಬಿಟ್ಟುಕೊಟ್ಟು, ಮುದುಕ-ಮುದುಕಿ ಹಿತ್ತಿಲ ತುದಿಯ ಸೌದೆಕೊಟ್ಟಿಗೆಯಲ್ಲಿ ಬಿಡಾರ ಹೂಡಿದ್ದು?... ಕಾಗೆ, ನಾಯಿ ಕಾಟ ತಾಳಲಾರದೆ, ಅವಳೇ ಒಂದೊಂದೇ ಬುಟ್ಟಿಯಾಗಿ ದರೆಯ ಮಣ್ಣು ತಂದು ಎದೆಯೆತ್ತರದ ಗೋಡೆ ಮೆತ್ತಿದ್ದು?

ಏನೇ ಆದ್ರೂ, ಇವ್ರು, ತನ್ನ ತಂದೆತಾಯಿ, ತಮಗಾಗಿ ಇವರು ಇಷ್ಟು ವರ್ಷ ಕಷ್ಟಪಟ್ಟಿದ್ದಾರೆ ಅನ್ನೊ ತನುಕರಣ ಸಾಯ್ಲಿ, ಹಣ್ಣಾದ ಕೂದಲಿಗೆ, ಕಳೆದ ಆಯುಷ್ಯಕ್ಕೆ ಕಿಮ್ಮತ್ತು ಕೊಡುವಷ್ಟೂ ಮನುಷ್ಯತ್ವ ಉಳಿದಿಲ್ಲವೆಂದಾದರೆ ಏನ್ ಮಾಡಿ ಏನು ಬಂದ್ಹಾಂಗಾತು? ಎಲ್ಲಾ ಹಣೆಬರಾ ಅಷ್ಟೆ.

ನಿನ್ನೆ ಆದ್ದದ್ದಿಷ್ಟು. ಒಂದು ತೆಂಗಿನ ಮರದ ಕಾಯಿ ಕೊಯ್ಸಿದ ನೆವ ತೆಗೆದು ತನ್ನ ಕಣ್ಣೆದುರಿಗೇ ದಿನೂಗೆ ದನಬಡಿತ ಬಡಿದುಬಿಟ್ಟ! "ಅಯ್ಯಯ್ಯೊ, ಬ್ಯಾಡ ಬಿಟ್ಬಿಡೊ, ನಿನ್ನ ದಮ್ಮಯ್ಯ ಹೊಡಿ ಬ್ಯಾಡ್ವೊ-ಏ ತಮಾ ಬಿಟ್ಬಿಡೊ" ಎಂದು ತಾನು ಕೂಗಿಕೊಂಡರೂ ಕೇಳದೆ ಬಡಿಯುವದೊಂದೇ ಮಾಡ್ತಾ ಇದ್ದಾಗ ತಾಯಿಯಾದವಳು ಸುಮ್ನೆ ನೋಡ್ತಾ ನಿಂತಿರಬೇಕಿತ್ತೆ? ಇಲ್ಲಾ, ಇನ್ನೂ ನಾಲ್ಕು



ಹಾಕು ಎಂದು ಬಡಿಗೆ ತಂದುಕೊಡಬೇಕಿತ್ತೆ?. ಅದೇನೂ ಸಾಧ್ಯವಿಲ್ಲದೆ ಹೊಡೆದಾಟ ಬಿಡಿಸಲು ಹೋಗಿದ್ದಷ್ಟು ನೆನಪು. ಬೆನ್ನಿಗೆ ಏನೊ ಭಯಂಕರ ಪೆಟ್ಟು, ಬಂದು ಬಂದು ಮೂರು ಸಲ ಬಡಿದದ್ದೊಂದು ನೆನಪು. ಮುಂದೇನಾಯಿತೆಂದು ಗೊತ್ತೇ ಆಗದೆ ''ಅಪ್ಪಯ್ಯೊ'' ಎಂದು ಕೂಗುತ್ತ, ಜೀವದಾಸೆ ಬಿಟ್ಟು ಓಡಿ ಮುಂದಿನ ಪೆಟ್ಟಿನಿಂದ ತಪ್ಪಿಸಿಕೊಂಡಳು. ಆದರೆ ಅಲ್ಲೇ ನಿಂತಿದ್ದ ಗಂಡನಿಗೆ, ತಪ್ಪಿಸಿಕೊಳ್ಳಲು ಸಾಧ್ಯವಾಗದೇ, ಪಕ್ಕೆಲು ಮುರಿ ಹೊಡೆತ ಬಿತ್ತು.

ಆಯಿತು. ಮೈಕೈ ನೋವಿಗೆ ಹತ್ತು ಗುಳಿಗೆ ತಿಂದರೆ ಗುಣವಾದೀತು. ಆದರೆ ಮನಸ್ಸಿಗೆ ಬಿದ್ದ ಪೆಟ್ಟು?

ಹೆತ್ತ ತಂದೆತಾಯಿಗೆ, ವಿನಾಕಾರಣ ಕಬ್ಬಿಣದ ಸರಳಿಂದ ಹೊಡೆದ ಅವನ ಕೈ ಕಾಲು ಮುರಿದು ಕುಂಡ್ರಿಸಬೇಕು ಎಂದು ಆ ಮನಸ್ಸು ಹಲ್ಲು ಕಡಿಯುತ್ತದೆ, ಬೇಡ, ಹಾಗನ್ನಬೇಡ, ಅನ್ನುತ್ತಲೇ ಅವ್ನ ಹೆಂಡ್ತಿ ರಂಡೆಯಾಗ್ಲಿ, ಅವ್ನ ಮಗನಿಗೆ ಹಾವು ಕಚ್ಚಲಿ, ಅವ್ನ ಮನೆ ಮಂಜಾಮಾಗ್ಲಿ... ಎಂದು ಶಪಿಸುತ್ತದೆ. ಇಲ್ಲ ಹಾಗಲ್ಲ, ಅವ್ನ ಪೋಲಿಸ್ರಿಗೆ ಹಿಡಿದುಕೊಟ್ಟು ನಾಲ್ಕು ಸಮಾ ಇಕ್ಕಿಸಬೇಕು ಎಂದು ಬುಸುಗುಟ್ಟುತ್ತಿದೆ... ಥೂ ಥೂ ಸೊಡ್ಲೆ ಜನ್ಮವೆ! ಏನೇ ಮಾಡಿದ್ರೂ, ಮನೆ ಮಜ್ಜಿಗೆ ತಗೊಂಡ್ಹೋಗಿ ಬೈನೆ ಮರದಡಿಗೆ ಕುಂತು ಕುಡಿದ್ಹಾಂಗೆ ಅಲ್ವೇನೆ, ಮಳ್ಳು?... ಎಂದು ಮರುಕ್ಷಣದಲ್ಲೇ ಅಳತೊಡಗುತ್ತದೆ...

''ಯಾರ್ರೀ ಸುಂಕದಕಟ್ಟೆ?'' ಎಂಬ ಕಂಡಕ್ಟರನ ಕೂಗಿಗೆ ಎಚ್ಚೆತ್ತ ಪದ್ದು ಚಿಕ್ಕಿ, ದಡಬಡ ಕೈಚೀಲ ಹೊತ್ತು ಕೆಳಗಿಳಿದು, ''ದಿನೂ ನೀನಿಲ್ಲೇ ನಿಂತ್ಕ. ನಾನು ಹಾಲು ಕೊಟ್ಟು ಬರ್ತೇನೆ'' ಅಂದಾಗ ಹನ್ನೊಂದರ ಬಿಸಿಲು ಚುರುಗುಟ್ಟುತ್ತಿತ್ತು. ಎಂಟು ಮನೆಗಳ ಬಾಗಿಲು ತಟ್ಟಿ, ಲೀಟರು-ಅರ್ಧಲೀಟರು ಹಾಲು ಅಳೆದು, ಅವರಂದಿದ್ದಕ್ಕೆಲ್ಲ 'ಹಾಂಹೂಂ' ಅಂದು, ಮತ್ತೆ ಮಗನನ್ನು ಕೂಡಿಕೊಳ್ಳುವಾಗ ಇಸ್ಸರ್ಧ ತಾಸು ಸರಿದುಹೋಯಿತು. ಅಲ್ಲಿಂದ ಸೀದಾ ಹೊರಟು, ಎಂದೆಂದೂ ತುಳಿದಿರದ ಪೋಲೀಸಠಾಣೆಯ ಮೆಟ್ಟಲು ಹತ್ತುತ್ತಿರುವಾಗಲೇ, ''ಥೂ ಥೂ, ಯಾಕ್ ಬಂದ್ದೆ ಇಲ್ಲಿ? ನಮ್ಮಂಥವ್ರು ಬರೋ ಜಾಗವೇನೆ ಇದು?'' ಎಂಬ ಹಿಂಜರಿಕೆ ಶುರುವಾಗಿ, ಮಗನ ಹಿಂದೆ ಹಿಂದೇ ಅಡಗುತ್ತ ಮುನ್ನಡೆದಳು.

ಪುಣ್ಯಕ್ಕೆ ಮಗನ ಪರಿಚಯದ ಪೊಲೀಸ್ ಅಲ್ಲೇ ಇದ್ದವನು, ಇವರ ಮುಖ ಕಂಡು ಏನು ಎಂಬಂತೆ ಹುಬ್ಬೇರಿಸಿದಾಗ, ಅವನ ಹತ್ತಿರ ನಿಂತು, ತಾಯಿ, ಮಗ ಹೆದರುತ್ತಲೇ, ನಿನ್ನೆ ನಡೆದ ಪ್ರಸಂಗವನ್ನೆಲ್ಲ ವರದಿ ಒಪ್ಪಿಸಿ, ದೊಡ್ಡವನ ವಿರುದ್ಧ ದೂರುಬರೆಸಿ, ''ನೀವೇನೂ ಚಿಂತೆ ಮಾಡ್ಬೇಡಿ ಅಮ್ಮ, ನಾವೆಲ್ಲ ಬಂದೋಬಸ್ತ್ ಮಾಡ್ತೇವೆ'' ಎಂಬ ಸಾಹೇಬರ ಭರವಸೆಯೊಂದಿಗೆ ಬಸ್‌ಸ್ಟಾಪಿಗೆ ಬಂದು ನಿಂತರೆ, ಬಸ್ಸಿನ ಸುಳಿವಿಲ್ಲ. ಹಾಗೇ ವಾರೆನೋಟದಿಂದ ಮಗನ ಮುಖ ನೋಡಿದರೆ, ಅಲ್ಲಿ ರಣ ರಣ ಬಿಸಿಲೊಂದರ ಹೊರತಾಗಿ, ಧಾರೆಗಟ್ಟಿದ ಬೆವರಿನ ಹೊರತಾಗಿ ಇನ್ನೇನೂ ಕಾಣುತ್ತಿಲ್ಲ. ನಿಜಕ್ಕೂ ಅವನ ಮನಸ್ಸಿನಲ್ಲೇನಿದೆ ಎಂಬುದೂ ಗೊತ್ತಾ ಗುತ್ತಿಲ್ಲ.

ಈ ಮಾಣಿ ಖರೇ ಅಂದ್ರೂ, ಅಣ್ಣನ ಕಾಟದಿಂದಾಗಿ ಸೋತು ಹೋಗಿದ್ದಾನೆ. ಅಂವ, ಆ ಕೋಣವ ಉರಿಯೋದು, ಉರಿಯೋದು ಅಂದ್ರೆ, ಅದೆಷ್ಟು ಪರಿ? ಯಾವತ್ತು ಆ ಹೆಂಡ್ತಿ ಅನ್ನೊ ವೇಷ ಒಳಹೊಕ್ಕಿತೊ, ಆವತ್ತೇ ಶುರು, ತಾನು, ತನ್ನ ಹೆಂಡ್ತಿ-ನಂತ್ರ ಹುಟ್ಟಿದ ಮಗ ಮಾತ್ರ ದೇವಲೋಕ, ಉಳಿದವ್ರೆಲ್ಲಾ ಕಾಲಡಿಗಿನ ಕಸ. ಎಲ್ಲೆಲ್ಲಿಂದಲೊ ಬಂದು ಒಂದು ಗೂಡಿನೊಳ ಹೊಕ್ಕು, ಅಲ್ಲಿದ್ದಿದ್ದನ್ನೆಲ್ಲ ತನಗೆ, ತನಗೆ ಎಂದು ಕಚ್ಚಾಡಿ ಹಿಡಿದುಕೊಳ್ಳುವ ಸೊಸೆಯಂದಿರಿಗಿಂತ ಹೆಚ್ಚಾಗಿ, ಒಂದು ತಾಯಿಯ ಹೊಟ್ಟೆಯಲ್ಲಿ ಹುಟ್ಟಿ, ಒಂದೇ ಹಾಸಿಗೆಯಲ್ಲಿ ಮಲಗಿ ಎದ್ದ ಗಂಡು ಮಕ್ಕಳು ಬೆಳೆಯುತ್ತಾಬಂದಂತೆ ಪರಸ್ಪರ

ವೈರಿಗಳಾಗಿಬಿಡುತ್ತಾರೆಂದರೆ-ಹೆತ್ತವರೂ ಕೂಡ ಅವರಿಗೆ ಶತ್ರುಗಳಾಗಿ ಕಾಣುತ್ತಾರೆಂದರೆ-ಇದ್ಯಾವ ವಿಚಿತ್ರವಪ್ಪಾ ಶಿವನೆ!

ಕುಕ್ಕರುಗಾಲಲ್ಲಿ ತುದೀಬಾಳೆಯೆದುರು ಕೂತು ಮಾತಿಲ್ಲದೆ ಹಾಕಿದ್ದು ತಿಂದು ಎದ್ದು ಹೋಗುವ ದಿನೂ ಎಲ್ಲಿ? ಅದು ವಾರೆ, ಇದು ಡೊಂಕು, ದೋಸೆ ಮೆತ್ತ, ಚಾ ತೆಳ್ಳ, ಎಂದೆಲ್ಲ ಗೌಜಿ ಮಾಡಿ ಹೆಂಗಸರ ಕಣ್ಣಲ್ಲಿ ನೀರಿಳಿಸುವ ಶೋಣಪ ಈ ಸದು ಎಲ್ಲಿ?... ಹಾಗೆ ನೋಡಿದರೆ ಮೂರೂ ಮಕ್ಕಳನ್ನು ಒಂದೇ ರೀತಿ ಹೊತ್ತು ಹೆತ್ತು ಸಾಕಿದ್ದು, ಒಂದೇ ರೀತಿ ಅವರನ್ನು ಬೆನ್ನಿಗೆ ಕಟ್ಟಿಕೊಂಡು ತೋಟದ ಕಳೆ ಕಿತ್ತಿದ್ದು, ಒಂದೇ ರೀತಿ ಅನ್ನವಿದ್ದಾಗ ಅನ್ನ-ಇಲ್ಲದಿದ್ದಾಗ ಗಂಜಿ ತುತ್ತು ಮಾಡಿ ತಿನ್ನಿಸಿದ್ದು. ಒಂದೇ ರೀತಿ ಹರಿದ ಅಂಗಿ, ಚಡ್ಡಿಗೆ ತೇಪೆ ಹಚ್ಚಿ ತೊಡಿಸಿದ್ದು. ಒಂದೊಂದು ಬಾಳೆಹಣ್ಣಿಗಾಗಿ ಆಸೆಗಣ್ಣು ಹೊತ್ತು ನೆರೆಮನೆಯೆದುರು ಮಾತಿಲ್ಲದೆ ನಿಂತ ಮೂರೂ ಮಕ್ಕಳನ್ನು ಕರೆದು, ಮೂವರಿಗೂ ಬೆನ್ನುಮುರಿ ಬಡಿದದ್ದು.... ಇಲ್ಲ, ಯಾವುದರಲ್ಲೂ ಎಳ್ಳುಕಾಳಿನಷ್ಟು ಫರಕು ಇಲ್ಲವೇ ಇಲ್ಲ. ಆದರೂ ಆಕ್ಕಾದ ಮಗ-ಆಗದ ಮಗ ಅಂದರೆ...

ಉರಿಬಿಸಿಲ ಸೀಳುತ್ತ ಬಂದ ಬಸ್ಸಿನ ಶಬ್ದಕ್ಕೆ ಈ ಲೋಕಕ್ಕಿಳಿದ ಪದ್ದು ಚಿಕ್ಕಿ, ಪಕ್ಕಕ್ಕೆ ತಿರುಗಿದರೆ ಮಗ ಇಲ್ಲ. ಅವನಾಗಲೇ ಬಸ್ಸಿಗೆ ಕೈ ಮಾಡಿ ನಿಂತಿದ್ದಾನೆ. ನೋಡುತ್ತಿದ್ದಂತೆಯೇ ಬಸ್ಸು ಬಂದು ನಿಂತು, ಇವರಿಬ್ಬರೂ ರಶ್ಶಿನಲ್ಲಿ ಒಳನುಗ್ಗಿ, ಅಂತೂ ಇಂತೂ ಮನೆಯ ಹತ್ತಿರದ ತಂಗುಮನೆಯೆದುರು ಇಳಿದಾಗ ಸೂರ್ಯ ನೆತ್ತಿಯಿಂದ ಕೆಳಗಿಳಿಯುತ್ತಿದ್ದ. "ತಮ್ಮಾ, ಘಂಟೆ ಎಷ್ಟಾತೂ?" ಅಂದರೆ "ಒಂದು" ಅಂದ ತಣ್ಣಗೆ. ಕೇಳಿದ ಚಿಕ್ಕಿ ಮತ್ತಷ್ಟು ತಣ್ಣಗಾಗಿಬಿಟ್ಟಳು. ಇನ್ನು ಮನೆಗೆ ಹೋಗಿ, ಒಲೆ ಹೊತ್ತಿಸಿ, ಅನ್ನಕ್ಕಿಟ್ಟು-ಮೇಲಿಂದ ಸುರಿದುಕೊಳ್ಳಲು ಏನೊ ಒಂದು ಸೋರು ಮಾಡಿ-ಉಣ್ಣುವ ಹೊತ್ತಿಗೆ ಹೊತ್ತು ಸೂರಿಳಿದಿರುತ್ತದೆ, ಸಾಯ್ಲಿ, ಇವತ್ತು ಒಂದಷ್ಟು ಅವಲಕ್ಕಿ ನೆನೆಸಿಕೊಂಡು ತಿಂದ್ರಾಯ್ತು ಅಂದುಕೊಳ್ಳುವಾಗ, ಖಾಲಿಯಾದ ಅವಲಕ್ಕಿ ಡಬ್ಬದ ನೆನಪಾಗಿ ಮತ್ತಷ್ಟು ಸಿಟ್ಟು ಬಂತು. ವೈಶಾಖದ ರಣ ಬಿಸಿಲು, ಕರಕರ ಕೆರೆಯುವ ಖಾಲಿಹೊಟ್ಟೆ, ಇನ್ನೊಂದು ಹೆಜ್ಜೆಯನ್ನು ಎತ್ತಿಡಲಾರೆನೆಂಬಷ್ಟು ಸುಸ್ತು-ಮೇಲಿಂದ ಮನೆಗೆ ಹೋಗಿ ಅನ್ನ ಬೇಯಿಸಿ ತಿನ್ನಬೇಕಾಗಿರುವ ಸಂದರ್ಭ... ಅವಳ ಮೈ ಮುಖವೆಲ್ಲ ಬೆವರಿ ಬೆವರಿ ಒಂದೇ ಧಾರೆಯಾಗಿ, ಜೊತೆಗೆ ಕಣ್ಣೀರೂ ಸೇರಿ ಹರಿದು, ಹರಿದು ನೆಲ ಮುಟ್ಟಿತು.

ಹಾಗೆ ನೆಲಕ್ಕಿಳಿದ ಕಸುವನ್ನೆಲ್ಲ ಒಟ್ಟುಗೂಡಿಸಿ, ಹೇಗೊ ಮೇಲೆತ್ತಿ, ಒಲೆಹೊತ್ತಿಸಿ, ಅನ್ನ ಬೇಯಿಸಿ, ಮೇಲಿಂದ ಒಂದು ಟೊಮೆಟೊ ಸಾರು ಕುದಿಸಿ, ಬೆಳಗಿನ ಎಂಜಲು ಬಾಳೆಯ ಪಕ್ಕದಲ್ಲೇ ಈಗ ಊಟದ ಬಾಳೆಯನ್ನು ಹಾಕಿಕೊಂಡು ಮೂವರೂ ಉಂಡು ಮೇಲೇಳುವಾಗ ಮೂರು ಘಂಟೆ. ಇಲ್ಲ, ಇನ್ನು ಏನೇನೂ ಸಾಧ್ಯವಿಲ್ಲ ಅಂದುಕೊಳ್ಳುತ್ತಲೇ ಬಾಳೆ ಒಗೆದು, ಎಂಜಲು ಸಾರಿಸಿ, ಪಾತ್ರೆಯನ್ನೆಲ್ಲ ಬಚ್ಚಲಲ್ಲಿ ಒಟ್ಟಿ, ಒಲೆಯ ಬಿಸಿಯಿಂದ ದೂರ ಸರಿದು, ಬರಿ ನೆಲದಲ್ಲೇ ಬಿದ್ದುಕೊಂಡ ಚಿಕ್ಕಿಗೆ, ಈ ಬದಿಯ ಖಬರಿಲ್ಲದ ನಿದ್ದೆ. ಈ ನೆಲದ ಜಗಳ ರಂಪಗಳೆಲ್ಲವನ್ನೂ ಸುಳ್ಳಾಗಿಸಿಬಿಟ್ಟ ನಿದ್ದೆ. ಪದ್ದು ಚಿಕ್ಕಿ ಅಂದರೆ ಕೇವಲ ಉಸಿರಾಟ ಮಾತ್ರವಾಗಿಬಿಟ್ಟ ನಿದ್ದೆ. ಎಷ್ಟು ಹೊತ್ತಾಯಿತೊ...

ಅಂಥಾ ಘನ ಘೋರ ನಿದ್ರೆಯಲ್ಲೂ, ಎಲ್ಲೊ ಯಾರೊ ಅಳುವ ಸದ್ದು. ಯಾರೊ ಯಾರಿಗೊ ಬೈದ-ಬಡಿದ ಸದ್ದು. ಯಾವುದೊ ಗಾಡಿಯ "ಭರ‍್ರೋ" ಆವಾಜು. ಛಕ್ಕನೆ ಕಣ್ಣು ಬಿಟ್ಟ ಚಿಕ್ಕಿ, ಬಡಕ್ಕನೆ ಮೇಲೆದ್ದು ಅರೆನಿದ್ರೆಯಲ್ಲೇ ಬಾಗಿಲಲ್ಲಿಣುಕಿದಳು. ಹೌದು, ಸದಾನಂದ! ಅಂಗಳದೆದುರು ಪೊಲೀಸ್ ಜೀಪು ನಿಂತಿದೆ, ಇಬ್ಬರು ಪೇದೆಗಳು ಅವನ ಕೈಹಿಡಿದೆಳೆದು ಜೀಪಿಗೆ ತುಂಬುತ್ತಿದ್ದಾರೆ, ಅವನ ಹೆಂಡತಿ, ಮಗ ಇಬ್ಬರೂ, "ಅಯ್ಯಯ್ಯೆ-ಅಯ್ಯಯ್ಯೆ" ಕೂಗುತ್ತಿ



ದ್ವಾರೆ..... ಅಹ್! ಹೆಂಗಾತೋ ಘೋಷಣಿ? ಹೆಂಗಾತೂ ಅಂದೆ, ಹೆತ್ತ ಅಪ್ಪ ಅಪ್ಪೆಗೇ ಬಡಿದವ್ರು ಯಾವತ್ತು ಉದ್ಧಾರಾಗೋದಿಲ್ಲ ಅಂದೆ. ನೀನೇನು ಮಹಾ ಮೇಲಿಂದ ಇಳಿದು ಬಂದವನೇನೊ ಮನಸಿಗೆ ಕಂಡ್ಹಾಂಗೆ ಮೆರಿಲಿಕ್ಕೆ? ಕನಿಷ್ಠ ಹಿರಿಯ ಕಿರಿಯ ಅನ್ನೋದಾದ್ರೂ ಬೇಡವೇನೊ ಕುನ್ನಿ?.... ಹೋಗು, ಹೋಗು ಅವ್ರ ಕೈಲಿ ನಮಾ ಲತ್ತೆ ತಿನ್ನು. ಕೊಬ್ಬೆಲ್ಲಾ ಕರಗಲಿ... ಹುಂ, ಮಾಡಿದಂವ ಉಣತಾ ಮನೆಯಂಥ ಕಡುಬ-ಸರೀಯಾತು ತಗ.... ಅವಳು ಹಿಂತಿರುಗಿದರೂ, ಯಾಕೊ ಮನಸ್ಸು ತಿರುಗಲೊಲ್ಲದು. ನಾಲಿಗೆ ಎಷ್ಟೇ ಬೈದುಕೊಂಡರೂ, ಹೊಟ್ಟೆಯ ಒಳಾ ಒಳಗಿನ ಯಾವುದೊ ದನಿ, 'ಅಯ್ಯೊ-ಅಯ್ಯೊ' ಮಾಡುವುದನ್ನು ಬಿಡಲೊಲ್ಲದು.

ಅದನ್ನೆಲ್ಲ ಅಲ್ಲಲ್ಲಿಗೇ ಬಿಟ್ಟು ಚಿಕ್ಕಿ, ತನ್ನ ಹ್ವಾರ್‍ಯಕ್ಕೆ ಹೊರಡುವಾಗ, ಪಕ್ಕದಲ್ಲೇ ನಿಂತು ಆ ಮನೆಯತ್ತಲೇ ನೋಡುತ್ತಿದ್ದ ದಿನೂ ಮತ್ತು ಅವನಪ್ಪನನ್ನು ಕಂಡು ಏನೊ ಕಸಿವಿಸಿ. ಏನೊ ತಳಮಳ. ಅದರಲ್ಲೂ ಅಪ್ಪನ ಕಣ್ಣಲ್ಲಿ, 'ಆತ? ನಿಂಗೊಳ್ಳೇ ಸಂತೃಪ್ತಿ ಆತ? ಹೋಗು, ಹೊಟ್ಟೆ ತುಂಬಾ ಹಾಲು ಕುಡಿ' ಅನ್ನುವ ಭಾವ ಜಿನುಗುತ್ತಿರುವದನ್ನು ಕಂಡು ಅಲ್ಲಿ ನಿಲ್ಲಲಿಕ್ಕಾಗದೇ ಒಳ ನಡೆದುಬಿಟ್ಟಳು.

ದಿನದಂತೆ ಸಂಜೆಯಾಯಿತು. ದನಕರುಗಳಿಗೆ ಹುಲ್ಲು, ಅಕ್ಕಚ್ಚು ಹಾಕಿ, ಹಾಲು ಕರೆದು, ಕಾಯಿಸಿ, ಹೆಪ್ಪು ಹಾಕುವುದರೊಂದಿಗೆ-ಒಂದು ಅನ್ನ ಬೇಯಿಸಿ ಪಳದ್ಯ ಕುದಿಸುವದರೊಂದಿಗೆ, ಮಾತಿಲ್ಲದೆ ಮೂವರೂ ತಲೆತಗ್ಗಿಸಿ ಉಣ್ಣುವದರೊಂದಿಗೆ ರಾತ್ರಿಯಾಯಿತು. ಎಂಜಲು ಮುಸುರೆ ಮಾಡಿ ಮುಗಿಸಿ, ಹಾಸಿಗೆ ಬಿಚ್ಚುವಾಗ ಅವಳು, ಯಾಕೆಂದು ಗೊತ್ತಿಲ್ಲದೆ ಅಂಗಳಕ್ಕೆ ಹೋದರೆ ಯಾರದೊ ಬೈಕಿನಲ್ಲಿ ಸದೂನ ಹೆಂಡತಿ ಮಗನನ್ನು ಮುಂದಿಟ್ಟುಕೊಂಡು ಹೊರಟಿದ್ದು ಕಂಡು, ಈ ಅಪರಾತ್ರಿಯಲ್ಲಿ ಎಲ್ಲಿಗಪ್ಪಾ ಎಂಬ ಕುತೂಹಲದೊಂದಿಗೆ, ಅವರ್‍ಯಾರೂ ಇನ್ನೂ ಉಂಡಿರಲಿಕ್ಕಿಲ್ಲವೆಂಬ ವಾಸ್ತವ ಫಕ್ಕನೆ ನೆನಪಾಗಿ ಎದೆ ಝಲ್ಲೆಂದಿತು... ಅರೆ, ನಂದೇನು ತಪ್ಪು? ಅಂವ ಮಾಡಿದ್ದು ಅಂಥಾ ಕೆಲ್ಸ. ಮಗ ಆಗ್ಲಿ-

ಮೊಮ್ಮಗ ಆಗ್ಲಿ ಮಾಡಬಾರದ್ದು ಮಾಡಿದರೆ ಆಗಬಾರದ್ದು ಆಗೋದೆ ಸೈ. ನೋಡ್ಲಿ, ಅಂವಂಗೂ ಹೊಡ್ತದ ರುಚಿ ಗೊತ್ತಾಗ್ಲಿ ಹಂ, ಎಂದು ಮತ್ತೊಮ್ಮೆ ಅವಡುಗಚ್ಚಿ, ಆ ಸೆಕೆಯಲ್ಲೂ ಚಾದರ ಎಳೆದು ಮುಖ ಮುಚ್ಚಿಕೊಂಡಳು.

ಆದರೆ ಮುಸುಕಿನೊಳಗಿನ ಎವೆಗಳು ಕ್ಷಣ ಮಾತ್ರಕ್ಕೂ ಮುಚ್ಚದೆ, ಆಚೀಚೆ ಹೊರಳುತ್ತ, ಒಮ್ಮೆ ಧಡಕ್ಕನೆ ಎದ್ದು ಕೂತು ಮತ್ತೆ ಮಲಗಿ ಹುಶ್‌ಗರೆಯುತ್ತ, ಶಿವ್ ಶಿವಾ! ಇದೇನಾಗಿ ಹೋತು? ಏನ್ಮಾಡಿಬಿಟ್ಟೆ? ತನ್ನಿಂದ ತಪ್ಪಾಗಿ ಹೋಯಿತೊ ಅಥವಾ ಅವನ ತಪ್ಪಿಗೆ ಸರೀ ಶಿಕ್ಷೆಯಾಯಿತೊ?... ಪೊಲೀಸರೆಂದರೆ ಮೊದಲೇ ಯಮನ ಮನುಷ್ಯರು. ಸುಟ್ಟ ಪೋರನಿಗೆ ಕುಡ್ತೇ ನೀರಾದರೂ ಕೊಟ್ಟರೊ ಇಲ್ಲವೊ?... ಅದೆಷ್ಟು ಬಡಿದರೊ... ಹೊಡೆದರೊ... ಕೈಕಾಲು ಮುರಿದು ಹಾಕಿದರೊ... ಒಂದೂ, ಎರಡಕ್ಕೂ ಬಿಟ್ಟರೊ ಇಲ್ಲವೊ?... ಒಳಬಾಯಲ್ಲೇ ಹಲುಬಿ ಹಲುಬಿ, ಪಕ್ಕದ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ ಗಂಡನ ಮೌನದ ಬಗ್ಗೆ ಅಲ್ಲೇ ಸಿಟ್ಟೇರಿ, ಗೊರಕೆ ಹೊಡೆಯುತ್ತಿರುವ ದಿನೂ ಬಗ್ಗೆ ಮತ್ತಷ್ಟು ಕೆಂಡಕಾರಿ, ಯಾವಾಗ ಕಣ್ಣು ಮುಚ್ಚಿತ್ತೊ.... ಬಿಟ್ಟಾಗ ಬಿಸಿಲ ಕುಡಿ ಕಣ್ಣರಿಯುತ್ತಿತ್ತು. ಗಡಬಡಿಸಿ ಎದ್ದು ವಾಚು ನೋಡಿದರೆ ಆರೂವರೆ!

ದೇವ್ರೆ, ದೇವ್ರೆ, ಅನ್ನುತ್ತ, ಕಸಬರಿಗೆ ಹಿಡಿದ ಚಿಕ್ಕಿ, ಬಾಗಿಲು ಸಾರಿಸಿ, ಬಗ್ಗಿ ರಂಗೋಲಿ ಇಡುವಾಗ, ಎಡಬದಿಗೆ ನಿಂತ ಸರಳೆ ಅಂದರೆ ಸದೂನ ಹೆಂಡತಿಯನ್ನು ಕಂಡು ಬೆಚ್ಚಿ ನೆಟ್ಟಗಾದಳು. ಸರಳೆಯ ಮುಖವೆಂದರೆ ಕೆಂಪು ದಾಸವಾಳದ ಹೂವಾಗಿಬಿಟ್ಟಿದೆ. ಕಣ್ಣು, ಮೂಗಿಂದ ಗಂಗೆ ಯಮುನೆಯರು ಹರಿಯುತ್ತಿದ್ದಾರೆ. ಏನೊ ಹೇಳಲು ತೆರೆದ ತುಟಿ ಥರಗುಟ್ಟುತ್ತಿದೆ.

ಥರಗುಟ್ಟಲಿ ನನಗೇನಂತೆ, ಕಳ್ಳ ಮೂಳಿನ್ನ ತಂದು, ಈ ಅತ್ತೆ ಅಂದ್ರೆ ಶುದ್ಧ ಕತ್ತೆ ಅಂತ ತಿಳ್ಕಿದ್ದಾಳೆ, ಬೇಕಾದ್ದು ಹಾಳ್ ಬಡುಕೊಂಡು ಹೋಗ್ಲಿ... ಸರ್ರನೆ ತಿರುಗಿ ಒಳಹೊರಟರೆ, ಯಾಕೊ ಕಾಲು ಮೇಲೇಳಲೇ ಇಲ್ಲ. ಸೊಸೆಯ ಕಣ್ಣಿಂದ ಕಣ್ಣು ಕೀಳಲು ಸಾಧ್ಯವಾಗಲೂ ಇಲ್ಲ. ಒಂದು ಕ್ಷಣ- ಒಂದೇ ಒಂದು ಕ್ಷಣದ ಪರಸ್ಪರ ಕಣ್ಣ ತಿವಿತದಲ್ಲಿ, ಅತ್ತೆ ಸೊಸೆಯರ ದೃಷ್ಟಿ ಯುದ್ಧದಲ್ಲಿ, ಯುಗಾಂತರಗಳ ಹೆಣ್ಣುಗಳ ಪಾಡು ಹಾದು ಹೋಯಿತೊ-ಮನುಷ್ಯನೊಳಗಿನ ಸ್ವರ್ಗ ನರಕಗಳು ಪರಸ್ಪರ ಢೀ ಕೊಟ್ಟು ಉರುಳಿಬಿದ್ದವೊ... ಯಾರಿಗೆ ಗೊತ್ತು? ಸೊಸೆ ಬಾಯಿಗೆ ಸೆರಗು ಒತ್ತಿಹಿಡಿದು, ಥಟ್ಟನೆ ಹಿಂತಿರುಗಿ ನಡೆದುಬಿಟ್ಟಾಗ, ಚಿಕ್ಕಿ ಕಂಗಾಲು.

'ಕತೆ ಏನಾಗಿದೆ ಹಾಗಿದ್ರೆ? ಅವಳು ಯಾಕೆ ಇಲ್ಲಿ ಬಂದು, ಚಣದ ಮಟ್ಟಿಗೆ ಕಂಬದ್ಹಾಂಗೆ ನಿಂತುಕೊಂಡಿದ್ದು? ಯಾಕೆ ಏನೂ ಹೇಳದೆ ಹಾಗೇ ನಡೆದುಬಿಟ್ಟಿದ್ದು?... ಮೊದಲೇ ಅತ್ತೆ ಸೊಸೆ ಸಂಬಂಧ, ಈಗಂತೂ ಬ್ರಹ್ಮಾಂಡದಂಥ ಸಿಟ್ಟೂ ತುಂಬಿಟ್ಟುಕೊಂಡು ತನ್ನ ಮೇಲೆ ಕಾರಲಿಕ್ಕಾಗಿಯೇ ಕಾಯುತ್ತಿರಬಹುದು... ಅವನನ್ನು ಬಿಟ್ಟ ಲಕ್ಷಣವಂತೂ ಇಲ್ಲ. ಅದೆಷ್ಟು ಹಿಂಸೆಕೊಟ್ಟರೊ, ಯಾವ್ಯಾವ ಪರಿ ನೋಯಿಸಿದರೊ, ಕೋದಂಡ ಹಾಕಿ ನೇತಾಡಿಸಿದರೊ... ಶಿವನೇ! ಎಂಥಾ ಸಗಣಿ ತಿನ್ನೊ ಕೆಲ್ಸ ಮಾಡಿಬಿಟ್ಟೆ. ಈಗೇನ್ ಮಾಡ್ಲಪ್ಪಾ ದೇವ್ರೆ?....' ಅಲವತ್ತುಕೊಂಡ ಚಿಕ್ಕಿ ಗಡಿಬಿಡಿಯಿಂದ ಕೈಕಾಲು ಓಡಿಸತೊಡಗಿದಳು.

ಗಂಡಸರಿಬ್ಬರಿಗೂ ಏನೂ ಹೇಳದೆ, ದಿನದಂತೆ ಹಾಲಿನ ಕ್ಯಾನುಗಳನ್ನು ಚೀಲಕ್ಕೆ ತುಂಬಿಕೊಂಡು ಬಸ್ಸೇರಿದವಳು, ಪೇಟೆಯಲ್ಲಿಳಿದು, ಎಲ್ಲಾ ಮನೆಗೂ ಹಾಲು ಅಳೆದು, ಸೀದಾ ನಿನ್ನೆ ಹೋದ ಪೊಲೀಸ್‌ಠಾಣೆಯ ಅಂಗಳ ತುಳಿಯುತ್ತಿದ್ದಾಗ, ಹೆಜ್ಜೆ ಹಿಂದೆ ಹಿಂದೇ ಬೀಳುತ್ತಿದೆ. ಆದರೂ ಹೇಗೊ ಮೆಟ್ಟಿಲೇರಿದಾಗ, ನಿನ್ನೆ ಕಂಡ ಸಾಹೇಬರೇ, ''ಬನ್ನಿ ಅಮ್ಮಾ'' ಅಂದರು. ಅವರ ಖುರ್ಚಿಯ ಹತ್ತಿರ ಮಾತಿಲ್ಲದೆ

ಒಂದು ಕ್ಷಣ ನಿಂತಂತೆ, ಅವರೇ, ''ಸರೀ ಬುದ್ಧಿ ಕಲ್ಸಿದೇವೆ, ಇನ್ಯಾವತ್ತೂ ಆತ ನಿಮ್ಮ ಸುದ್ದಿಗೆ ಬರೋದಿಲ್ಲ ಬಿಡಿ'' ಅಂದಾಗ ಮೆಲ್ಲಗೆ ''ನಾನವನ ನೋಡಬಹುದಾ?'' ಅಂದು, ತಟ್ಟನೆ ನಾಲಿಗೆ ಕಚ್ಚಿಕೊಂಡಳು.

''ಓಯಸ್, ಏ ಗುರುಪಣ್ಣ ಇವ್ರನ್ನು ಒಳಗೆ ಕರ್ಕೊಂಡ್ಹೋಗು'' ಅನ್ನುತ್ತಿದ್ದಂತೆ ಬಂದ ಗುರುತಿನ ಪೋಲೀಸು, ಒಂಥರಾ ಮುಖ ಮಾಡಿ, ''ಬನ್ನಿ'' ಅಂದ.

ಹೋಗಿ ನೋಡಿದರೆ, ಕೊಟ್ಟಿಗೆಯಂಥ ಕೋಣೆಯಲ್ಲಿ ಅವನೇ-ತನ್ನ ಚೊಚ್ಚಲು ಕಂದನೇ-'ಹತ್ತು ಸಾವಿರವಾಗು, ಕಿತ್ತಳೆ ವನವಾಗು, ಬಪ್ಪವರಿಗೆ ತವರು ಮನೆಯಾಗು' ಎಂದು ದಿನಂಪ್ರತಿ ಹರಸಿ ಬೆಳೆಸಿದವಳಿಗೆ ಕೈಯೆತ್ತಿ ಬಡಿವ ಆ ಬಹದ್ದೂರನೇ, ದೊಣಕಲಿಗೆ ಕಟ್ಟಿದ ಎಮ್ಮೆಯಂತೆ ಕುಳಿತುಕೊಂಡಿದ್ದಾನೆ... ಹೆಜ್ಜೆ ಸಪ್ಪಿಗೆ ತಿರುಗಿದವನು, ಇವಳ ಮುಖ ಕಂಡಿದ್ದೇ ಛಪ್ಪನೆ ಎದ್ದುನಿಂತು, ''ಬಂದ್ಯ? ಇಲ್ಲಿಗೂ ಬಂದುಬಿಟ್ಯ ಚಂದ ನೋಡ್ಲಿಕ್ಕೆ? ನೋಡು, ನೋಡಿ ಹೊಟ್ಟೆ ತುಂಬಾ ಹಾಲು ಹುಯ್ಕೊ ಹೋಗು. ಆದ್ರೆ ನಾ ನಿನ್ನ ಸುಮ್ನೆ ಬಿಡೋದಿಲ್ಲ. ಮೊದ್ಲು ನಾ ಹೊರಬಂದುಕೊಳ್ತೇನೆ. ನಂತ್ರ ಏನ್ಮಾಡ್ತೇನೆ ಅಂತ ನಂಗೇ ಗೊತ್ತಿಲ್ಲ. ನೆನಪಿಟ್ಕ...'' ಕೂಗಿ ಕಣ್ಣು ಕೆಕ್ಕರಿಸಿದ ಅಬ್ಬರಕ್ಕೆ ಅವಳು ತಣ್ಣಗಾದಳು.

....ಅವನ ಬಸಿರಿನಲ್ಲಿ, ಮಿಂದ ಒಂದೂವರೆ ತಿಂಗಳಿಗೇ ಅದೇನೊ ಆನಂದ, ಸಂಭ್ರಮ, ಶಾಂತಿ. ತಲೆ ತಿರುಗುವಿಕೆಯ ಸಂಕಟವಲ್ಲೂ ಅದೇನೊ ಸಂತೋಷ. ಆಮೇಲೆ, ಮೊದಲ ಬಾರಿಗೆ ಹೊಟ್ಟೆಯೊಳಗೊಂದು ಜೀವ ಮಿಸುಕಾಡಿ, ಒದ್ದಾಗ ಅದೇನೊ ವಿಚಿತ್ರ ಖುಶಿ. ಓಡಿಯಾಡೊ ಹುಡುಗನ ಹಾವಳಿಗೆ ಬೇಸತ್ತು ಇವಳು ಒಂದು ಹೊಡೆದರೆ, ಅವನು ಹತ್ತು ಹೊಡೆಯುವವನು, ಇವಳು ಒಂದು ಬೈದರೆ ಅವನು ನೂರು ಬೈಯ್ಯುವವನು. ಆಗಲೂ ಒಂಥರಾ ಆನಂದವೇ. ಶಾಲೆಯಲ್ಲೂ ಅಷ್ಟೆ. ಕ್ಲಾಸಿನ ಹುಡುಗರೊಂದಿಗೆ ಗುದ್ದಾಡಿ ಮೊಣಕಾಲೆಲ್ಲ ಗಾಯ ಮಾಡಿಕೊಂಡು ಬಂದಾಗ, ಬೈಯುತ್ತಲೇ ಔಷಧ ಹಚ್ಚಿದರೂ ಒಳಗೊಳಗೆ ಮಗನ ಸಾಹಸಕ್ಕಾಗಿ ಹೆಮ್ಮೆಯಿರುತ್ತಿತ್ತು. ಕಲ್ಲರೆಯ ಮೇಲೆ ಬಿಟ್ಟರೂ ಮಗ ಜೈಸಿಕೊಂಡು ಹೋದಾನು ಎಂಬ ಗರ್ವವಿತ್ತು. ಆದರೀಗ?....

ತಣ್ಣಗೆ ಮಗನೆದುರಿಂದ ಹೊರಡುವಾಗ, ಕರುಳ ಬುಡದಿಂದ ಸಣ್ಣದಾಗಿ ಏನೊ ಒಂದು ಮೇಲೆದ್ದು, ಇಡೀ ಜೀವವನ್ನೇ ಕಟ್ಟಿ ಎಳೆಯುತ್ತಿರುವ ಭಾಸ. ಇಲ್ಲ, ನೀನಿಲ್ಲಿಂದ ಹೋಗೋದಿಲ್ಲ, ಹೋಗಲಾರೆ ಎಂದು ಯಾವುದೊ ದನಿ ಪಿಸುಗುಟ್ಟಿದ ಭಾಸ.

ಮತ್ತೆ ಸಾಹೇಬರ ಮುಂದೆ ಬಂದು ಸುಮ್ಮನೆ ನಿಂತಾಗ, ಈ ಮುದುಕೀದು ಮತ್ತೇನು ರಿಪಿರಿಪಿ ಯಪ್ಪಾ! ಎಂದು ಅವರಿಗೆ ಸಣ್ಣದಾಗಿ ಸಿಟ್ಟೇರಿ, ಕಣ್ಣೆತ್ತಿ ನೋಡಿದಾಗ ಅವಳು ಹೆದರುತ್ತಲೇ, ''ಸಾಹೇಬ್ರೆ'' ಅಂದಳು.

''ಏನಮ್ಮಾ? ಮಗನ ನೋಡ್ಕೊಂಡು ಬಂದ್ಯಲ್ಲ, ಮತ್ತೇನು?'' ಅಂದರು ಅಸಹನೆಯಿಂದ.

''ಉಹುಂ, ಮತ್ತೇನಿಲ್ಲ. ನಮ್ಮ ಸದೂನ ಇಲ್ಲಿಂದ ಬಿಟ್ಟುಬಿಡ್ಲಿಕ್ಕಾದೀತ ಅಂತ...''

''ಛೆಛೆ, ಇದೊಳ್ಳೇ ಕತೆಯಾಯ್ತಲ್ಲ. ನಿನ್ನೆಯಷ್ಟೇ ಬಂದು, ಮಗ ಹಾಂಗ್ ಹೊಡೆದ-ಹೀಂಗ್ ಬಡಿದ ಅಂತೆಲ್ಲ ಕಂಪ್ಲೇಂಟು ಬರೆಸಿದವ್ರೂ ನೀವೇ, ಈಗ ಸುಮ್ಮನೆ ಬಿಟ್ಟಿಡಿ ಅನ್ನೋರೂ ನೀವೆ. ನಿಮಗೇನು ತಲೆ ಸರಿ ಇದ್ಯೋ ಇಲ್ವೊ?... ಇಲ್ಲಿ ನಾವೇನು ಬಿಟ್ಟಿ ಕುಂತಿದೇವೇನು, ನೀವು ಕುಣಸಿದ್ಹಾಂಗೆ ಕುಣೀಲಿಕ್ಕೆ?... ಅದೆಲ್ಲ ಆಗೋದಿಲ್ಲ. ನೀವು ಬರಕೊಟ್ಟ ದೂರಿನ ಮೇಲಿಂದ ಲಾಕಪ್ಪಿಗೆ ಹಾಕಿದೇವೆ. ಈಗ ಕೇಸು ಕೋರ್ಟಿಗೆ ಹೋಗಿದೆ.

ಬೇಕಿದ್ರೆ ಅಲ್ಲೇ ಜಾಮೀನು ಕಟ್ಟಿ ಬಿಡಿಸ್ಕೊಳ್ಳಿ. ಈಗ ನಾವೇನೂ ಮಾಡೋಕಾಗೋದಿಲ್ಲ.''

''ಸ್ವಾಮಿ, ದಯವಿಟ್ಟೂ ಇವ್ನ ಬಿಟ್ಟುಬಿಡ್ರಿ, ನನ್ನ ಹೊಟ್ಯಲ್ಲಿ ಹುಟ್ಟಿದ ಮಗ ಹೀಂಗೆ ಪಂಜರದಲ್ಲಿ ಕೂತಿರೋದ ನೋಡ್ಲಾರೆ... ದಯ ಮಾಡಿ ಬಿಟ್ಟುಬಿಡ್ರಿ...''

''ಹಾಗಾದ್ರೆ ಬನ್ನಿ, ಅಂವ ನಿಮ್ಮ ಕಾಲು ಹಿಡಿದು ತಪ್ಪಾಯ್ತು, ಇನ್ನಿಂಥಾ ಕೆಲ್ಸ ಮಾಡೋ ದಿಲ್ಲ ಅನ್ನಲಿ, ನೀವು ನಿಮ್ಮ ಕಂಪ್ಲೇಂಟ್ ವಾಪಸ್ ತಗೊಂಡ್ಬಿಡಿ, ಅಂದ್ರೆ ಇವ್ನ ಬಿಟ್ಟುಬಿಡ್ತೇವೆ,'' ಎಂದು ಹೇಳುತ್ತಲೇ ಪಿ.ಸಿ.ಯಿಂದ ಮತ್ತೆ ಕೋಣೆ ಬಾಗಿಲು ತೆಗೆಸಿ,

''ಏಲೊ ಲೌಡಿಮಗನೆ, ಅಮ್ಮನ ಕಾಲು ಹಿಡಿದು ತಪ್ಪಾಯ್ತು ಅಂತ ಒಪ್ಪಿಕೊ, ಅಂದ್ರೆ ಸೀದಾ ಮನೆಗ್ಹೋಗಬಹುದು...'' ಅನ್ನುತ್ತ ಅವನ ಕೈ ಹಿಡಿದೆಳೆದು ತಾಯಿಯ ಕಾಲಿಗೆ ದೂಡಿದರು.

ಆತ ಬಿದ್ದಷ್ಟೇ ವೇಗವಾಗಿ ಜಗಿದೆದ್ದು ನಿಂತು, ''ಇಲ್ಲ, ನಾ ಯಾರ ಕಾಲಿಗೂ ಬೀಳೋದಿಲ್ಲ. ಇವ್ಳು, ಇವ್ಳು ನನ್ನ ತಾಯಿಯಲ್ಲ, ಹೆಮ್ಮಾರಿ, ನಮ್ಮ ಮನೆಗೆ ಗಂಟುಬಿದ್ದ ಬ್ರಹ್ಮ ರಾಕ್ಷಸಿ, ನೀವು ನನ್ನ ಜನ್ಮ ಕ್ಯೊದ್ರೂ ಸೈತ ನಾನಿವ್ಳ ಕಾಲಿಗೆ ಬೀಳೋದಿಲ್ಲ. ಇಲ್ಲ... ಇಲ್ಲ...'' ಕೂಗುತ್ತಲೇ ಆತ ಹೊರಗೋಡಲು ಪ್ರಯತ್ನಿಸಿದಾಗ, ಪಿ.ಸಿ. ಗಳಿಬ್ಬರೂ ಸೇರಿ ಅವನನ್ನು ಹಿಡಿದು ನಿಲ್ಲಿಸಿದರು.

''ಓಡಿ ಹೋಗ್ತೀಯೇನಲೇ ಭೋಸುಡಿಕೇ, ಹೋಗು ನೋಡೋಣ, ಮಾಡಿದ್ದು ಅಂಥಾ ಕೆಲಸ, ಮೇಲಿಂದ ಕೊಬ್ಬು ನೋಡು. ನಿನ್ನ ಕೊಬ್ಬಿಳಿಸೋದು ಹ್ಯಾಂಗೆ ಅಂತ ನಂಗೊತ್ತಿದೆ,... ನಿನ್ನ ಸುಮ್ನೆ ಬಿಡೋದಿಲ್ಲ. ಹರಾಮ್‌ಖೋರ್‌ನ್ನ ತಂದು....'', ಸಾಹೇಬರು ಬೈಯುತ್ತಲೇ ಅವನ ಮುಸುಡಿಗೆ ಬೂಟುಗಾಲಿಂದ ಒದ್ದಾಗ, ಅವನು 'ಅಯ್ಯೊ' ಅನ್ನುತ್ತ ನೆಲಕ್ಕೆ ಬಿದ್ದ. ಪೆಟ್ಟು ಕಣ್ಣಿಗೆ ಬಿತ್ತೋ? ಮೂಗಿಗೊ? ತಲೆಬುಡ ಗೊತ್ತಾಗಲಿಲ್ಲ.

ಈಗ ಪದ್ದು ಚಿಕ್ಕಿ, ಮಾಳಬೆಕ್ಕಿನ ಹೆಜ್ಜೆ ಸದ್ದಿಗೆ ಹೆದರಿ, ಒಲೆ ಮೂಲೆಯಲ್ಲಿ, ಒದ್ದರೂ ಮ್ಯಾಂವ್ ಗುಟ್ಟದೆ ರಾಬಿ ಕೂತ ಬೆಕ್ಕಿನ ಮರಿ!... ಸಾಹೇಬರ ಬೂಟುಗಾಲು ಒದ್ದಿದ್ದು ಮಗನನ್ನಲ್ಲ, ತನ್ನನ್ನು, ಅವರು ಅವಮಾನಿಸಿದ್ದು ಸದೂ ಎಂಬ ಧಾಂಡಿಗ ಗಂಡಸನ್ನಲ್ಲ- ತನ್ನ ಬಸಿರನ್ನು. ಆ ತಾಯ್ತನದ ಸಹನೆಯನ್ನು. ನಲವತ್ತು ವರ್ಷಗಳ ತನ್ನ ಸಂಸಾರವೆಂಬ ಒಂಟಿಗಾಲಿನ ತಪಸ್ಸನ್ನು... ಮೊದಲೇ ಬೆವರಿದ ಮೈ, ಈಗ ಧಾರೆಯಿಟ್ಟು, ಈವರೆಗೂ ಕಟ್ಟಿಕೊಂಡ ಗಂಗಾ ಪ್ರವಾಹ ಕಣ್ಣಿಂದಲೂ ಧುಮುಕಿಬಿಟ್ಟಿತು.

ಹಾಗೆ ಅಳುತ್ತಲೇ, ''ನಿಮ್ಮ ದಮ್ಮಯ್ಯ ಸಾಹೇಬ್ರೆ, ಇವ್ನ ಬಿಟ್ಬಿಡಿ, ನಿಮಗೆ ಕೈ ಮುಗಿತೇನೆ, ದಯವಿಟ್ಟು ಬಿಟ್ಟುಬಿಡ್ರೀ... ಈ ಸಂಕ್ಟ ನಾ ನೋಡ್ಲಾರೆ. ಅಂವ ನಮಗಿಬ್ರಿಗೂ ಕಬ್ಬಿಣದ ಸರಳಿಂದ ಬಡಿದಿದ್ದು ಹೌದು. ಅದಕೇ ನಾ ಕಂಪ್ಲೇಂಟು ಕೊಟ್ಟಿದ್ದೂ ಹೌದು. ಆದ್ರೆ ಅವನಿ ಗಾಗ ಮೈ ಮೇಲಿನ ಎಚ್ಚರೇ ಇರ್ಲಿಲ್ಲ, ಮೂಗಿನ ತನಕಾ ಹೊಯ್ಕೆಂಡ್ ಬಂದಿದ್ದ. ಸ್ವಾಮಿ, ಬಿಟ್ಟು ಬಿಡ್ರೀ....'' ಅನ್ನುತ್ತ ಅವರ ಎರಡೂ ಕಾಲು ಹಿಡಿದುಕೊಂಡು ಗೋಳಾಡಿದಾಗ, ''ಹುಂ, ಆಯ್ತು ಬನ್ನಿ ಇಲ್ಲಿ'' ಅಂದರು.

ತಮ್ಮ ಕ್ಯಾಬಿನ್ನಿಗೆ ಬಂದು, ಸರಸರ ನಾಲ್ಕು ವಾಕ್ಯ ಗೀಚಿ, ಅವಳ ಸಹಿ ತೆಗೆದುಕೊಂಡು, ''ಸರಿ, ನಿಮ್ಮ ಮಗನ ಕರ್‍ಕೊಂಡು ಹೋಗಿ. ಆದ್ರೆ ಮತ್ತೆ ನಾಳೆನೇ, ಹಂಗಾಯ್ತು-ಹಿಂಗಾಯ್ತು ಅಂತ ಬರ್ಬೇಡಿ.'' ಅಂದು ಪಿ.ಸಿ.ಗೆ ಸನ್ನೆ ಮಾಡಿದಾಗ, ಆತ ಲಾಕಪ್ಪಿನ ಕೀಲಿ ತೆಗೆದು, ''ನಡಿಯೊ ಬೇವಾರ್ಸಿ, ಇನ್ನೆಂದಾದ್ರೂ, ಇಂಥಾ ಕೆಲ್ಸ ಮಾಡಿದ್ರೆ, ನಿನ್ನ ಗತಿ ಮುಗತ್ತೂಂತ ತಿಳಿಕೊ.'' ಸಿಕ್ಕಿದ ಒಂದು ಅವಕಾಶ ಕೈ ಜಾರದಂತೆ ಸದೂನ ಮುಖಕ್ಕೆ ಉಗಿದು ಹೊರಕಳಿಸಿದ.

ನೆತ್ತಿಯ ಮೇಲಿನ ಸೂರ್ಯ ಸುರಿಸುತ್ತಿರುವ ಸುಡು ಸುಡು ಬಿಸಿಲಲ್ಲಿ, ನೆರಳಿನಂತೆ ತಾಯಿ

ಯನ್ನು ಹಿಂಬಾಲಿಸಿದ ಮಗ ಬಸ್‌ಸ್ಟಾಪಿನಲ್ಲಿ ನಿಂತಾಗಲೂ ಮಾತಾಡಲಿಲ್ಲ. ಮತ್ತೊಂದು ಗಳಿಗೆಗೆ ಬಂದ ಬಸ್ಸು ಏರಿ, ಇಳಿದು, ಮನೆಯ ಹಾದಿ ಹಿಡಿದಾಗಲೂ ಮಾತಾಡಲಿಲ್ಲ. ಆದರೆ ದಾರಿಯಲ್ಲಿದ್ದ ಹಲಸಿನ ಮರ ಮತ್ತು ಕಳ್ಳಿಗಿಡಗಳು ಪರಸ್ಪರ ಮಾತಾಡಿಕೊಂಡವು.

ಏನೆಂದು?

''ಇದೇಯ ಕಂಡ್ಯ. ಹೊತ್ತ-ಹೆತ್ತ ಸೌಭಾಗ್ಯ. ಸಾಕಿದ ಸಂಭ್ರಮ. ಹೆಣ್ತನದ ವಿಧಿ'', ಅಂದಿತು ಮರ.

''ಆದರೆ ಯಾಕೆ? ಯಾಕೆ ಹೊರೋದು ಹೆರೋದು-ಸಂತ್ರ, ಕೊರಗೋದು? ನೀನೂ ಸೈತ ಯಾಕಾಗಿ ಇಷ್ಟೆಲ್ಲಾ ಕಾಯಿ ಬಿಡಬೇಕು? ಯಾಕೆ ಮೈ ತುಂಬ ಮುಳ್ಳು ಹೊರಬೇಕು?''

''ಯಾಕೇಂದ್ರೆ, ನನ್ನೊಳಾ ಒಳಗಿನ ಏನೊ ಒಂದು-ಇಡೀ ನನ್ನ ಸಾರ ಸರ್ವಸ್ವ ಅನ್ನು, ಅಥವಾ ಹೊಟ್ಟೆಯೊಳಗೆ ಕಟ್ಟಿಕೊಂಡ ನಂಜಿನ ಮೊಟ್ಟೆ ಅಂತನ್ನು ಬೇಕಾದ್ರೆ, ಅದನ್ನು ಹೊರಹಾಕಿ ನಾನು ಹಗುರಾಗಬೇಕು. ಒಳಗೊಳಗೇ ಹಣ್ಣು ಮಾಡುವ ಗುದುಮುರಿಗೆಯಿಂದ ನನ್ನನ್ನು ಉಳಿಸಿಕೊಳ್ಳಬೇಕು. ಅದಕ್ಕಾಗಿ ಈ ಸುಡುಗಾಡಿನ ತಾಯ್ತನ. ಅದಕ್ಕಾಗಿ ಈ ಪರಿ ಸಂಕಟ. ಅದಕ್ಕಾಗಿ ಜನ್ಮಕ್ಕಂಟಿದ ನೋವು... ಅದೆಲ್ಲ ನಿಂಗೊತ್ತಾಗೋದಿಲ್ಲ ಬಿಡು'', ಅಂದಿತು ಬುಡದಿಂದ ತಲೆಯವರೆಗೂ ಸಣ್ಣ, ದೊಡ್ಡ ಕಾಯಿಗಳ ಸರಮಾಲೆಯನ್ನೇ ಹೊತ್ತು ನಿಂತ ಹಲಸು.

''ಇದ್ದೀತಪ್ಪಾ, ಅದು ನಂಗೊತ್ತಿಲ್ಲ.'', ವ್ಯಂಗ್ಯವಾಗಿ ಹೇಳಿ ಸುಮ್ಮನಾಯಿತು, ಒಂದು ಹೂವನ್ನೂ ಅರಳಿಸದ ಕಳ್ಳಿ.

ಕಲ್ಲು ಮುಖದ ಮಗನೊಂದಿಗೆ-ಹಾಲಿನ ಖಾಲಿ ಕ್ಯಾನುಗಳೊಂದಿಗೆ, ಚಿಕ್ಕಿ ಮನೆಯ ಹಾದಿ ತುಳಿದಳು.





ಸ್ತ್ರೀಯ ಬರವಣಿಗೆ
ಎಂದರೆ ಒಂದು ಉದ್ವೇಗ - ಒಂದು ಭಯ - ಒಂದು
ಸಂಭ್ರಮ - ಜೊತೆಗೆ ಅದೊಂದು ಅಲ್ಪಾಂತರ ಚಳುವಳಿ.
ಭಾಗೀರಥಿ ಹೆಗಡೆ

# ಕಾಗದದ ದೋಣಿ



ಪತ್ತೇದಾರ ಪುರುಷೋತ್ತಮನ ಸೃಷ್ಟಿಕರ್ತ ಶ್ರೀ ಎನ್. ನರಸಿಂಹಯ್ಯನವರೇ,

1956-59ರಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸ ಮಾಡುತ್ತಿದ್ದ ನಾನು, ಮೊದಲು-ಅದರಲ್ಲೂ ಹಣಕೊಟ್ಟು-ಖರೀದಿಸಿ ಓದಿದ ಪ್ರಥಮ ಕಾದಂಬರಿ, ತಮ್ಮ 'ಭಯಂಕರ ಬೈರಾಗಿ!'

ಆ ದಿನ ಅಚ್ಚಳಿಯದೆ ನೆನಪಿನಲ್ಲಿ ಉಳಿದಿದೆ. ನನ್ನ ಗೆಳತಿ ಹತ್ತಿರ ಅದ್ದೇಗೋ 'ಭಯಂಕರ ಬೈರಾಗಿ' ಪತ್ತೇದಾರಿ ಕಾದಂಬರಿ ಇತ್ತು. ನಾನೂ ಒಂಚೂರು ಓದಿಕೊಡುತ್ತೇನೆ ಎಂದೆ. ಅವಳು ಇದು ಬೇರೆಯವರದ್ದು, ಕೊಡಲು ಸಾಧ್ಯವಿಲ್ಲ ಎಂದಳು. ಹಾಗೆಂದು ಸುಮ್ಮನಿರಲಾಗಲಿಲ್ಲ. ಅದನ್ನು ಹೇಗಾದರೂ ಪಡೆದು ಓದಬೇಕೆಂಬ ಛಲ ಮೂಡಿತು. ಅಂದಿನ ದಿನಗಳಲ್ಲಿ 'ಸಂತೆ ದುಡ್ಡು' ಎನ್ನುವ ಹೆಸರಿನಲ್ಲಿ ನಾನು ಪಡೆಯುತ್ತಿದ್ದ ಆ ವಾರದ 'ಪಾಕೆಟ್ ಮನಿ' ಮೂರುವರೆ ರುಪಾಯಿಗಳು ನನ್ನಲ್ಲಿತ್ತು. ಆ ಕ್ಷಣವೇ ಮನಸ್ಸು ಮಾಡಿ, ನಮ್ಮೂರಿನ ಪಿರಿಪಿರಿ ಮಳೆ, ಸಂಜೆಗತ್ತಲಿನಲ್ಲಿ, ಅಲ್ಲೊಂದು ಇಲ್ಲೊಂದು ಬೀದಿ ಲಾಂದ್ರದ ಬೆಳಕಿನಲ್ಲಿ ನಡೆದೆ. ನಮ್ಮೂರಿನಲ್ಲಿದ್ದ ಎರಡು ಪುಸ್ತಕದಂಗಡಿಗಳ ಪೈಕಿ, ಸಣ್ಣ ಅಂಗಡಿಗೆ ಹೋದೆ. 'ಭಯಂಕರ ಬೈರಾಗಿ' ಪತ್ತೇದಾರಿ ಕಾದಂಬರಿ ಸಿಕ್ಕಿಯೇ ಬಿಟ್ಟಿತು. ಮುಖಪುಟದಲ್ಲಿ ಬೈರಾಗಿ ವರ್ಣರಂಜಿತನಾಗಿ ವಿಜೃಂಭಿಸುತ್ತಿದ್ದಾನೆ. ಇಷ್ಟು ದಪ್ಪ ಕಾದಂಬರಿಯ ಬೆಲೆ ಕೇವಲ ಒಂದೂವರೆ ರುಪಾಯಿ!

ಶುರುವಾಯ್ತು ನೋಡಿ, ನಮ್ಮ ಬಿರುಸಿನ ಓದಾಟ. ಕ್ಲಾಸ್ ರೂಮಿನಲ್ಲಿ, ಹುಡುಗಿಯರೆಲ್ಲ. ಕದ್ದು, ಡೆಸ್ಕ್ ಕೆಳಗಿಟ್ಟುಕೊಂಡು ಓದಿದೆವು. ಒಂದು ಹಾಳೆ ಒಬ್ಬಳು ಓದಿದ ಮೇಲೆ ಇನ್ನೊಬ್ಬಳಿಗೆ ದಾಟಿಸಬೇಕಿತ್ತು! ಒಬ್ಬ ಸಹಪಾಠಿಯಂತೂ ಮನೆಯಿಂದ ಶಾಲೆಗೆ ಬರುವಾಗ ದಾರಿಯಲ್ಲಿ ಓದಿಕೊಂಡೇ ಬಂದಳು! (ಆಗಿನ ದಿನಗಳಲ್ಲಿ ಢಿಕ್ಕಿ ಹೊಡೆಯಲು ಸ್ಕೂಟರ್, ಕೈನೆಟಿಕ್ ಹೊಂಡಾ ಇವೆಲ್ಲಾ ಕೇಳೇ ಇರಲಿಲ್ಲ ಬಿಡಿ!)

ಹೀಗೆ ನಿಮ್ಮ ಅನೇಕ ಪತ್ತೇದಾರಿ ಕಾದಂಬರಿಗಳನ್ನು ಓದಿದೆ. ಈಗ ಹೆಸರುಗಳೆಲ್ಲಾ ಮರೆತು ಹೋಗಿದೆ. ತಮ್ಮ ಕಾದಂಬರಿಯ ಪಾತ್ರವೊಂದು, ಮಾತುಮಾತಿಗೂ ಒಂದೊಂದು ಗಾದೆ

ಹೇಳುತ್ತಿರುತ್ತದೆ. ಒಂದೇ ಒಂದು ಗಾದೆ ನೆನಪಿದೆ. ಹೇಳಲಾ? ''ಚೇಳಿಗೆ ಪಾರುಪತ್ಯ ಕೊಟ್ಟರೆ, ಜಾವಕ್ಕೆ ಮೂರು ಸಾರಿ ಕಚ್ಚಿತಂತೆ!'' ಮತ್ತೊಂದು ವಿಷಯ ಇದೇ ಸಮಯದಲ್ಲಿ, ಲಕ್ಷಾಂತರ ಯಹೂದಿಗಳ ಹತ್ಯೆಗೆ ಕಾರಣನಾಗಿದ್ದ ನಾಜಿ ಐಕ್‌ಮೆನ್‌ನನ್ನು ವಿದ್ಯುತ್ ಕುರ್ಚಿಯಲ್ಲಿ ಕುಳ್ಳಿರಿಸಿ ಮರಣದಂಡನೆ ವಿಧಿಸಿದರು. ಈ ಶಿಕ್ಷೆ ಸಾಲದೆಂದು ನಾನು ಪರಿತಪಿಸಿದೆ. 'ಭಯಂಕರ ಭೈರಾಗಿ' ಕಾದಂಬರಿಯಲ್ಲಿ ಪತ್ತೇದಾರ ಪುರುಷೋತ್ತಮನ ಮಿತ್ರ ರಾಮನಾಥನಿಗೆ, ಅವನ ಕೈಕಾಲು ದೇಹಗಳ ಮೇಲೆ ಗಾಯಮಾಡಿ ಅದಕ್ಕೆ ಉಪ್ಪು ತುಂಬಿಯೋ ಅಥವಾ ಆಸಿಡ್ ಹಾಕಿಯೋ ಯಾತನೆಗೊಳಪಡಿಸುವ ಭೀಕರ ಶಿಕ್ಷೆಯನ್ನು ಆ ಭೈರಾಗಿ ಕೊಟ್ಟಿರುತ್ತಾನೆ. ಇಂತಹ ರಣಶಿಕ್ಷೆಯನ್ನು ಐಕ್‌ಮೆನ್‌ಗೆ ಕೊಡಬೇಕಾಗಿತ್ತು ಎಂದು ನಾನು ಪರಿತಪಿಸಿದೆ. ಎಲ್ಲ ತಮ್ಮ 'ಭಯಂಕರ ಭೈರಾಗಿ' ಪ್ರಭಾವ!

ಮುಂದೆ ''ಇದೊಂದು ಪತ್ತೇದಾರಿ ಕಾದಂಬರಿ'' ಎಂಬ ಶೀರ್ಷಿಕೆ ಹೊತ್ತ ಮುಖಪುಟದ ಪತ್ತೇದಾರಿ ಕಾದಂಬರಿಗಳನ್ನು ಎಂ. ರಾಮಮೂರ್ತಿ ಬರೆದರು. ಪಾಕೆಟ್ ಕ್ಯಾಲೆಂಡರ್ ಸೈಜಿನ ಪತ್ತೇದಾರಿ ಕಾದಂಬರಿಗಳನ್ನೂ ಓದಿದೆವು. ಶ್ರೀಕೃಪಾ ಎನ್ನುವವರ 'ಕಾಮ್ರೇಡ್ ರಮೇಶ್' ಎಂಬ ಪಾಕೆಟ್ ಕ್ಯಾಲೆಂಡರ್ ಗಾತ್ರದ ಪತ್ತೇದಾರಿ ಪುಸ್ತಕವನ್ನು ಇನ್ನೂ ಇಟ್ಟಿದ್ದೇನೆ, ಸ್ಯಾಂಪಲ್‌ಗಾಗಿ! ಇದರ ಬೆಲೆ 6 ಆಣೆ ಅಂದರೆ 36 ಪೈಸೆಗಳು. ಇದೇ ಕಾಲಮಾನದಲ್ಲಿ ಅ.ನ.ಕೃ., ತ.ರಾ.ಸು., ಕಟ್ಟೀಮನಿ ಮುಂತಾದವರ ಕಾದಂಬರಿಗಳು ಬಂದವು. ನಮ್ಮಲ್ಲಿ ಓದುವ ದಾಹ ಅದಮ್ಯವಾಯಿತು. ಅ.ನ.ಕೃ ಪ್ರಾಸಂಗಿಕವಾಗಿ ಅವರ ಕಾದಂಬರಿಗಳಲ್ಲಿ ಇಂಗ್ಲಿಷ್ ಸಾಹಿತ್ಯ, ಕಾದಂಬರಿಗಳ ಬಗ್ಗೆ ಪ್ರಸ್ತಾಪಿಸುತ್ತಿದ್ದರು. ಇದನ್ನು ಓದಿದ ಮೇಲೆ ಇಂಗ್ಲಿಷ್ ಸಾಹಿತ್ಯ ಓದಬೇಕೆಂಬ ಆಸೆ ನನ್ನಲ್ಲಿ ಮೊಳಕೆಯೊಡೆಯಿತು. ನಮ್ಮ ಓದುವ ಹುಚ್ಚಿಗೆ ಇತಿಮಿತಿಯೇ ಇರಲಿಲ್ಲ. ಅ.ನ.ಕೃರವರ 'ನಗ್ನಸತ್ಯ', 'ಶನಿಸಂತಾನ', ಕಟ್ಟೀಮನಿಯವರ 'ನಾನು ಪೋಲೀಸನಾಗಿದ್ದೆ', 'ಜರತಾರಿ ಜಗದ್ಗುರು' ಇವುಗಳನ್ನ ಓದುವ ಹಾಗಿಲ್ಲ! ಪುಸ್ತಕದಂಗಡಿಯಲ್ಲಿ ಕೊಳ್ಳುವ ಹಾಗೆಯೇ ಇಲ್ಲ. ಪುಟ್ಟ ಊರಿನಲ್ಲಿ ಎಲ್ಲರೂ ಎಲ್ಲರಿಗೂ ಪರಿಚಿತರೇ. ಹಾಗೇನಾದರೂ ಕೇಳಿದ್ದರೆ, ವಿಷಯ ಅಣ್ಣನ ಮೂಲಕ ಮನೆಗೆ ರವಾನೆಯಾಗುತ್ತಿತ್ತು. ಚಂದಮಾಮದಂತಹದಕ್ಕೆ ಮಾತ್ರ



ವಿನಾಯ್ತಿ ಇರುತ್ತಿತ್ತು. ಆದರೂ ಬಿಡಲಿಲ್ಲ. ಕದ್ದು, ಮುಚ್ಚಿ 'ನಟಸಾರ್ವಭೌಮ' ಇತ್ಯಾದಿ ಓದಿಯೇಬಿಟ್ಟೆವು. ಇನ್ನು ಕುವೆಂಪು, ಕಾರಂತರ ಕಾದಂಬರಿಗಳನ್ನು ರಾಜಾರೋಶವಾಗಿ ಓದಿದೆವು.

ನಂತರದ್ದೆಲ್ಲವೂ ಅಪ್ರಸ್ತುತ. ಆದರೆ ತಮ್ಮ ಪತ್ತೇದಾರಿ ಕಾದಂಬರಿ ನನ್ನ ಮತ್ತು ನನ್ನ ವಾರಿಗೆಯವರ ಮನಸ್ಸನ್ನು ಅದ್ಭುತರಮ್ಯ ಕಲ್ಪನೆಗಳಿಂದ ತುಂಬಿ, ನಮ್ಮ ಭಾವಕಣಜವನ್ನು ಸಮೃದ್ಧಗೊಳಿಸಿದ್ದಂತೂ ಅಷ್ಟೇ ನಿಜ. ನಮ್ಮಲ್ಲಿ ಸಾಹಿತ್ಯದ ಹಸಿವನ್ನು ಉದ್ದೀಪನಗೊಳಿಸಿದವು. ಇಂದಿಗೂ ಓದುಬರಹಗಳ ಬಗ್ಗೆ ನನಗಿರುವ ಅಕ್ಕರೆ, ಆಸಕ್ತಿಗಳಿಗೆ ನಿಮ್ಮ ಕಾದಂಬರಿಗಳ ಓದು ಸಹ ಕಾರಣವಾಯಿತು ಎನ್ನುವುದನ್ನು ನಾನು ತುಂಬಾ ಪ್ರೀತಿಯಿಂದ ನೆನೆಯುತ್ತೇನೆ. ಏಕೆಂದರೆ ಇಂಥ ಆಪ್ತ ನೆನಹುಗಳೇ ಇಂದಿನ ಮನಸ್ಸಿನ ಎಳೆತನಕ್ಕೆ ಅಡಿಪಾಯ.

ಇಂತಿ ವಂದನೆಗಳೊಂದಿಗೆ,

ಮೈಸೂರು

**ಪದ್ಮಾ ಶ್ರೀರಾಮ**



ಸರ್,

ಪ್ರತಿಯೊಬ್ಬ ವ್ಯಕ್ತಿಯಲ್ಲೂ ತಕ್ಕಮಟ್ಟಿಗೆ ಪ್ರತಿಭೆ, ತಾಕತ್ತು, ಆತ್ಮವಿಶ್ವಾಸ ಇದ್ದೇ ಇರುತ್ತೆ. ನಂಬುವಿರಾ? ಜೊತೆಗೆ ಈ ಎಲ್ಲದರ ಬಗೆಗೂ ಅವನಿಗೂ ಕಿಂಚಿತ್ ಸ್ವಾಭಿಮಾನ, ಹೆಮ್ಮೆ ಇದ್ದೇ ಇರುತ್ತದೆ. ಇದು ತಪ್ಪೇನಲ್ಲ ಎಂದು ನೀವು ಉದಾರವಾಗಿ ನಂಬುವುದಾದರೆ ಈ ಪತ್ರ ನಿಮ್ಮ ಮನಸ್ಸನ್ನು ಕಹಿಯನ್ನಾಗಿಸದು.

ನಾನೂ ಅಷ್ಟೇ. ಎಷ್ಟೊಂದು ಕನಸುಗಳನ್ನು ಹೊಟ್ಟೆಯಲ್ಲಿ ಕಟ್ಟಿಕೊಂಡು ಸಂದರ್ಶನಕ್ಕೆ ಬಂದಿದ್ದೆ. ಇದು ನಾಲ್ಕೈದು ವರ್ಷಗಳ ಹಿಂದಿನ ಮಾತು. ನೀವು ಮರೆತಿರಲು ಸಾಧ್ಯ. ಕೆ.ಪಿ.ಎಸ್.ಸಿ. ವತಿಯಿಂದ ಜ್ಯೂನಿಯರ್ ಕಾಲೇಜು ಕನ್ನಡ ಉಪನ್ಯಾಸಕ ಹುದ್ದೆಗೆ ನಡೆಸುವ ಸಂದರ್ಶನದ ಕಮಿಟಿಯಲ್ಲಿ ವಿಷಯ ತಜ್ಞರು ನೀವು ಎಂದು ಕೇಳಿದಾಗ ತುಂಬಾ ಖುಷಿ ಪಟ್ಟೆ. ಕನ್ನಡಸಾಹಿತ್ಯ, ಸಂಶೋಧನೆ, ಇತಿಹಾಸಗಳಿಗೆ ಸಂಬಂಧಪಟ್ಟಂತೆ ನೀವು ಬರೆದಿದ್ದ ಮಹತ್‌ಕೃತಿಗಳನ್ನು ನಾನು ಓದಿದ್ದು ನೆನೆಸಿಕೊಂಡೆ. ನಾನೂ ನನ್ನ ಸೃಜನಶೀಲ ಬರಹದ ಹವ್ಯಾಸ, ಕಾಳಜಿ, ಆಸಕ್ತಿಗಳ ಬಗ್ಗೆ ನಿಮ್ಮೆದುರಿಗೆ ಹೇಳಬೇಕೆಂದು ಮನಸ್ಸಿನಲ್ಲೇ ಸಿದ್ಧನಾದೆ. ಆದರೆ ಆದದ್ದೇನು ಸರ್?

ಸಂದರ್ಶನದ ಕ್ಷಣ, ನೀವು ಎದುರು ಕೂತು ಪ್ರಶ್ನಿಸಿದ ಯಾವುದೇ ಪ್ರಶ್ನೆಗಳಿಗೂ ನಾನು ನಿರುತ್ತರನಾಗಲಿಲ್ಲ. ನೆನಪಿದೆಯೆ? ನನ್ನ ಊರಾದ ಶಿವಮೊಗ್ಗ, ಕೆಳದಿ, ಶಿವಪ್ಪನಾಯಕ... ಎಂದೆಲ್ಲ

ಕೇಳುತ್ತ ಹೋದಿರಿ. ಹೇಳುತ್ತ ಹೋದೆ. ಕುವೆಂಪು, ಅಡಿಗರು, ವರ್ಡ್ಸ್‌ವರ್ತ್, ಎಲಿಯಟ್, ಭೂಮಿಗೀತ, ಪ್ರಾಕ್ಟಿಕಲ್ ಕ್ರಿಟಿಸಿಸಂ, ಅಸಂಗತ ರಂಗಭೂಮಿ-ಛಂದಸ್ಸು... ಈ ಬಗ್ಗೆ ಒಂದಾದರೂ ಪ್ರಶ್ನೆಯನ್ನು ನೀವು ಏಕೆ ಕೇಳಲಿಲ್ಲ? ನನಗೆ ಎಷ್ಟು ದುಃಖವಾಯ್ತು ಗೊತ್ತೆ ಸರ್? ಎಷ್ಟೊಂದು ಚೆಂದಾಗಿ ತಯಾರಾಗಿ ಬಂದಿದ್ದೆ! ಹೋಗಲಿ ಬಿಡಿ, at least chalk piece ಕೊಟ್ಟು 'ಪಾಠ ಮಾಡು' ಎಂದಾದರೂ ಹೇಳಬಹುದಿತ್ತು. ನನಗೆ ಇವತ್ತಿಗೂ ರಹಸ್ಯ ಎನ್ನಿಸುತ್ತದೆ; ನೀವು ಆಯ್ಕೆ ಮಾಡುತ್ತಿದ್ದು 'ಒಳ್ಳೆಯ' ಉಪನ್ಯಾಸಕನನ್ನೋ ಅಥವಾ ಇತಿಹಾಸ ಸಂಶೋಧಕನನ್ನೋ ?!

ಹೀಗಾದರೂ, ನಾನು ನನ್ನ 'ಉಪನ್ಯಾಸಕ' ಕನಸನ್ನ ನನಸಾಗಿಸಿಕೊಳ್ಳಬಹುದೇ ಅಂತ ನನ್ನ ಪ್ರಶಸ್ತಿ ವಿಜೇತ ಕವನಸಂಕಲನ, ಪ್ರಕಟಿತ ಕತೆ-ಕವನ-ವಿಮರ್ಶೆಗಳ ಕಟಿಂಗ್ಸ್ ಎಲ್ಲವನ್ನು ನಿಮ್ಮ ಮುಂದೆ ಹರವಿದ್ದೆ. ಛೇ! ನೀವು ಕಣ್ಣೆತ್ತಿ ಸಹ ನೋಡ್ಲಿಲ್ಲ ಸರ್. ತುಂಬಾ ಅಳು ಬಂತು. ಎಲ್ಲವನ್ನು ಸುಟ್ಟು ಬಿಡುವಷ್ಟು.

ನನ್ನ ಗೆಳೆಯರೆಲ್ಲ ನನ್ನ ಸುತ್ತ ಘೇರಾಯಿಸಿ, ''ಲೇ, ಏನಾಯ್ತೋ, ಸರಿಯಾಗಿ ಉತ್ತರ ಕೊಟ್ಟೆಯೋ ಇಲ್ಲೋ'' ಎಂದು ಕೇಳಿದರು. ''ಹೂಂ'' ಎಂದೆ. ''ಕೆಲಸ ಆಗಲ್ಲ ಕಣಮ್ಮ ಈಗಾಗಲೇ ಸಂದರ್ಶನಕ್ಕೂ ಮುಂಚೆ ದುಡ್ಡಿಗೆ ನೌಕರಿ ಹಂಚಲಾಗಿದೆ. ನೀನೆಷ್ಟು ಕೊಟ್ಟಿದ್ದಿ ಹೇಳು?'' ಎಂದೊಬ್ಬ ಅಂದ. ಕೆ.ಪಿ.ಎಸ್.ಸಿ. ಸದಸ್ಯರಲ್ಲಿ ಒಬ್ಬರ ಕಾರ್ ಡ್ರೈವರ್, ನನ್ನನ್ನು ಕರೆದು ಏನು ಕೇಳಿದ ಗೊತ್ತೇ? ''ನಿಮ್ಮ ಕೆಪಾಸಿಟೀ ಎಷ್ಟು ರೀ, ಒಂದು ಲಕ್ಷ ತಳ್ಳಿ ಇನ್ನೂ ಟೈಂ ಇದೆ, ನಾಳೇನೇ appointment order type ಆಗ್ತದೆ'' ಅಂದ. ವಾಹ್.

ಸರ್,

ಕೊನೇ ಮಾತು. ಕಾಲಬದಲಾಗಿದೆ. ನಾನೀಗ ಮಧ್ಯಪ್ರದೇಶದ ನವೋದಯ ಶಾಲೆಯೊಂದರಲ್ಲಿ 'ಕನ್ನಡ' ಭಾಷೆ ಇದೆಯೇ ಎಂದು ಗೊತ್ತಿರದ ಮಕ್ಕಳಿಗೆ ಕಾಗುಣಿತ, ಒತ್ತಕ್ಷರ, ಅನ್ನದಾತ, ಧರಣಿಮಂಡಲ, ರವಿಯು ಅಜ್ಜನ ಮನೆಗೆ ಹೋದನು, ಕಲಬೇಡ ಕೊಲಬೇಡ, ಕುಲ ಕುಲ ಕುಲವೆಂದು ಹೊಡೆ...., ಎಲ್ಲಾದರೂ ಇರು ಎಂತಾದರೂ ಇರು,... ಎಂಬೆಲ್ಲ ವಿಷಯಗಳನ್ನು ಹಿಂದಿಯಲ್ಲಿ ಪಾಠ ಮಾಡುತ್ತ 'ಉಳಿದಿದ್ದೇನೆ'. ''ಸಖತ್ ಪಾಠ ಮಾಡ್ತೀರಿ, ಬಹುತ್ ಬಡಿಯಾ, ಅಚ್ಛಾ ಸರ್ ಜೀ'' ಎಂದೆಲ್ಲ ಮಕ್ಕಳು ನನ್ನ ವಿಶ್ವಾಸವನ್ನು ಹೆಚ್ಚಿಸಿದ್ದಾರೆ. ನಡುನಡುವೆ, ಗೋಕಾಕ್, ಬೇಂದ್ರೆ, ಕೀಟ್ಸ್, ಲಾಂಜಿನಸ್, ಭಟ್ಟಾಕಳಂಕ, ರಾಜಶೇಖರ ಇವರೆಲ್ಲ ಬಂದು ನೆನಪಾಗುತ್ತಾರೆ; ನಗುಬರುತ್ತದೆ. ಲಂಚ, ರುಶುವತ್ತು, ವಶೀಲಿ, ಭ್ರಷ್ಟತೆಗಳ ಮಧ್ಯೆ ನಿಮ್ಮಂಥವರು ಸಿಕ್ಕಿಹಾಕಿಕೊಂಡು ನರಳುತ್ತಿರುವ ಬಗ್ಗೆ ಅಯ್ಯೋ ಎನ್ನಿಸುತ್ತದೆ.

ನಮಸ್ಕಾರ ಸರ್,

ಇತಿ ನಿಮ್ಮ ವಿದ್ಯುತ್ ಪೂರ್ಣ ಗ್ರಂಥಗಳ ಅಭಿಮಾನಿ
ವಾಸುದೇವ ನಾಡಿಗ್

ರಾಯ್‌ಪುರ್, ಮಧ್ಯಪ್ರದೇಶ



ಮಾಲತಿ ನಾಡಿಗ್

# ಪಿಂಟೊ ಮತ್ತು ಲೂಸಿ

ರಾತ್ರಿ ಸುಮಾರು ಒಂಬತ್ತು ಘಂಟೆ ಇರಬಹುದು. ನಾನು, ನನ್ನ ಹೆಂಡತಿ ಸುಶೀಲ ಅಡಿಗೆ ಮನೆಯಲ್ಲಿ ಊಟಕ್ಕೆ ಕುಳಿತಿದ್ದೆವು. ಯಾರೋ ಜೋರಾಗಿ ಮಾತನಾಡಿದಹಾಗೆ ಕೇಳಿಸಿತು. ಇದರ ಮಧ್ಯೆ ಗಾಳಿಯ ರೊಯ್ಯ್ ಎನ್ನುವ ಶಬ್ದ ಬೇರೆ. ಜೋರಾಗಿ ಬಂದ ಗಾಳಿಗೆ, ಸೀಮೆ ಎಣ್ಣೆ ದೀಪಗಳು, ಭಗ್ ಭಗ್ ಎಂದು ಆರುವ ಸ್ಥಿತಿಗೆ ಬಂತು. ನಮ್ಮನೆ ಅಡಿಗೆಮನೆ ಕಿಟಕಿಗೆ ಬಾಗಿಲು ಬೇರೆ ಇಲ್ಲ. ಬರೀ ಕಬ್ಬಿಣದ ಸರಳುಗಳು ಇವೆ. ಬಾಗಿಲು ಮುಚ್ಚುವ ಹಾಗೂ ಇಲ್ಲ. ಯಾಕಾದರೂ ಈ ಕಾಲೇಜಿನ ಹತ್ತಿರ ಮನೆಮಾಡಿದೆನೋ ಅನ್ನಿಸಿತು. ಈ ಏರಿಯಾದಲ್ಲಿ ಎಲೆಕ್ಟ್ರಿಸಿಟಿ ಇಲ್ಲ. ಆದರೆ ಕಾಲೇಜಿಗೆ ತುಂಬ ಹತ್ತಿರ. ಸಿಟಿಯಲ್ಲಿ ಮನೆಮಾಡಿದರೆ ತುಂಬ ದೂರ. ನಾನು ಟ್ಯಾಕ್ಸಿಗೆ ದಿನಾ ದುಡ್ಡು ಕೊಡಬೇಕು. ಆದರೆ ಈ ದೀಪದ ಕಾರಣದಿಂದ ನಾನು, ನನ್ನ ಹೆಂಡತಿಯ ಜಗಳ ದಿನಾ ತಪ್ಪಿದ್ದೇ ಇಲ್ಲ.

''ಸುಶೀಲ, ಬೇಗ ಊಟ ಮುಗಿಸೋಣ, ಮಳೆ ಬರುವ ಹಾಗೆ ಕಾಣಿಸುತ್ತಿದೆ, ನನಗಂತೂ ಊಟ ಮಾಡಿ, ಕಂಬಳಿ ಹೊದ್ದು ಮಲಗೋಣ ಎನ್ನಿಸಿದೆ. ನಾಳೆ ಬೆಳಿಗ್ಗೆ ಕಾಲೇಜಿಗೆ ಬೇರೆ ಬೇಗ ಹೋಗಬೇಕು'' ಎಂದೆ.

ಸುಶೀಲ, ''ಸಾವಿತ್ರಿ, ಬೇಗ ಊಟಕ್ಕೆ ಸಿದ್ಧ ಮಾಡು'' ಎಂದು ಅಡಿಗೆ ಮನೆಯಿಂದ ಕೂಗು ಹಾಕಿದಳು.




"ಅಲ್ಲ ಸುಶೀಲ, ನಾಳೆ ಅವಳಿಗೆ ಟೆಸ್ಟ್ ಇದೆಯಂತೆ. ಅವಳನ್ನು ಯಾಕೆ ಕೂಗುತ್ತಿ? ನೀನೇ ಇಡಬಾರದಾ" ಎಂದಿದ್ದಕ್ಕೆ, ಸುಶೀಲಳ ಮುಖ ಸಿಟ್ಟಿನಿಂದ ಕೆಂಪಾಗಿ, "ನನಗೊಬ್ಬಳಿಗೆ ಈ ಮನೆಯಲ್ಲಿ ಏನೂ ಇಲ್ಲ. ಮಿಕ್ಕವರೆಲ್ಲಾ ಯಾವಾಗಲೂ ಬಿಜಿನೇ" ಎಂದಳು.

ಇಷ್ಟೆಲ್ಲಾ ಕೂಗಾಟ ಆದಮೇಲೆ, ಹಾಲಿನಲ್ಲಿದ್ದ ನನ್ನ ತಂಗಿ ಸಾವಿತ್ರಿ, ನಿಧಾನವಾಗಿ ಬಂದು, "ಏನು ಮಾಡಬೇಕು ಅತ್ತಿಗೆ" ಎಂದಳು.

"ಏನೂ ಬೇಡ, ಊಟಮಾಡಿ ಹೋಗು" ಎಂದಳು ಸುಶೀಲ.

ರಸ್ತೆಯಲ್ಲಿ ಯಾರೋ ಜೋರಾಗಿ ಮಾತನಾಡಿದ ಹಾಗೆ ಕೇಳಿಸಿತು. ಇಷ್ಟೊತ್ತಿನಲ್ಲಿ ಯಾರು ಇಷ್ಟು ಜೋರಾಗಿ ಕೂಗುತ್ತಿದ್ದಾರೆ ಎಂದೆ ನಾನು. "ಅಯ್ಯೋ ಆ ಎದುರುಮನೆಯವನು ಕುಡಿದು ಬಂದಿರಬೇಕೆಂದು ಕಾಣುತ್ತದೆ" ಎಂದಳು ಸುಶೀಲ.

ನಮ್ಮನೆ ಎದುರು ಮನೆಯಲ್ಲಿ ಒಂದು ಮುದುಕಿ ಇತ್ತು. ಸುಮಾರು ನಲ್ವತ್ತೈದು-ಐವತ್ತು ವರ್ಷವಿರಬಹುದು. ಆ ದೊಡ್ಡ ಮನೆಗೆ ಅದೊಂದೇ ಮುದುಕಿ. ಅವಳ ಮಕ್ಕಳು, ಮೊಮ್ಮಕ್ಕಳೆಲ್ಲಾ ಆಫ್ರಿಕಾದಲ್ಲಿ ಇದ್ದಾರಂತೆ. ಅವಳಿಗೊಬ್ಬ ತಮ್ಮನಿದ್ದಾನೆ. ಅವನು ಈ ಬೀದಿಯ ಕೊನೆಯಲ್ಲಿ, ಹೆಂಡತಿ ಮಕ್ಕಳ ಜೊತೆ ಇದ್ದಾನೆ. ಅವನು ಬೀದಿಯೆಲ್ಲಾ ಅಲೆದು, ಎಲ್ಲರ ಜೊತೆ ಹರಟೆಹೊಡೆದು, ಸಂಜೆ ಕುಡಿದು ಮನೆಗೆ

ಬರುತ್ತಾನೆ. ಇನ್ಯಾವ ಕೆಲಸವೂ ಅವನು ಮಾಡುವುದಿಲ್ಲ. ಹಿಂದೆ ಪೋರ್ಚುಗೀಸರ ಕಾಲದಲ್ಲಿ ಇವನೇನು ಕೆಲಸ ಮಾಡುತ್ತಿದ್ದನೋ ಗೊತ್ತಿಲ್ಲ. ಈಗಂತೂ ಇವನು ಉಂಡಾಡಿ. ಇವನ ವಾಸ, ಅಕ್ಕನ ಮನೆಯಲ್ಲಿ. ಇವನಿಗೂ ಹೆಂಡತಿ, ಮಕ್ಕಳಿದ್ದಾರೆ. ಬೆಳಗ್ಗೆ ಊಟ, ವಾಸ ತನ್ನ ಮನೆಯಲ್ಲಿ. ರಾತ್ರಿ ವಾಸ ಅಕ್ಕನ ಮನೆಯಲ್ಲಿ.

ಒಂದು ದಿನ ಸಂಜೆ, ಘಂಟೆ ಏಳಿರಬಹುದು. ಆಷಾಢಮಾಸವೆಂದು ಕಾಣುತ್ತದೆ. ಜೋರಾಗಿ ಗಾಳಿ ಬೀಸುತ್ತಿತ್ತು. ನನ್ನ ಸ್ನೇಹಿತರಿಬ್ಬರು ಬಂದಿದ್ದರು. ಅವರ ಜೊತೆ ಮಾತನಾಡುತ್ತಾ ನಾನು, ನನ್ನ ಹೆಂಡತಿ ಕುಳಿತಿದ್ದೆವು. ಬೀದಿ ಬಾಗಿಲು ತೆರೆದಿತ್ತು. ಬಾಗಿಲ ಹತ್ತಿರ ಹೆಜ್ಜೆ ಸದ್ದಾಯಿತು. ಸೀಮೆಎಣ್ಣೆಯ ದೀಪ ಗಾಳಿಗೆ ಆಗಾಗ ಚಿಕ್ಕದಾಗಿ, ಪುನಃ ದೊಡ್ಡದಾಗುತ್ತಿತ್ತು. ನಾನು ಎದ್ದು, ಯಾರಿರಬೇಕೆಂದು ಬಾಗಿಲ ಹತ್ತಿರ ಹೋದೆ. ಯಾರೋ ನಿಂತಿದ್ದರು. ಮುಖ ಸರಿಯಾಗಿ ಕಾಣಿಸಲಿಲ್ಲ.

"ಕೋಣ್" ಎಂದೆ.

"ದತ್ತೂರ್ ದತ್ತೂರ್" ಎಂದ. ದತ್ತೂರ್ ಎಂದರೆ ಕೊಂಕಣಿಯಲ್ಲಿ ಡಾಕ್ಟರ್ ಎಂದು.

ನಾನು, "ಹೇ ದತ್ತೂರ್ ಘರ್ ನೈ ವೋಸ್" ಎಂದೆ.

(ಇದು ಡಾಕ್ಟರ್ ಮನೆ ಅಲ್ಲ, ಹೋಗು)

ಏನೋ ಗೊಣಗುಟ್ಟಿಕೊಂಡು ಹೊರಟು ಹೋದ.

ಅವನು ಅಷ್ಟು ದೂರ ಹೋದರೂ, ಅವನು ಕುಡಿದಿದ್ದ ಕಾಜೂ ಫೆನಿ ವಾಸನೆ ಹೋಗಲೇ ಇಲ್ಲ.

ಮೂರನೇ ದಿನ ಗೊತ್ತಾಯ್ತು, ಪಕ್ಕದ ಮನೆಯ ಲೂಸಿಯಿಂದ. ನಿನ್ನೆ ಬಂದಿದ್ದವನು ಎದುರುಮನೆ ಮುದುಕಿಯ ತಮ್ಮನೆಂದು. ಕುಡಿದು ನಮ್ಮನೆಗೆ ಬಂದಿದ್ದಕ್ಕೆ ಅವನ ಅಕ್ಕ ಅವನನ್ನು ಬಯ್ದಳಂತೆ.

ಗಾಳಿ ಸ್ವಲ್ಪ ಕಮ್ಮಿಯಾದ್ದರಿಂದ ಎಂದು ಕಾಣುತ್ತದೆ, ಹೊರಗಿನಿಂದ ಮಾತುಗಳು ಜೋರಾಗಿ ಕೇಳಿಸಲಿಕ್ಕೆ ಶುರುವಾಯ್ತು. ಗೋಡೆಯಲ್ಲಿದ್ದ ಗಡಿಯಾರ ಢಣ್ ಎಂದು ಹತ್ತು ಹೊಡೆಯಿತು. ಪಕ್ಕದ ಮನೆಯಿಂದ ಮಾತುಗಳು ಕೇಳಿಸುತ್ತಿದೆ. ಅವರ ಮನೆಯಿಂದಲೇ ಮಾತುಗಳು ಕೇಳಿಸಿರಬೇಕು. ಪಿಂಟೋ ಕುಡಿದು ಬಂದಿರಬೇಕು ಎಂದಳು ಸುಶೀಲ.

ಇನ್ನೇನು ಊಟಮಾಡಬೇಕೆಂದು ಇದ್ದವನು, ಅಲ್ಲಿಂದ ಎದ್ದು, ಅಡಿಗೆಮನೆಯ ಕಿಟಕಿ ಹತ್ತಿರ ಹೋಗಿ ನಿಂತೆ. ಮಳೆಯ ತುಂತುರುಹನಿ ಮುಖಕ್ಕೆ ಸಿಡಿದು, ಚಳಿ ಎನ್ನಿಸಿತು. ನಮ್ಮನೆ ಕಿಟಕಿಗೆ ಸರಿಯಾಗಿ, ಲೂಸಿಯ ಮನೆಯ ರೂಮಿನ ಕಿಟಕಿ ಇದೆ. ಕಿಟಕಿ ಹಾಕಿತ್ತು.

ವಿಪರೀತ ಕತ್ತಲು. ಬೆಳದಿಂಗಳೂ ಇಲ್ಲದ ದಿನ. ಏನು ಮಾಡುವುದು ಎಂದು ಯೋಚಿಸುತ್ತಾ ನಿಂತೆ. ಜೋರಾಗಿ ಥಬ್ ಎನ್ನುವ ಶಬ್ದ ಕೇಳಿಸಿತು. ಯಾರೋ "ಅಯ್ಯೋ" ಎಂದು ಕಿರುಚಿದ ಸದ್ದು ಬೇರೆ.

"ಸುಶೀಲ, ನಾನು ಹೋಗಿ ನೋಡಿಬರುತ್ತೇನೆ. ಬ್ಯಾಟರಿ ಕೊಡು" ಎಂದೆ. ಸುಶೀಲ ಬ್ಯಾಟರಿಯ ಜೊತೆಯಲ್ಲಿ ಛತ್ರಿಯನ್ನೂ ಹಿಡಿದು ಬಂದಳು.

"ಪಿಂಟೊ ಜೊತೆ ನೀವೇನೂ ಜಗಳ, ಮಾತಿಗೆ ಹೋಗಬೇಡಿ. ಅವನೊಳ್ಳೆ ಭೀಮ ಇದ್ದಹಾಗೆ ಇದ್ದಾನೆ. ಜೊತೆಗೆ ಕುಡಿದು ಬಂದಿದ್ದರಂತೂ ಮುಗಿದೇ ಹೋಯ್ತು. ಬೇಗ ಬನ್ನಿ" ಎಂದಳು ಸುಶೀಲ.

ನಿಧಾನವಾಗಿ ಬೀದಿಯ ಬಾಗಿಲು ತೆಗೆದೆ. ನಿದ್ದೆ ಮಾಡುತ್ತಿದ್ದ ನನ್ನ ಮಗಳು, ಎಲ್ಲಿ ಬಾಗಿಲಿನ ಸದ್ದಿಗೆ ಎದ್ದುಬಿಡುತ್ತಾಳೋ ಎನ್ನುವ ಹೆದರಿಕೆ



ಯಿಂದ. ಅಷ್ಟು ನಿಧಾನವಾಗಿ ತೆಗೆದರೂ ಬಾಗಿಲು 'ಕಿರ್' ಎಂದಿತು.

ಸದ್ಯ, ದೇವರು ದೊಡ್ಡವನು, ಬಾಗಿಲಿನ ಸದ್ದಿಗೆ ಮಗಳು ಏಳಲಿಲ್ಲ. ಇಲ್ಲದಿದ್ದರೆ ನನ್ನನ್ನೂ ಆಂಟಿ ಮನೆಗೆ ಕರೆದುಕೊಂಡು ಹೋಗು ಎಂದು ಶುರುಮಾಡುತ್ತಿದ್ದಳು ಎಂದುಕೊಂಡೆ.

ಬಾಗಿಲಲ್ಲಿ ನಿಂತಿದ್ದ ಸಾವಿತ್ರಿಗೆ, "ನೀವಿಬ್ಬರೂ ಊಟ ಮಾಡಿ, ನಾನು ಬರುವುದು ತಡವಾಗ ಬಹುದು" ಎಂದೆ.

ಅವರ ಮನೆ ಬಾಗಿಲಲ್ಲಿ ನಿಂತೆ. ಒಳಗೆ ಹೇಗೆ ಹೋಗುವುದು ಎಂದು ಮನಸ್ಸು ಒದ್ದಾಡಿತು. ಮನೆ ಒಳಗೆ ಹೋಗಿ ಏನು ಕೇಳುವುದು? ಅವರು ಯಾಕೆ ಬಂದಿರಿ ಎಂದರೆ, ಏನು ಉತ್ತರ ಕೊಡುವುದು ಎಂದು ಯೋಚನೆ ಆಯಿತು. ಆದರೆ ಅಕ್ಕಪಕ್ಕದವರಾಗಿ, ಒಬ್ಬೊರಿಗೊಬ್ಬರು, ಸಮಯದಲ್ಲಿ ಸಹಾಯ ಮಾಡದಿದ್ದರೆ ಮನಸ್ಸು ಒಪ್ಪುವುದಿಲ್ಲ ಎನ್ನಿಸಿತು.

ಬಾಗಿಲು ಬಡಿದೆ. "ಕೋಣ್ ಆಯಿಲೋ" ಎಂದು ಜೋರಾಗಿ ಪಿಂಟೊ ಕೂಗಿದ.

ಅವನ ಧ್ವನಿ ಕೇಳಿ, ಇವರ ಮನೆಯಲ್ಲಿ ಜಗಳ ಯಾಕೆ ಆಗಿರಬಹುದು ಎಂದು ಊಹಿಸಿದೆ. ನಮ್ಮ ಕಾಲೇಜಿನಲ್ಲಿ ಕೆಮಿಸ್ಟ್ರಿ ಪಾಠ ಹೇಳುವ ಒಬ್ಬ ಕೇರಳದವ, ನಾರಾಯಣ ಎನ್ನುವವನನ್ನು, ಈಗ ಹದಿನೈದು ದಿನದ ಹಿಂದೆ ಅವರ ಮನೆಗೆ ಪೇಯಿಂಗ್ ಗೆಸ್ಟ್ ಆಗಿ ಕಳುಹಿಸಿಕೊಟ್ಟಿದ್ದೆ. ಈ ಗಲಾಟೆ ನಡೆಯುವ ಅರ್ಧ ಘಂಟೆ ಮುಂಚೆ ಅವನು, ನಮ್ಮನೆಗೆ ಬಂದು ಮಾತನಾಡುತ್ತಾ ಕುಳಿತಿದ್ದ. ಊಟದ ಹೊತ್ತಾಯಿತೆಂದು ನಮ್ಮನೆಯಿಂದ ಅವರ ಮನೆಗೆ ಹೋದ. ಈ ಪಿಂಟೊ ಅವನನ್ನು ನೋಡಿ ಜಗಳವಾಡುತ್ತಿರಬೇಕೆಂದುಕೊಂಡೆ.

ಈ ಗಲಾಟೆ ನೋಡಿ ನಾರಾಯಣ ಏನು ಹೆದರಿಕೊಂಡನೋ ಏನೋ! ನಾನ್ಯಾಕೆ ಇದೆಲ್ಲಾ ಮಾಡಿದೆ. ಪಾಪ! ಆ ಮುದುಕಿ, ಮಗಳು ಲೂಸಿ ಇಬ್ಬರೂ, ಯಾರನ್ನಾದರೂ ನಮಗೆ ಪೇಯಿಂಗ್ ಗೆಸ್ಟ್ ಆಗಿ ಕೊಡಿ. ದುಡ್ಡಿನ ತಾಪತ್ರಯ ಎಂದಿದ್ದರು. ಈ ಹುಡುಗನೂ ಒಬ್ಬಂಟಿ ಇದ್ದ. ಇವನನ್ನು ಕಳುಹಿಸಿದೆ. ಇದು ಒಳ್ಳೆಯ ಗ್ರಹ ಚಾರಕ್ಕೆ ಬಂತಲ್ಲ ಎಂದು ಬೇಜಾರಾಯಿತು.

ಅಷ್ಟರಲ್ಲಿ ನನ್ನ ಹೆಂಡತಿ ನಮ್ಮನೆ ಕಾಂಪೌಂಡ್ ನಿಂದ, "ಮನೆಗೆ ಬನ್ನಿ" ಎಂದು ಕೂಗಿದಳು. ಅವಳಿಗೂ ಪಿಂಟೊನ ಧ್ವನಿ ಕೇಳಿಸಿರಬೇಕು.

ನಾನು, ಸುಶೀಲಳಿಗೆ ಒಳಗೆ ಹೋಗೆಂದು ಕೈಸನ್ನೆ ಮಾಡಿ, ಲೂಸಿಯ ಮನೆ ಬಾಗಿಲನ್ನು ಜೋರಾಗಿ ಬಡಿದೆ. ಯಾರೂ ಓಗೊಡಲಿಲ್ಲ. ಮೂರ್ನಾಲ್ಕು ಸಲ ಜೋರಾಗಿ ಕೂಗಿದ ಮೇಲೆ, ನಾರಾಯಣ ಬಂದು ಬಾಗಿಲು ತೆಗೆದು, ಏನೋ ಹೇಳಲಿಕ್ಕೆ ಬಾಯಿ ತೆಗೆದ. ನಾನು ಅವನಿಗೆ ಕಣ್ಸನ್ನೆ ಮಾಡಿ, ನೀನು ಸುಮ್ಮನೆ ರೂಮಿಗೆ ಹೋಗು ಎಂದು ಹೇಳಿದೆ.

ಸೀದಾ ಹಾಲಿನಿಂದ ರೂಮಿಗೆ ಹೋದೆ. ಲೂಸಿ ಮಂಚದ ಪಕ್ಕದ ಮೂಲೆಯಲ್ಲಿ ಅಳುತ್ತಾ ನಿಂತಿದ್ದಾಳೆ. ಅವಳ ಮುಖ ಕೆಂಪಗಾಗಿತ್ತು. ನನ್ನ ನೋಡಿ ತಲೆತಗ್ಗಿಸಿದಳು. ನಾನು ಅಲ್ಲಿಗೆ ಹೋಗಿದ್ದು ಅವಳಿಗೆ ನಾಚಿಕೆಯಾಗಿರಬೇಕು. ನನ್ನ ಪ್ರವೇಶ ಅವರಿಗೆ ಆಶ್ಚರ್ಯವನ್ನುಂಟು ಮಾಡಿರಬೇಕು.

ಪಿಂಟೊ, ಒಂದು ಕೋಲುಹಿಡಿದು ಲೂಸಿಯ ಪಕ್ಕದಲ್ಲಿ ನಿಂತಿದ್ದ. ಅವನ ತಲೆ ಕೂದಲು ಕೆದರಿ, ಮುಖ ಬೆವರಿಟ್ಟಿತ್ತು. ಬೆಳ್ಳಗೆ, ಕೆಂಪಗೆ ಇದ್ದವನು. ಈಗಂತೂ ಅವನ ಮುಖ, ಒಳ್ಳೆ ಟೊಮೆಟೊ ಹಣ್ಣಿನ ಹಾಗೆ ಹೊಳೆಯುತ್ತಿತ್ತು. ಒಂದು ಬಿಳಿಯ ನಿಕ್ಕರ್ ಹಾಕಿದ್ದ. ಅವನ ಬೆಳ್ಳಗಿನ ಮೈಯಲ್ಲಿ ಕರಿಕೂದಲು ಎದ್ದು ಕಾಣುತ್ತಿತ್ತು. ನನ್ನ ನೋಡಿ ಅವನಿಗೆ ಏನು ಹೇಳಬೇಕೆಂದು ತೋಚದೆ ತೊದಲುತ್ತ, "ಆವ್ ಪ್ರೊಫೆಸರ್" ಎಂದ. ಲೂಸಿಯ ತಾಯಿ ಅವರಿಬ್ಬರಿಗೂ ಸ್ವಲ್ಪ ದೂರದಲ್ಲಿ ನಿಂತಿದ್ದರು.

ನಾನು ಅಲ್ಲೇ ಇದ್ದ ಕುರ್ಚಿಯ ಮೇಲೆ ಕುಳಿತೆ. ಹೇಗೆ ಮಾತನ್ನು ಪ್ರಾರಂಭಿಸಬೇಕೆಂದು ತಿಳಿಯದೆ ಸುಮ್ಮನೆ ಇದ್ದೆ.

''ಈ ಜನ ಬಹಳ ಕೆಟ್ಟವರು, ನನ್ನ ಎದುರಿಗೆ ಇಲಿ ಇದ್ದ ಹಾಗೆ ಇರ್‍ತಾರೆ. ನಾನು ಆ ಕಡೆ ಹೋದ ತಕ್ಷಣ ಶುರುಮಾಡ್ತಾರೆ'' ಎಂದು ಹಲ್ಲುಕಡಿದ.

ನಾನು ಅವನಿಗೇನು ಉತ್ತರ ಕೊಡುವುದು ಎಂದು ಯೋಚಿಸುವಷ್ಟರಲ್ಲಿ ಪಿಂಟೊ ಲೂಸಿಯ ಕಡೆ ತಿರುಗಿ ಅವಳ ಮುಖದ ಹತ್ತಿರ ಹೋಗಿ, ''ಕೋಣ್ ಆಯಿಲೊ'' ಎಂದು ಗದರಿಸಿದ.

ಅವಳು ಹೆದರಿ ಹಿಂದಕ್ಕೆ ಹೋದಳು. ಕಣ್ಣಲ್ಲಿ ನೀರು ಸುರಿಯಲು ಶುರುವಾಯ್ತು. ಬಾಯಲ್ಲಿ ಸ್ವರ ಹೊರಡಲಿಲ್ಲ. ಆ ಮುದುಕಿಯಂತೂ ಮೂಲೆಯಲ್ಲಿ ಮುದುರಿಕೊಂಡು ಕುಳಿತಳು.

ಇನ್ನೊಂದು ಸಲ ಜೋರಾಗಿ, ''ಕೋಣ್ ಆಯಿಲೊ'' ಎಂದು ಕೂಗು ಹಾಕಿ, ಅವಳ ಬೆನ್ನಿನ ಮೇಲೆ ಪಟ್ ಎಂದು ಹೊಡೆದ. ಅವಳು ಈಗ ಜೋರಾಗಿ 'ಹೋ' ಎಂದು ಅಳುತ್ತಾ, ನಿಂತ ಜಾಗದಿಂದ ಚಂಗನೆ ಪಕ್ಕಕ್ಕೆ ಸರಿದಳು.

ನಾನು ಹೆದರಿಕೆಯಿಂದ, ಕುಳಿತ ಜಾಗದಿಂದ ಮೇಲೆದ್ದು, 'ಈ ಕಡೆ ಬಾ' ಎಂದು ಅವನ ಕೈಹಿಡಿದು ಎಳೆದೆ. ನಾನು ಎಳೆದರೆ ಬರುವುದಕ್ಕೆ ಅವನೇನು ತೆಳ್ಳಗಿನ ಆಸಾಮಿಯೇ! ಒಳ್ಳೇ ಗೂಟ ನಿಂತಹಾಗೆ ಅಲ್ಲೇ ನಿಂತಿದ್ದ. ಚಲಿಸಲೇ ಇಲ್ಲ. ಅವನು ಅವಳನ್ನು ಅಲ್ಲಿಗೇ ಬಿಡಲಿಲ್ಲ. ''ನೀನು ಹೇಳುವ ತನಕ ನಾನು ಬಿಡುವುದಿಲ್ಲ ಇವತ್ತೆ ರಾತ್ರಿ, ಎಷ್ಟು ಹೊತ್ತಾದರೂ ಸರಿ'' ಎಂದ.

ಮನೆಯಲ್ಲಿ ಸುಮ್ಮನೆ ಊಟಮಾಡಿ ಮಲಗಿರದೆ, ಇವರ ಮನೆಗೆ ಯಾಕಾದರೂ ಬಂದು ಸಿಕ್ಕಿಹಾಕಿಕೊಂಡೆ ಎನ್ನಿಸಿತು. ನನಗೆ ಬರುವ ಕೊಂಕಣಿ, ಮರಾಠಿ ಮತ್ತು ಹಿಂದಿ ಭಾಷೆಯೆಲ್ಲಾ ಮಿಕ್ಸ್ ಮಾಡಿ ಲೂಸಿಯ ಹತ್ತಿರ ಮಾತನಾಡಿದೆ. ''ನಿನ್ನದೇನೂ ತಪ್ಪಿಲ್ಲದಿದ್ದರೆ ಹೇಳಲಿಕ್ಕೆ ಯಾಕೆ ಹೆದರುತ್ತಿ, ಹೇಳಿಬಿಡು'' ಎಂದೆ.

ಅವಳ ಪಕ್ಕದಲ್ಲೇ ಉತ್ತರಕ್ಕಾಗಿ ಕಾಯುತ್ತಿದ್ದ ಪಿಂಟೊನ್ನ ಬಲವಂತವಾಗಿ ಎಳೆದು ಕುರ್ಚಿಯ ಮೇಲೆ ಕೂಡಿಸಿದೆ.

ಇದರ ಮಧ್ಯೆ ಆ ಮುದುಕಿ, ಏನೋ ಹೇಳಲಿಕ್ಕೆ ಬಾಯಿ ತೆರೆದಳೋ ಇಲ್ಲವೋ, ಪಿಂಟೊ ರೋಷದಿಂದ, ''ಮುಚ್ಚುಬಾಯಿ, ಏ ಬುಡ್ಡಿ ಬಹುತ್ ಬದ್ಮಾಶ್ ಹೈ'' ಎಂದು ಅವಳ ಮೇಲೆ ಕೈ ಎತ್ತಿದ.

ಆ ಮುದುಕಿಯೋ ಸಾಯುವ ಹಾಗಿದ್ದಾಳೆ. ಇವನ ಹೊಡೆತಕ್ಕೆ ಎಲ್ಲಿ ಸತ್ತುಹೋಗುತ್ತಾಳೋ, ಆಮೇಲೆ ನಾನು ಕೋರ್ಟಿಗೆ ಹೋಗಿ ಸಾಕ್ಷಿ ಎಲ್ಲಿ ಹೇಳಬೇಕಾಗುತ್ತದೋ, ನನಗೆಲ್ಲಿಯ ಗ್ರಹಚಾರ ಎಂದುಕೊಂಡು, ಅವಳ ಕಡೆ ತಿರುಗಿ, ಅವಳಿಗೆ ಕೈಸನ್ನೆ ಮಾಡಿ ಏನೂ ಮಾತನಾಡಬೇಡವೆಂದು ಹೇಳಿದೆ.

ಲೂಸಿ ಅಳುತ್ತಾ, ''ಬೆಳಿಗ್ಗೆ 11 ಘಂಟೆಗೆ ಡಿಸೋಜ ಬಂದಿದ್ದ, ಅವನು ನನಗೆ ಬಾಂಬೆಯಲ್ಲಿ ಕೆಲಸ ಕೊಡಿಸುತ್ತೇನೆಂದು ಹೇಳಿದ. ಅವನಿಗೆ ಅಲ್ಲೆಲ್ಲಾ ತುಂಬ ದೊಡ್ಡ ಮನುಷ್ಯರು ಗೊತ್ತಿದ್ದಾರೆಂದು ಹೇಳಿ ನನ್ನ ಜೊತೆ ನೀನು ಬಾ, ನಿನ್ನ ಬಾಂಬೆಗೆ ಕರೆದುಕೊಂಡು ಹೋಗುತ್ತೇನೆಂದು ಹೇಳಿದ'' ಎಂದಳು.

ಅವಳು ಪೂರ್ತಿ ಹೇಳುವಷ್ಟರಲ್ಲೇ ಪಿಂಟೊ ''ನೋಡಿದಿರಾ ಪ್ರೊಫೆಸರ್, ಇವರಿಗೋಸ್ಕರ ನಾನು ಎಷ್ಟು ಕಷ್ಟಪಡುತ್ತೇನೆ. ಇವರು ನನ್ನ ಕೇರೇ ಮಾಡುವುದಿಲ್ಲ. ಈ ಊರಿನವರೆಲ್ಲ ನನ್ನನ್ನ ಇವರ ಮನೆಗೆ ಯಾಕೆ ಹೋಗುತ್ತಿ ಎಂದು ಬಯ್ಯುತ್ತಾರೆ. ನಾನು, ಪಾಪ ಇವರ ಕಷ್ಟ ಸ್ವಲ್ಪವಾದರೂ ಕಮ್ಮಿಯಾಗಲಿ ಎಂದು ಬರುತ್ತಿದ್ದೇನೆ. ಇವಳು ಡಿಸೋಜ ಅಂತ ಹೇಳಿದಳಲ್ಲ, ಅವನು ಪಕ್ಕಾ ಲುಚ್ಚ, ಲಫಂಗ, ಎಷ್ಟು ಜನ ಹುಡುಗಿಯರನ್ನು ಬಾಂಬೆಗೆ ಕರೆದುಕೊಂಡು ಹೋಗಿ ಮಾರಿದ್ದಾನೆ ಗೊತ್ತಾ!'' ಎಂದು ಹಲ್ಲುಕಡಿದ.

''ಅವನು ಇಲ್ಲಿಗೆ ಬರುತ್ತಿರುವುದು ಇದೇ ಮೊದಲನೇ ಸಲ ಅಲ್ಲ, ನನಗೆಲ್ಲಾ ಚೆನ್ನಾಗಿ ಗೊತ್ತು. ಆಗಾಗ ಬಂದು ಹೋಗುತ್ತಾನೆ. ಇವಳಿಗೆ ಬಾಂಬೆಯಲ್ಲಿ ಸಿಗುವ ಕೆಲಸ ಸೂಳೆಗಾರಿಕೆ ಒಂದೇ'' ಎಂದು ಕುಳಿತಲ್ಲಿಂದ ಧಡಕ್ಕನೆ ಎದ್ದು ಅವಳ ಮೇಲೆ ಕೈ ಮಾಡಿದ. ಅವಳು 'ಅಯ್ಯಯ್ಯೋ'

ಎಂದು ಅಲ್ಲಿಂದ ಎದ್ದು ರೂಮೆಲ್ಲಾ ಕುಣಿದಾಡಿದಳು.

ನಾನು ಪುನಃ, ಅವನಿಗೆ ಕೈ ಮಾಡಬೇಡವೆಂದು ಹೇಳಿ, ಲೂಸಿಯ ಹತ್ತಿರ ಹೋಗಿ, "ಡಿಸೋಜ ಯಾರು? ಅವನು ಬಾಂಬೆಯಲ್ಲಿ ಏನು ಕೆಲಸ ಮಾಡುತ್ತಾನೆ?" ಎಂದು ಕೇಳಿದೆ.

"ಅವನಿಗೆ ಬಾಂಬೆಯಲ್ಲಿ ದೊಡ್ಡ ಕೆಲಸ ಇದೆಯಂತೆ. ಅವನಿಗೆ ಮಿನಿಸ್ಟರ್ ಎಲ್ಲಾ ಗೊತ್ತಂತೆ. ಬಾಂಬೆಯಲ್ಲಿ ದೊಡ್ಡ ಮನೆ ಇದೆಯಂತೆ. ಅವನ ಕೆಲಸ, ವಿಳಾಸ ಏನೂ ಗೊತ್ತಿಲ್ಲ. ನನ್ನ ಸ್ನೇಹಿತೆ ಮೇರಿನೂ ಇವನ ಜೊತೆ ಹೋಗಿ ಕೆಲಸ ಪಡೆದುಕೊಂಡಳು" ಎಂದಳು ಲೂಸಿ.

"ಮೇರಿ ವಿಳಾಸ, ಏನು ಕೆಲಸ ಮಾಡುತ್ತಿದ್ದಾಳೆಂದು ನಿನಗೆ ಗೊತ್ತಾ? ಗೊತ್ತಿದ್ದರೆ ಅವಳಿಗೆ ಕಾಗದ ಬರೆದು ಅವಳಿಂದ ಎಲ್ಲಾ ವಿಷಯ ತಿಳಿದುಕೊ" ಎಂದೆ ನಾನು.

"ಅವಳ ಬಗ್ಗೆ ನನಗೇನೂ ಗೊತ್ತಿಲ್ಲ: ಡಿಸೋಜ ಒಳ್ಳೇ ಕೆಲಸ ಕೊಡಿಸಿದೆ ಎಂದು ಹೇಳಿದ" ಎಂದಳು ಲೂಸಿ.



ಈ ತಾಯಿ-ಮಗಳ ಬಗ್ಗೆ ನನಗೆ ತುಂಬ ಆಶ್ಚರ್ಯವಾಯ್ತು. ಅವನ ಬಗ್ಗೆ ಏನೂ ತಿಳಿಯದೆ, ಈ ತಾಯಿ, ಮಗಳನ್ನು ಅಲ್ಲಿಗೆ ಕಳುಹಿಸಲು ತಯಾರಾಗಿದ್ದಾಳೆ. ಇವರೆಂಥ ಜನ! ಈ ಮುದುಕಿಗೆ ಹುಚ್ಚೋ, ಬೆಪ್ಪೋ ಇರಬೇಕೆಂದುಕೊಂಡೆ.

ಪಿಂಟೋ ಲೂಸಿಯ ಅಮ್ಮನ ಕಡೆ ತಿರುಗಿ, "ಆ ಬುಡ್ಡಿ ಇದ್ದಾಳಲ್ಲ ಅವಳದ್ದೇ ಇದೆಲ್ಲಾ, ನನಗೇನೂ ಗೊತ್ತಿಲ್ಲ ಎಂದು ತಿಳಿದಿದ್ದಾಳೆ. ನಾನು ಈ ಮನೆಯಲ್ಲಿ ಇರುವ ತನಕ, ನನಗೆ ಬೆಣ್ಣೆ ಹಚ್ಚುತ್ತಾರೆ, ನಾನು ಹೊರಗೆ ಹೋದನಂತರ ಶುರುಮಾಡುತ್ತಾಳೆ. ನಾನೇನಾದರೂ ಈ ಮನೆಗೆ ಬರದೇ ಇದ್ದಿದ್ದರೆ, ಈ ಮನೆ ಒಂದು ಸೂಳೆಗೇರಿ ಆಗುತ್ತಿತ್ತು" ಎಂದ.

"ನನ್ನ ಜೊತೆ ಬನ್ನಿ ಪ್ರೊಫೆಸರ್", ಎಂದು ಪಕ್ಕದ ರೂಮಿಗೆ ಕರೆದುಕೊಂಡು ಹೋಗಿ ಮಂಚದ ಕೆಳಗೆ ಇದ್ದ ಒಂದು ಸೂಟ್‌ಕೇಸ್ ಎಳೆದ. ಅದರಲ್ಲಿದ್ದ ಸಾಮಾನೆಲ್ಲಾ ಒಂದೊಂದೇ ಕಿತ್ತೆಸೆದ. "ನೋಡಿ, ಈ ಫ್ರಾಕ್ಸ್, ನೈಟೀ, ಎಲ್ಲಾ ನಾನೇ ಅವಳಿಗೆ ತಂದುಕೊಟ್ಟಿರುವುದು. ನಾನು ಕೊಡಿಸಿದ್ದೆಲ್ಲಾ ಸೂಟ್‌ಕೇಸ್‌ನಲ್ಲಿ ಹಾಕಿ, ಊರಿಗೆ ಹೋಗಲಿಕ್ಕೆ ರೆಡಿಯಾಗಿದ್ದಾಳೆ. ನನ್ನ ಹತ್ತಿರ ಏನೇನೋ ಸುಳ್ಳು ಹೇಳಿ, ದುಡ್ಡು ಕಸಿಯಬೇಕೆಂದು ಇದ್ದರು. ಆದರೆ ನನಗೆ ಇದೆಲ್ಲಾ ಬೇರೆಯವರ ಮುಖಾಂತರ ಗೊತ್ತಾಗಿ, ಇದು ಇಲ್ಲಿಗೇ ನಿಂತಿತು" ಎಂದು ದೊಡ್ಡ ಉಸಿರುಬಿಟ್ಟ.

ನಾನು ಪಿಂಟೊನ್ನ ವರಾಂಡಕ್ಕೆ ಕರೆದುಕೊಂಡು ಹೋಗಿ, "ಹೆಂಗಸರ ಮೇಲೆ ಹಾಗೆಲ್ಲಾ ಕೈ ಮಾಡಬಾರದು, ನಾಳೆ ಏನಾದರೂ ಹೆಚ್ಚು-ಕಮ್ಮಿ ಆದರೆ ನಿನ್ನ ಮೇಲೆ ಬರುತ್ತದೆ" ಎಂದು ಬುದ್ಧಿವಾದ ಹೇಳಿ ಮನೆಗೆ ಹೊರಟೆ.

ಮನೆಯಲ್ಲಿ, ನನ್ನ ಹೆಂಡತಿ, ಇನ್ನೂ ಊಟ ಮಾಡದೆ ಸಿಡುಗುಟ್ಟುತ್ತಿದ್ದಳು. ನಾವಿಬ್ಬರೂ ಊಟ ಮಾಡಿ, ಹಾಸಿಗೆಗೆ ಬರುವ ಹೊತ್ತಿಗೆ ಹನ್ನೊಂದು ಘಂಟೆಯಾಗಿತ್ತು. ನಾನು ನಿಧಾನವಾಗಿ, ಅವರ

ಮನೆಯಲ್ಲಿ ನಡೆದಿದ್ದನ್ನೆಲ್ಲಾ ಹೇಳಿದೆ. ಅದನ್ನೆಲ್ಲಾ ಕೇಳುತ್ತಾ, ನನ್ನ ಹೆಂಡತಿಯ ಸಿಟ್ಟು ಸ್ವಲ್ಪ ಕಡಿಮೆಯಾಯಿತು. ''ಅಲ್ಲಾ, ಈ ಮನುಷ್ಯ ಅವಳನ್ನು ಯಾಕೆ ಮದುವೆ ಆಗಬಾರದು?'' ಎಂದಳು ಸುಶೀಲ.

''ನನಗೇನು ಗೊತ್ತು, ನಿನಗೆ ಅವರು ಸಿಕ್ಕಾಗ ಈ ಪ್ರಶ್ನೆಯನ್ನು ಅವರಿಗೆ ಕೇಳು, ಈಗ ಮಲಗೋಣ, ಎಲ್ಲಿ ಈ ಕಡೆ ತಿರುಗು'' ಎಂದು ಸುಶೀಲಳನ್ನು ಹತ್ತಿರಕ್ಕೆಳೆದುಕೊಂಡೆ.



ಬೆಳಿಗ್ಗೆ ನಾನು ಎದ್ದಾಗ ಘಂಟೆ ಎಂಟಾಗಿತ್ತು. ಒಂಬತ್ತಕ್ಕೆ ಕ್ಲಾಸಿತ್ತು. ನಮ್ಮನೆಯಿಂದ ನಡೆದು ಹೋಗಲಿಕ್ಕೆ, ಹತ್ತು ನಿಮಿಷವಾದರೂ ಬೇಕು. ಬೇಗ ಮುಖತೊಳೆದು, ಅಡಿಗೆ ಮನೆಯಲ್ಲಿದ್ದ ಖುರ್ಚಿಯಲ್ಲಿ ಕುಳಿತೆ. ನನ್ನ ಮಗಳು ನಯನ, ಹಠ ಮಾಡುತ್ತಿದ್ದಳು. ''ಬಾ ಇಲ್ಲಿ, ನನ್ನ ತೊಡೆಯ ಮೇಲೆ ಕುಳಿತುಕೊ. ಏಕೆ ಅಳುತ್ತಿದ್ದಿ'' ಎಂದು ಕೇಳಿದೆ. ''ನಾನು ಲೂಸಿ ಆಂಟಿ ಮನೆಗೆ ಹೋಗಬೇಕು'' ಎಂದು ಅಳಲಿಕ್ಕೆ ಶುರು ಮಾಡಿದಳು.

''ನೋಡಮ್ಮಾ, ಅವರಿನ್ನೂ ಮಲಗಿದ್ದಾರೆ. ಇಷ್ಟು ಬೇಗ ಹಾಗೆಲ್ಲಾ ಇನ್ನೊಬ್ಬರ ಮನೆಗೆ ಹೋಗಬಾರದು'' ಎಂದು ಸಮಾಧಾನ ಮಾಡಿದೆ.

''ನೀನು ಸುಳ್ಳು ಹೇಳುತ್ತಿದ್ದಿ, ಕಿಟಕಿಯಿಂದ ತೋರಿಸು'' ಎಂದಳು. ನಮ್ಮ ಮನೆ ಕಿಟಕಿಯ ಹತ್ತಿರ ಅವಳನ್ನು ಎತ್ತಿಕೊಂಡುಹೋಗಿ ನಿಂತೆ. ಅವರ ಮನೆ ರೂಮಿನ ಕಿಟಕಿ ತೆರೆದಿತ್ತು. ಅವಳು ಇನ್ನೂ ಮಂಚದ ಮೇಲೆ ಮಲಗಿದ್ದಳು. ಪಿಂಟೊ, ಅವಳ ಹತ್ತಿರ ಇದ್ದ ಖುರ್ಚಿಯಲ್ಲಿ ಕುಳಿತು, ಅವಳನ್ನೇ ನೋಡುತ್ತಿದ್ದ. ಅವನು ಕುಳಿತಿದ್ದ ರೀತಿ, ಹೆಣ ಕಾಯುವ ಪೋಲೀಸರನ್ನು ನೆನಪಿಗೆ ತರುತ್ತಿತ್ತು.

''ನೋಡು ನಯನ, ಇನ್ನೂ ಆಂಟಿ ಮಲಗಿದ್ದಾರೆ. ನೀನು ಅವರು ಎದ್ದಮೇಲೆ ಹೋಗು'' ಎಂದು ಅವಳಿಗೆ ಅರ್ಥವಾಗುವ ಹಾಗೆ ಹೇಳಿ, ಅವಳನ್ನು ಕೆಳಗೆ ಇಳಿಸಿ, ನಾನು ತಿಂಡಿ ತಿಂದು, ಕಾಲೇಜಿಗೆ ಸಿದ್ಧನಾಗಲು ಹೊರಟೆ.

ನಮ್ಮನೆಯಲ್ಲಿ ಬಾವಿ ಇರಲಿಲ್ಲ. ಅಕ್ಕಪಕ್ಕದ ಮೂರು ಮನೆ ಸೇರಿ, ಒಂದು ಬಾವಿಯಿತ್ತು. ನಾವು ಲೂಸಿಯ ಮನೆಯ ಬಾವಿಯಿಂದ ನೀರು ತರಬೇಕಿತ್ತು.

ಕಾಲೇಜಿನಿಂದ ಬಂದ ನಾನು, ಸೀದಾ ನನ್ನ ರೂಮಿಗೆ ಹೋಗಿ, ಮಂಚದ ಮೇಲೆ ಮಲಗಿ ಕೊಂಡೆ. ಎಷ್ಟು ಹೊತ್ತಾದರೂ ನಾನು ಅಡಿಗೆ ಮನೆ ಕಡೆ ಬರಲಿಲ್ಲವೆಂದು ಸುಶೀಲ, ತಾನೇ ರೂಮಿಗೆ ಬಂದು, ನನ್ನ ಹಾಸಿಗೆ ಮೇಲೆ ಕುಳಿತಳು.

''ನನಗಂತೂ ಈ ಬಾರಿ ನೀರು ಸೇದಿ ಸಾಕಾಗಿದೆ. ಈ ಕೆಲಸದವಳು ಒಂದು ದಿನ ಬಂದರೆ ಇನ್ನೊಂದಿನ ಬರುವುದಿಲ್ಲ. ಸಿಟಿಯಲ್ಲಿ ಬೇರೆ ಮನೆ ನೋಡಿ. ಕಾಲೇಜಿಗೆ ದೂರ ವಾದರೂ ನಲ್ಲಿ, ಲೈಟು ಎರಡೂ ಇರುತ್ತದೆ'' ಎಂದಳು.

''ಎಲ್ಲದಕ್ಕಿಂತ ಈ ನೆರೆಹೊರೆ ತಪ್ಪುತ್ತಾರಲ್ಲ, ಅದೊಂದು ನೆಮ್ಮದಿ'' ಎಂದೆ ನಾನು.

''ನಾನು ನೀರು ತರಕ್ಕೆ ಬೆಳಿಗ್ಗೆ ಹೋಗಿದ್ದೆನಲ್ಲ, ಆ ಮುದುಕಿ ದಿನದ ಹಾಗೆ ಮಾತನಾಡಲಿಲ್ಲ. ಆ ಕಡೆ, ಈ ಕಡೆ ನೋಡಿ ಹೆದರಿಕೊಂಡು, ಕೈ ಸನ್ನೆ, ಬಾಯಿಸನ್ನೆ ಮಾಡಿ, ನಿನ್ನ ಗಂಡ ಬರದಿದ್ದರೆ ನಾವಿಬ್ಬರೂ ಸತ್ತೇ ಹೋಗುತ್ತಿದ್ದೆವು. ನಿನ್ನೆ ಅವನು ಹೊಡೆದಿದ್ದು ಲೂಸಿಯ ಕಿವಿಗೆ ಪೆಟ್ಟುಬಿದ್ದು, ರಕ್ತ ಬಂದು ಗಾಯ ಆಗಿದೆ. ಇನ್ನೂ ಎದ್ದೇ ಇಲ್ಲ, ಮಲಗಿದ್ದಾಳೆ ಎಂದು ಹೇಳಿತು. ನನಗೋ, ಆ ಪಿಂಟೊ ಇದನ್ನೆಲ್ಲಾ ನೋಡಿದರೆ, ಪುನಃ ಎಲ್ಲಿ ಜಗಳಕ್ಕೆ ಬರುತ್ತಾನೋ ಎಂದು ಹೆದರಿಕೆ ಆಗುತ್ತಿತ್ತು. ಅದಕ್ಕೆ ಇವತ್ತು ಹೆಚ್ಚು ನೀರು ತರಲೇ ಇಲ್ಲ. ಬರೀ ಎರಡು ಕೊಡ ಮಾತ್ರ ತಂದೆ'' ಎಂದಳು ಸುಶೀಲ.

''ನಮ್ಮನೆ ಬಾಗಿಲಲ್ಲಿ, ನಾನು ಹನ್ನೊಂದು ಘಂಟೆಗೆ ನಿಂತಾಗ, ಪಿಂಟೊ ಕಾರಿನಲ್ಲಿ ಹೋದ. ಅವನು ಹೋಗುವ ತನಕ ಮನೆ ನಿಶ್ಶಬ್ದವಾಗಿತ್ತು. ಅವನು ಹೋದ ಮೇಲೆ ಶುರುವಾಯ್ತು. ಈ ತಾಯಿಮಕ್ಕಳ ಪಿಸುಪಿಸು, ಗಲಾಟೆ, ನಗು ಎಲ್ಲಾ. ''ನನಗೇನೋ, ಪಿಂಟೊ ಇನ್ನೊಂದು ಸಲ ಈ ಕಡೆ ಬರುವುದಿಲ್ಲವೆಂದು ಕಾಣುತ್ತದೆ'' ಎಂದಳು ಸುಶೀಲ.

''ಹೋಗಲಿಬಿಡು, ಅವನು ಬಂದರೂ, ಬರದಿದ್ದರೂ ನಮಗೇನೂ ತೊಂದರೆಯಿಲ್ಲ, ನಾನು ತುಂಬ ಬರೆಯುವುದು ಇದೆ ನನಗೇನಾದರೂ ತಿನ್ನಲಿಕ್ಕೆ ಮತ್ತೆ ಟೀ ಕೊಡು'' ಎಂದೆ.

ಕೈಯಲ್ಲಿ ಬೊಂಬೆ ಹಿಡಿದುಕೊಂಡು ಬಂದು, ನನ್ನ ಹತ್ತಿರ ಅದನ್ನು ಮಲಗಿಸಿದ ನಯನ, ''ಅಪ್ಪ ಬೆಳಿಗ್ಗೆ ನಮ್ಮನೆ ಕಾಂಪೌಂಡ್‌ನಲ್ಲಿ ಹಂದಿ ಬಂದಿತ್ತು. ನಾನು ಕಲ್ಲು ತೊಗೊಂಡು ಅದನ್ನು ಹೊಡೆದೆ'' ಎಂದು ನಕ್ಕಳು.

ಸುಶೀಲ ಹೇಳಿದ ಹಾಗೆ ಸಿಟಿನಲ್ಲಿ ಮನೆ ಮಾಡಬೇಕೆಂದುಕೊಂಡೆ.

ರಾತ್ರಿ ಸುಮಾರು 9 ಘಂಟೆ ಇರಬಹುದು. ಗಾಳಿದಿನ ಆದ್ದರಿಂದ ಹಚ್ಚಿಟ್ಟ ದೀಪಗಳು ನಿಲ್ಲುತ್ತಲೇ ಇರಲಿಲ್ಲ. ಆಗಾಗ ಆರುತ್ತಿತ್ತು. ಕಿಟಕಿ ಹಾಕಿದರೂ, ಅದರ ಸಂದಿನಿಂದ ಸುಯ್ ಎನ್ನುವ ಗಾಳಿ ಒಳಗೆ ನುಗ್ಗುತ್ತಿತ್ತು. ಅಡಿಗೆ ಮನೆ ಕಿಟಕಿಗೆ ಬರೀ ಸರಳುಗಳು ಇದ್ದುದರಿಂದ, ಅಲ್ಲಿಂದ ಜೋರಾಗಿ ಗಾಳಿ ಒಳಗೆ ನುಗ್ಗುತ್ತಿತ್ತು. ದೀಪ ಆರಿದಾಗ, ನನ್ನ ಮಗಳು ನಯನ, ಇಷ್ಟು ದಿನ ಅಭ್ಯಾಸ ವಾಗಿದ್ದರೂ, ಕಿಟಾರೆಂದು ಕಿರುಚಿ ಅಳುತ್ತಿದ್ದಳು.

ಹೊರಗಡೆ ಕಾರಿನ ಶಬ್ದವಾಯಿತು. ನಮ್ಮನೆಯ ಮುಂದೆ ನಿಂತ ಹಾಗಾಗಿ, ಮರಾಠಿ ಪ್ರೊಫೆಸರ್ ಕೇಲ್‌ಕರ್ ಬಂದನೇನೋ ಎಂದು ಕೊಂಡು ಬಾಗಿಲು ತೆಗೆದು ನೋಡಿದೆ. ಪಿಂಟೊ ಕಾರಿನಿಂದ ಇಳಿಯುತ್ತಿದ್ದಾನೆ. ಒಂದು ದೊಡ್ಡ ಪ್ಯಾಕೆಟ್ ಕೈಯಲ್ಲಿತ್ತು. ಇನ್ನೊಂದು ಕೈಯಲ್ಲಿ, ಇನ್ನೆರಡು ಉದ್ದದ ಕವರುಗಳು ಇದ್ದವು. ಒಂದು ಕವರು ಬಾಟ್ಲಿ ಇರಬೇಕೆಂದುಕೊಂಡೆ.

ನಾವು ಊಟಕ್ಕೆ ಕುಳಿತಿದ್ದ ಟೈಮಿಗೆ ಸರಿಯಾಗಿ, ಅವರ ಮನೆಯಲ್ಲಿ ಜೋರಾಗಿ ನಗುವ ಶಬ್ದ ಕೇಳಿಸಿತು. ಅವರ ಮನೆ ಕಿಟಕಿ ತೆರೆದಿತ್ತು. ರೂಮಿನ ಮಧ್ಯೆ ಒಂದು ಮೇಜು, ಅದರ ಮೇಲೆ ದೊಡ್ಡ ದೀಪ, ಎರಡು ಬಾಟಲಿ ಮತ್ತೆ ಗ್ಲಾಸ್‌ಗಳು ಇದ್ದವು. ಪಿಂಟೊ, ಲೂಸಿ ಇಬ್ಬರೂ ಮಂಚದ

ಮೇಲೆ ಕುಳಿತು ಏನೋ ಮಾತನಾಡಿಕೊಂಡು ನಗುತ್ತಿದ್ದರು. ಮುದುಕಿ ಅಲ್ಲಿರಲಿಲ್ಲ. ಅಡಿಗೆಮನೆ ಯಲ್ಲಿ ಅಡುಗೆ ಮಾಡುತ್ತಿರಬೇಕೆಂದುಕೊಂಡೆ.

ಊಟಕ್ಕೆ ಕುಳಿತಿದ್ದ ನಯನ, "ಅಪ್ಪ ನನಗೆ ಆಂಟಿ ಮನೆ ತೋರಿಸು" ಎಂದು ಶುರು ಮಾಡಿದಳು.

"ಬೇಡಮ್ಮಾ, ರಾತ್ರಿ ಒಂಬತ್ತು ಘಂಟೆ ಆಗಿದೆ, ಅವರೆಲ್ಲಾ ಈಗ ಮಲಗುತ್ತಾರೆ, ಇನ್ನೊಬ್ಬರ ಮನೆಗೆ ಈ ಹೊತ್ತಿಗೆ ಹೋಗ ಬಾರದು" ಎಂದೆ.

ಪಕ್ಕದಲ್ಲಿ ಊಟಮಾಡುತ್ತಾ ಕುಳಿತಿದ್ದ ನನ್ನ ತಂಗಿ ಸಾವಿತ್ರಿಗೆ, "ಮೊದಲು ಅಡಿಗೆ ಮನೆ ಕಿಟಕಿಗೆ ಕರ್ಟನ್ ಹಾಕು, ಈ ಬಾಗಿಲಿಲ್ಲದ ಕಿಟಕಿಯಿಂದ ತುಂಬ ತೊಂದರೆ ಆಗಿದೆ" ಎಂದೆ.

"ಮುಂದಿನ ವಾರ, ನಾನು, ಅತ್ತಿಗೆ ಸಿಟಿಗೆ ಹೋಗಿ ತರುತ್ತೇವೆ" ಎಂದಳು ಸಾವಿತ್ರಿ.

"ನಿನ್ನ ಪರೀಕ್ಷೆ ಯಾವಾಗ ಮುಗಿಯುತ್ತದೆ" ಎಂದು ಸಾವಿತ್ರಿಯನ್ನು ಕೇಳಿದೆ. ಅವಳು ಇನ್ನೆರಡು ತಿಂಗಳಿಗೆ ಮುಗಿಯುತ್ತದೆ ಎಂದಳು.

ಸದ್ಯ, ಇವಳ ಪರೀಕ್ಷೆ ಮುಗಿದ ಮೇಲೆ, ಇವಳಿಗೊಂದು ಗಂಡು ಹುಡುಕಿ ಮದುವೆ ಮಾಡಿದರೆ, ನನ್ನ ಜವಾಬ್ದಾರಿ ಕಳೆಯಿತು. ಸುಶೀಲಳ ಕಂಪ್ಲೈಂಟ್ಸ್ ನಿಲ್ಲುತ್ತದೆ. ನನಗೆ ನೆಮ್ಮದಿ ಸಿಗುತ್ತದೆ ಎಂದುಕೊಂಡೆ. ಸಾವಿತ್ರಿಯೂ ಅತೀ ತಲೆಹರಟೆ, ಹೇಳಿದ್ದು ಕೇಳುತ್ತಿರಲಿಲ್ಲ. ತಾನು ಎಲ್ಲಿಯಾದರೂ ಹೋದರೆ, ಮನೆಗೆ ಎಷ್ಟೊತ್ತಿಗೆ ಬರುತ್ತೇನೆ, ಎಲ್ಲಿಗೆ ಹೋಗುತ್ತೇನೆ ಎಂದು ಸುಶೀಲಳ ಹತ್ತಿರ ಹೇಳುತ್ತಿರಲಿಲ್ಲ. ನನ್ನ ಹತ್ತಿರ ಬಂದು, ಅಣ್ಣ ನಾನು ನನ್ನ ಸ್ನೇಹಿತೆ ಮನೆಗೆ ಹೋಗಿ ಬರುತ್ತೇನೆಂದು ಹೇಳುತ್ತಿದ್ದಳು. ನೂರಾರು ಕೆಲಸದಲ್ಲಿ ನನಗೆ, ಅವಳು ಹೇಳಿದ್ದು ನೆನಪಿರುತ್ತಿರಲಿಲ್ಲ. ನಾನು ಸುಶೀಲಳಿಗೆ ಹೇಳುವು ದನ್ನು ಮರೆಯುತ್ತಿದ್ದೆ. ಸಾವಿತ್ರಿ ಲೇಟಾಗಿ ಬಂದಾಗ, ಇವರಿಬ್ಬರ ಜಗಳ ಶುರುವಾಗುತ್ತಿತ್ತು. ಸದ್ಯ, ಅವಳ ಮದುವೆಯಾದರೆ ಇದೆಲ್ಲದರಿಂದ ನಾನು ಮುಕ್ತನಾಗುತ್ತೇನೆ ಎಂದುಕೊಂಡೆ.

ರಾತ್ರಿಯಾದರೆ ಮಳೆ ಶುರುವಾಗುತ್ತದ ಎಂದು ಗೊಣಗಿದಳು ಸುಶೀಲ. ನನಗಂತೂ ತುಂಬ ಇಷ್ಟ. ಬೆಚ್ಚಗೆ ಹೊದ್ದು ಮಲಗಬಹುದು ಎಂದೆ ನಾನು.

"ಇನ್ನು ಮೇಲೆ ನಯನಳನ್ನು ಲೂಸಿ ಮನೆಗೆ ಕಳುಹಿಸುವುದು ಬೇಡ" ಎಂದಳು ಸುಶೀಲ.

"ನಾವೇನೋ ಹೇಳಬಹುದು, ಆದರೆ ನಿನ್ನ ಮಗಳು ನಮ್ಮ ಮಾತನ್ನು ಕೇಳಬೇಕಲ್ಲ, ಬೆಳ ಗಾದರೆ ಅವರ ಮನೆಗೆ ಹೋಗುತ್ತಾಳೆ. ಹೋಗಿ, ಅಲ್ಲಿ ಟೀ ಕುಡಿದು ಬರುತ್ತಾಳೆ" ಎಂದೆ ನಾನು.

"ಅದೂ ಸಾಲದೆ, ಮಧ್ಯಾಹ್ನ ಅವರ ಮನೆಯಿಂದ ಫಿಶ್ ವಾಸನೆ ಬಂದಕೂಡಲೆ, ಫಿಸ್, ಫಿಸ್ ಎಂದು ಓಡುತ್ತಾಳೆ, ಇವಳನ್ನು ಅವರ ಮನೆಗೆ ಹೋಗದೆ ತಡೆಯುವುದು ಕಷ್ಟ. ಮಕ್ಕಳಿಗೇನು ಗೊತ್ತಾಗುತ್ತದೆ. ಅವಳಪಾಡಿಗೆ ಅವಳು ಹೋಗಲಿ ಬಿಡು. ಸ್ಕೂಲಿಗೆ ಹೋಗಲಿಕ್ಕೆ ಶುರುಮಾಡಿದ ಮೇಲೆ, ಅವಳಾಗೇ ಹೋಗುವು ದನ್ನು ಬಿಡುತ್ತಾಳೆ" ಎಂದೆ ನಾನು.



ಈ ಘಟನೆಯೆಲ್ಲಾ ನಡೆದು, ಸುಮಾರು ಹದಿನೈದು ದಿನ ಆಗಿರಬಹುದು. ನಾನು ಎಂ.ಎ. ಕ್ಲಾಸಿಗೆ ಪ್ರಿಪೇರ್ ಆಗಬೇಕು, ನನಗೆ ಯಾರೂ ತೊಂದರೆ ಮಾಡಬೇಡಿ ಎಂದು ಬಾಗಿಲು ಹಾಕಿಕೊಂಡು ರೂಮಿನಲ್ಲಿ ಕುಳಿತೆ.

ಸುಮಾರು, ಘಂಟೆ ಎಂಟು ಇರಬಹುದು. ನನ್ನ ರೂಮಿನ ಬಾಗಿಲು ಬಡಿದಳು ಸುಶೀಲ.

"ಏನು" ಎಂದೆ.

"ರೀ, ಅವರ ಮನೆಯಿಂದ ಜೋರಾಗಿ ಗಲಾಟೆ ಕೇಳಿಸುತ್ತಿದೆ, ಲೂಸಿ ಜೋರಾಗಿ ಅಳುತ್ತಿರುವ ಹಾಗಿದೆ, ಸ್ವಲ್ಪ ಅಡಿಗೆಮನೆ ಹತ್ತಿರ ಬನ್ನಿ, ಗೊತ್ತಾಗುತ್ತದೆ" ಎಂದಳು.

ನಾನು ಬಯ್ದುಕೊಂಡು ಎದ್ದುಹೋದೆ. ಸುಶೀಲ ಹೇಳಿದ ಹಾಗೆ, ತುಂಬ ಗಲಾಟೆ ಕೇಳಿಸುತ್ತಿತ್ತು. ಮೂರ್ನಾಲ್ಕು ಜನ ಮಾತನಾಡಿದ ಹಾಗೆ ಕೇಳಿಸಿತು. ಯಥಾಪ್ರಕಾರ, ಲೂಸಿ ಅಳುವುದು ಕೇಳಿಸಿತು. ನಾನೂ ಸುಮಾರು ಅರ್ಧ ಘಂಟೆ ನಿಂತು ನೋಡಿದೆ. ಗಲಾಟೆ, ಜಗಳ, ಮಾತು, ನಿಲ್ಲಲಿಲ್ಲ. ''ಹೋಗಿ ನೋಡಿ ಬರುತ್ತೇನೆ'' ಎಂದು ಕಾಲಿಗೆ ಚಪ್ಪಲಿ ಮೆಟ್ಟಿ ಹೊರಟೆ.

''ನೀನ್ಯಾಕೆ ಹೋಗುತ್ತಿ ಅಣ್ಣ, ಬೇಡ'' ಎಂದಳು ನನ್ನ ತಂಗಿ.

''ಈ ಮನೆಯಲ್ಲಿ, ಎಲ್ಲರೂ ಸಲಹೆ ಕೊಡುವವರೇ ಆಗಿದ್ದಾರೆ. ನನಗೆ ಏನು ಮಾಡ ಬೇಕು, ಏನು ಬೇಡ ಎಂದು ಗೊತ್ತು, ನೀವೆಲ್ಲಾ ಸ್ವಲ್ಪ ತೆಪ್ಪಗಿರಿ'' ಎಂದು ಹೊರಟೆ.

ಅಷ್ಟರಲ್ಲಿ, ಹಾಲಿನ ಕಿಟಕಿ ಹತ್ತಿರ ಯಾರೋ ಕೂಗಿದ ಹಾಗಾಯಿತು. ನಮ್ಮನೆ ಹಾಲು, ಮತ್ತೆ ರೂಮಿನ ಕಿಟಕಿಗಳಿಗೆ ಸರಳುಗಳಿಲ್ಲ. ಬರೀ ಬಾಗಿಲುಗಳು ಇವೆ. ರಾತ್ರಿ ಗಾಳಿ ಇದ್ದುದರಿಂದ ಬಾಗಿಲು ಹಾಕಿತ್ತು. ಬಾಗಿಲು ತೆಗೆದು ನೋಡಿದೆ.

ಬಾಗಿಲಿನ ಮುಂದೆ, ಪಕ್ಕದಮನೆ ಮುದುಕಿ, ಸ್ವೆಟರು, ಶಾಲು ಏನೂ ಇಲ್ಲದೆ ಚಳಿಯಲ್ಲಿ ನಡುಗುತ್ತಾ, ''ಮಿಸ್ಟರ್ ರಾವ್, ಬೇಗ ಬನ್ನಿ, ನನ್ನ ಮಗಳನ್ನು ಹೊಡೆದು ಸಾಯಿಸುತ್ತಿದ್ದಾನೆ'' ಎಂದು ಅಳುತ್ತಾ ಹೇಳಿದಳು.

ಆ ಮುದುಕಿಯನ್ನು ನೋಡಿ, ನನಗೇ ಹೆದರಿಕೆ ಆಯಿತು. ಇನ್ನು ನಯನ ನೋಡಿದರೆ ಏನು ಗತಿ ಅಂದುಕೊಂಡೆ. ಅವಳ ಕೆದರಿದ ಕೂದಲು-ಅಲ್ಲಲ್ಲಿ ಬಿಳಿ, ಕೆಂಪು ಮಿಶ್ರಿತ ಕೂದಲು-ಕೆಟ್ಟ, ಕಪ್ಪುದಾದ, ದಪ್ಪಗಾಜಿನ ಕನ್ನಡಕ, ಸುಕ್ಕುಗಟ್ಟಿದ ಮುಖ, ಇದೆಲ್ಲದರ ಜೊತೆಗೆ ಅಮಾವಾಸ್ಯೆ ಆದ್ದರಿಂದ ತುಂಬ ಕತ್ತಲು. ಮಳೆ ಬರುತ್ತಿದ್ದರಿಂದ ಒಂದು ನಕ್ಷತ್ರವೂ ಇಲ್ಲ. ಅವಳು ಚಳಿಗೆ ನಡುಗುತ್ತಿದ್ದುದು ನೋಡಿ, ಅನುಕಂಪವೂ ಆಯಿತು. ಅವನ ಕಣ್ಣು ತಪ್ಪಿಸಿ ಈ ಮುದುಕಿ ಓಡಿ ಬಂದಿರಬೇಕೆಂದುಕೊಂಡೆ.

ಸುಶೀಲಳಿಗೂ ಅವಳನ್ನು ನೋಡಿ ಅಯ್ಯೋ ಎನ್ನಿಸಿರಬೇಕು, ''ಹೋಗಿ, ಬೇಗ ಬಂದುಬಿಡಿ'' ಎಂದಳು.

ನಾನು ಗೇಟು ತೆಗೆದು ಬಾಗಿಲು ಬಡಿದೆ. ಲೂಸಿಯ ತಾಯಿ, ನಾನು ಬಾಗಿಲು ತಟ್ಟು ವಷ್ಟರಲ್ಲಿ, ಆ ಕತ್ತಲಲ್ಲಿ ಹಿಂದಿನ ಬಾಗಿಲಿಗೆ ಓಡಿತು.

ಪಿಂಟೊ ಬಂದು ಬಾಗಿಲು ತೆಗೆದು, ''ಅಂದರ್ ಆವೊ ಪ್ರೊಫೆಸರ್'' ಎಂದ.

ನಾನು ''ಹಲೊ'' ಎಂದು ಹೇಳಿ ಒಳಗೆ ಹೋದೆ.

ಯಥಾಪ್ರಕಾರ ಲೂಸಿ ಅಳುತ್ತಿದ್ದಾಳೆ. ಅವನು ಹೊಡೆದಿದ್ದು ಇರಬೇಕು. ಕಣ್ಣಿನ ಹತ್ತಿರ ಕೆಂಪಗೆ ಕಾಣುತ್ತಿತ್ತು. ಕಣ್ಣುತುಂಬ ನೀರು ನಿಂತಿತ್ತು. ನಾನು ಒಳಗೆ ಹೋದದ್ದು ಅವಳಿಗೆ ಒಂದು ತರಹ ಮುಜುಗರವಾಯಿತೋ ಅಥವಾ ಕಷ್ಟದಿಂದ ತನ್ನನ್ನು ಪಾರುಮಾಡಲು ಏಸು ಇವನನ್ನು ಕಳುಹಿಸಿರಬೇಕೆಂದುಕೊಂಡಳೋ, ನನಗಂತೂ ಅವಳ ಮುಖದಿಂದ ಏನೂ ತಿಳಿಯಲಿಲ್ಲ. ಆದರೆ ಆ ಮುದುಕಿ ಮಾತ್ರ, ನನ್ನ ಮುಖ ನೋಡಿ, ಖುಷಿಯಿಂದ ನಕ್ಕು, ಬರ ಮಾಡಿಕೊಂಡಳು.

ರೂಮಿನಲ್ಲಿದ್ದ ಹಳೇಕಾಲದ ಮಜಬೂತಾದ ಕುರ್ಚಿಗಳು, ಅಲ್ಲಲ್ಲಿ ಮುರಿದು, ಎರಡು ಕುರ್ಚಿ ಗಳು ಮಾತ್ರ ಸರಿಯಿದ್ದವು. ನನ್ನನ್ನು ಒಂದು ಕುರ್ಚಿಯ ಮೇಲೆ ಕೂಡಿಸಿ, ತಾನೊಂದು ಕುರ್ಚಿಯಲ್ಲಿ ಕುಳಿತ.

''ಪ್ರೊಫೆಸರ್ ಕ ಏಕ್ ಗ್ಲಾಸ್ ಹಾಡ್'' ಎಂದು ಮುದುಕಿಗೆ ಆರ್ಡರ್ ಮಾಡಿದ, ಪಿಂಟೊ.

ನಾನು, ನನ್ನ ಊಟವಾಗಿದೆ, ಏನೂ ತೆಗೆದು ಕೊಳ್ಳುವುದಿಲ್ಲವೆಂದೆ. ''ಅವರಿಗೆ ಚಾ ತೆಗೆದು ಕೊಂಡು ಬಾ'' ಎಂದ.

ಲೂಸಿಯ ಅಮ್ಮ ಒಂದು ದೊಡ್ಡ ಸೀಮೆಎಣ್ಣೆ ದೀಪ ಕೈಯಲ್ಲಿ ಹಿಡಿದುಕೊಂಡು, ಸುಮಾರು ನಾವಿದ್ದ ಜಾಗದಿಂದ ಕಾಲು ಫರ್ಲಾಂಗ್ ದೂರ ವಿದ್ದ ಅಡಿಗೆಮನೆಗೆ ಹೋಯಿತು.

ಪಿಂಟೊ ಲೂಸಿಯ ಕಡೆಗೆ ತಿರುಗಿ, ''ಏನಾಯ್ತು ಹೇಳು'' ಎಂದ. ಅದಕ್ಕೆ ಉತ್ತರ ವೇನೂ ಬರಲಿಲ್ಲ. ಇನ್ನೊಂದು ಸಲ ಜೋರಾಗಿ, ''ಬೆಗಿನ್ ಸಾಂಗೋ'' ಎಂದು ಕುಳಿತಿದ್ದ ಕುರ್ಚಿ ಬಿಟ್ಟೆದ್ದು, ಅವಳ ಹತ್ತಿರ ಹೋದ.

ಅವನು ಎದ್ದು ಅವಳ ಹತ್ತಿರ ಹೋದ ರೀತಿ ನೋಡಿ, ನನಗೆ ಹೆದರಿಕೆಯಾಗಿ, ''ಏನು



ವಿಷಯ ಹೇಳು'' ಎಂದು ಅರ್ಧ ಕೊಂಕಣಿ, ಅರ್ಧ ಇಂಗ್ಲಿಷ್‌ನಲ್ಲಿ ಅವನನ್ನು ಕೇಳಿದೆ.

ಪಿಂಟೊ ನನ್ನ ಕಡೆ ತಿರುಗಿ, ''ನೋಡಿ, ಆ ನಾರಾಯಣ ಹೀಗೆ ಮಾಡಬಹುದಾ'' ಎಂದ.

ನಾರಾಯಣ ತುಂಬ ಒಳ್ಳೆ ಹುಡುಗ, ಕಾಲೇಜಿನಲ್ಲಿ ಕಲಿಸುತ್ತಿದ್ದಾನೆ ಎಂದಿದ್ದೆ. ಇವರಾ ದರೂ ಅವನು ಎಂಥವನೆಂದು ನನಗೆ ಹೇಳ ಬಾರದಿತ್ತಾ? ''ಏ ಲುಚ್ಚಾ ಹೈ'' ಎಂದು ಅವಳ ಕಡೆ ತಿರುಗಿ, ಅವಳ ಮುಖಕ್ಕೆ ಉಗಿದ.

ನಾನು ಏನು ನಡೆಯಿತು ಹೇಳು ಎಂದು ಪುನಃ ಅವನಿಗೆ ಕೇಳಿದೆ.

ನೀವು ಪರಿಚಯ ಮಾಡಿಕೊಟ್ಟ ನಾರಾಯಣ ಇವಳ ಜೊತೆ ಮಲಗಿದ್ದನಂತೆ. ಇದಕ್ಕಿಂತ ಇನ್ನೇನು ಆಗಬೇಕು. ಈಗ ಅವಳೇ ಹೇಳುತ್ತಾಳೆ ಎಂದು ಅವಳ ಕಡೆ ತಿರುಗಿ, ''ಏನು ಮಾಡಿದ, ಎಲ್ಲಾ ಬೇಗ ಹೇಳು'' ಎಂದ ಪಿಂಟೊ.

ಪಾಪ, ಲೂಸಿ ನಾಚಿಕೆಯಿಂದ ತಲೆ ತಗ್ಗಿಸಿ ದಳು. ಆದರೆ ಈ ವ್ಯಕ್ತಿ ಅವಳನ್ನು ಬಿಡಲೇ ಇಲ್ಲ. ಕುರ್ಚಿಯಲ್ಲಿ ಕುಳಿತಿದ್ದವನು ಪುನಃ ಎದ್ದು, ಅವಳ ಕೆನ್ನೆಗೆ ಪಟಾರ್ ಎಂದು ಹೊಡೆದು, ''ಹೇಳದಿ ದ್ದರೆ ನಿನ್ನ ಇಲ್ಲೇ ಹೂತು ಬಿಡುತ್ತೇನೆ'' ಎಂದ.

ಅವನು ಹೊಡೆದ ಏಟಿಗೆ, ಲೂಸಿ ಕಿಟಾ ರೆಂದು ಕಿರುಚಿ ಕೆಳಗೆ ಬಿದ್ದಳು. ಅವಳಿಗೆ ಹೊಡೆಯ ಬೇಡವೆಂದು ಹೇಳಲು ಮುದುಕಿ ಅಡ್ಡಬಂದಿತು.

''ಬಾಯಿಮುಚ್ಚು ಬದ್ಮಾಶ್, ನಿನ್ನಿಂದಲೇ ಇವೆಲ್ಲಾ ಆಗಿದ್ದು. ಆಗ ನೀನೆಲ್ಲಿದ್ದೆ, ನೀನು ಯಾರ ಜೊತೆ ಇದ್ದಿ ಹೊಗಳು'' ಎಂದು ಆ ಮುದುಕಿಯ ಬೆನ್ನಿನ ಮೇಲೆ ಪಟ್ ಎಂದು ಪಿಂಟೊ ಹೊಡೆದ.

ಆ ನೋವಿಗೆ ಮುದುಕಿ, ವಿಲವಿಲ ಒದ್ದಾಡಿ, ದೂರ ಹೋಗಿ ನಿಂತಳು.

ನನಗೆ, ಈಗ ಸ್ವಲ್ಪ ಅರ್ಥವಾಗತೊಡಗಿತು. ನಾರಾಯಣ, ಈಗ ನಾಲ್ಕೈದು ದಿನದ ಹಿಂದೆ ಸಿಟಿಯಲ್ಲಿ ರೂಮು ಮಾಡಿಕೊಂಡು ಹೋದ ಕಾರಣ ಇದೇ ಇರಬೇಕೆಂದು.

ಪಿಂಟೊ, ಕೆಳಗೆ ಬಿದ್ದ ಲೂಸಿಯನ್ನು ಎತ್ತಿ ಕೊಂಡು ಹೋಗಿ, ಅವಳ ಹಾಸಿಗೆ ಮೇಲೆ ಮಲಗಿಸಿ, ಅವಳ ಪಕ್ಕದಲ್ಲಿ ತಾನೂ ಕುಳಿತು ಕೊಂಡು, ಅವಳ ಮುಂಗುರುಳು ನೇವರಿಸಿ, ಪಕ್ಕದ ಮೇಜಿನ ಮೇಲಿದ್ದ ಹೂಜಿಯಿಂದ ನೀರನ್ನು ಒಂದು ಗ್ಲಾಸಿಗೆ ಹಾಕಿ, ಅವಳನ್ನು ತನ್ನೆದೆಗೆ ಒರಗಿಸಿಕೊಂಡು ನೀರು ಕುಡಿಸಿದ.

ನಾನು ಸದ್ಯ, ಜಾಗ ಖಾಲಿ ಮಾಡಿ ಮನೆಗೆ ಹೋಗೋಣವೆಂದು ಎದ್ದುನಿಂತೆ.

ಪಿಂಟೊ ನನ್ನ ಕೈಹಿಡಿದು, ಪುನಃ ಕುರ್ಚಿಯ ಮೇಲೆ ಕೂಡಿಸಿದ. ಅವಳ ಕಡೆ ತಿರುಗಿ, ''ಲೂಸಿ, ನಾರಾಯಣ ಏನು ಮಾಡಿದ ಬೇಗ ಹೇಳು, ಸರ್ ಮನೆಗೆ ಹೋಗಬೇಕು'' ಎಂದ.

ಲೂಸಿ ನಿಧಾನವಾಗಿ, ''ನಾನು ರೂಮಿನಲ್ಲಿದ್ದೆ. ಅವನು ರೂಮಿಗೆ ಬಂದ'' ಎಂದಳು.

''ಆಗ ನೀನೇನು ಮಾಡುತ್ತಿದ್ದಿ?'' ಎಂದ ಪಿಂಟೊ.

''ನಾನು ಮಲಗಿಕೊಂಡು ರೇಡಿಯೋ ಕೇಳುತ್ತಿದ್ದೆ'' ಎಂದಳು ಲೂಸಿ.

''ರೂಮಿಗೆ ಬಂದ ನಾರಾಯಣ ಏನು ಮಾಡಿದ?'' ಎಂದ ಪಿಂಟೊ.

''ನನ್ನ ಪಕ್ಕದಲ್ಲಿ ಮಲಗಿದ'' ಎಂದಳು ಲೂಸಿ.

''ಅವನು ಪಕ್ಕದಲ್ಲಿ ಬಂದು ಮಲಗಿದರೆ ನೀನ್ಯಾಕೆ ಸುಮ್ಮನೆ ಇದ್ದಿ'' ಎಂದು ಜೋರಾಗಿ ಕೂಗು ಹಾಕಿದ ಪಿಂಟೊ.

''ನಾನು ಬೇಡವೆಂದು ಹೇಳಿದೆ, ನಾರಾಯಣ ನನ್ನ ಮಾತು ಕೇಳಲಿಲ್ಲ'' ಎಂದಳು ಲೂಸಿ.

''ಮಲಗಿ ಅವನೇನು ಮಾಡಿದ'' ಎಂದ ಪಿಂಟೊ

''ಮುತ್ತು ಕೊಟ್ಟ'' ಎಂದಳು ಲೂಸಿ.

''ನೀನೇನು ಮಾಡಿದಿ'' ಎಂದ ಪಿಂಟೊ

''ನಾನೂ ಅವನಿಗೆ ಮುತ್ತುಕೊಟ್ಟೆ'' ಎಂದಳು ಲೂಸಿ.

''ಇನ್ನೇನು ಮಾಡಿದ ನಿಜ ಹೇಳು'' ಎಂದು ಜೋರಾಗಿ ಕಿರುಚಿದ ಪಿಂಟೊ.

''ಇನ್ನೇನೂ ಮಾಡ್ಲಿಲ್ಲ'' ಎಂದು ಅಳುತ್ತಾ ಉತ್ತರ ಹೇಳಿದಳು ಲೂಸಿ.

''ನಿಮ್ಮಮ್ಮ ಏನು ಮಾಡುತ್ತಿದ್ದಳು'' ಎಂದ ಪಿಂಟೊ.

''ನಮ್ಮಮ್ಮ ಹೇಳಿದರೂ ಅವನು ಕೇಳಲಿಲ್ಲ'' ಎಂದಳು ಲೂಸಿ.

''ನೀನು ಹೇಳುತ್ತಿರುವುದೆಲ್ಲ ಸುಳ್ಳು, ಅವನು ಬರೀ ಮುತ್ತುಕೊಟ್ಟಿಲ್ಲ, ಎಲ್ಲಾ ನಡೆದಿದೆ. ನನಗೆ ಗೊತ್ತು, ನೀವು ತಾಯಿ, ಮಗಳು ಎಂಥವರು ಎಂದು ನನಗೆ ಗೊತ್ತು'' ಎಂದ ಪಿಂಟೊ.

''ಇವರ ಬಗ್ಗೆ ಊರಿನವರೆಲ್ಲ ಏನು ಹೇಳುತ್ತಾರೆ ಗೊತ್ತಾ, ಬೀದಿ ಬಾಗಿಲಿನಿಂದ ಒಬ್ಬ ಸಾಹುಕಾರ ಒಳಗೆ ಹೋಗುತ್ತಾನೆ, ಹಿತ್ತಿಲ ಬಾಗಿಲಿನಿಂದ ಇನ್ನೊಬ್ಬ ಹೊರಕ್ಕೆ ಹೋಗುತ್ತಾನೆ ಎನ್ನುತ್ತಾರೆ'' ಎಂದು ನನ್ನ ಕಡೆ ತಿರುಗಿ, ''ಏ ದೋನೋ ಬದ್ಮಾಶ್ ಹೈ ಅವರ ಮಾತು ನಂಬಬೇಡಿ'' ಎಂದ.

ನನಗೆ, ಇವನಿಗೆ ಏನು ಉತ್ತರ ಕೊಡುವುದೆಂದು ಗೊತ್ತಾಗಲಿಲ್ಲ. ಅಲ್ಲಿಂದ ಹೊರಟರೆ ಸಾಕಾಗಿತ್ತು. ಇವರಿಂದ ಹೇಗೆ ತಪ್ಪಿಸಿಕೊಂಡು ಹೋಗುವುದು ಎಂದು ಯೋಚಿಸುವಷ್ಟರಲ್ಲಿ, ನನ್ನ ಹೆಂಡತಿ ಅಡಿಗೆಮನೆ ಕಿಟಕಿಯಿಂದ ಮನೆಗೆ ಬನ್ನಿ ಎಂದು ಕೂಗುಹಾಕಿದಳು.

ನಾನು ತಕ್ಷಣ ಅವರಿಗೆ ಗುಡ್‌ನೆಟ್ ಹೇಳಿ, ಪಿಂಟೊನ್ನ ಹತ್ತಿರಕ್ಕೆ ಕರೆದು, ''ಹಾಗೆಲ್ಲ ಹೊಡೀಬೇಡ, ಪೊಲಿಸ್ ಕೇಸ್ ಆಗಿಬಿಡುತ್ತದೆ'' ಎಂದೆ.

ನನ್ನ ಮೇಲೆ ಯಾವ ಪೊಲಿಸ್ ಕೇಸ್ ಹಾಕುತ್ತಾನೆ ಎಂದು ನಕ್ಕ.



ಬೆಳಿಗ್ಗೆ ಎದ್ದು, ಕಾಫಿ ಕುಡಿಯುತ್ತಾ ಕುಳಿತಾಗ ನನ್ನ ಹೆಂಡತಿ, ''ನಾನು ಬಾವಿ ನೀರು ಸೇದುವುದಕ್ಕೆ ಹೋದಾಗ ಆ ಮುದುಕಿ ಬಂದಿತ್ತು. ಆ ಕಡೆ, ಈ ಕಡೆ ನೋಡಿ, ನಿನ್ನೆ ನಿನ್ನ ಗಂಡ ಬರದಿದ್ದರೆ ನಮ್ಮಿಬ್ಬರ ಗತಿ ಏನಾಗುತ್ತಿತ್ತೋ ಎಂದು ಪಿಸುಗುಟ್ಟುವುದಕ್ಕೆ ಶುರುಮಾಡಿದಳು. ಆದರೆ ನಾನು ಅವನೆಲ್ಲಿ ಬಂದು ಗಲಾಟೆ ಮಾಡುತ್ತಾನೋ ಎಂದು, ಆ ಮುದುಕಿಯ ಮಾತು ಪೂರ್ತಿ ಕೇಳಿಸಿಕೊಳ್ಳದೆ, ಒಂದು ಕೊಡಮಾತ್ರ ನೀರು ಸೇದಿಕೊಂಡು ಬಂದುಬಿಟ್ಟೆ. ಸಂಜೆ ಪುನಃ ಹೋದರಾಯಿತೆಂದು'' ಎಂದಳು.

''ನೀವು ಸಿಟಿಯಲ್ಲಿ ಮನೆ ಹುಡುಕಲಿಕ್ಕೆ ಶುರುಮಾಡಿ. ಈ ಮನೆ ಬದಲಾಯಿಸಿದರೆ ಸಾಕು'' ಎಂದಳು ಸುಶೀಲ.

''ಸಿಟಿಯಲ್ಲಿ ಮನೆಮಾಡಿದರೆ, ಇಲ್ಲಿಯ ನಾಲ್ಕರಷ್ಟು ಹೆಚ್ಚಿಗೆ ಬಾಡಿಗೆ ಕೊಡಬೇಕು. ಸದ್ಯಕ್ಕೆ ಆಗುವುದಿಲ್ಲ. ಮುಂದಿನ ವರ್ಷ ನೋಡೋಣ, ನಮ್ಮ ಪೇಸ್ಕೇಲ್ ಎಲ್ಲಾ ಬದಲಾವಣೆ ಆಗುತ್ತದೆ ಎಂದು ಪ್ರೊಫೆಸರ್ ನಾಯಕ್ ಹೇಳುತ್ತಿದ್ದಾರೆ'' ಎಂದೆ ನಾನು.

''ಈ ಮುದುಕಿ ಪಿಂಟೊನ್ನ, ಕಸಿನ್ ಎಂದು ಹೇಳಿಕೊಳ್ಳುತ್ತಾಳೆ. ಈಚೆಗೆ ಇವರ ಜಗಳ ನೋಡಿದರೆ, ಈ ತಾಯಿ, ಮಗಳದೂ ತಪ್ಪಿದೆ ಅನ್ನಿಸುತ್ತೆ. ಅವನಿಂದಲೇ ಇವರ ಸಂಸಾರ ನಡೆಯುವ ಹಾಗೆ ಕಾಣುತ್ತದೆ. ಅವನಿಂದ ಎಲ್ಲಾ ತೆಗೆದುಕೊಂಡು, ಅವನನ್ನು ಹಿಂದುಗಡೆ ಬಯ್ಯುತ್ತಾರೆ. ಈ ಹುಡುಗಿ ಯಾಕೆ ಅವನನ್ನು ಮದುವೆ ಮಾಡಿಕೊಳ್ಳ ಬಾರದು'' ಎಂದಳು ಸುಶೀಲ.

ನಾವು ಮಾತನಾಡುತ್ತಿದ್ದ ಕಡೆಗೆ ಬಂದ ಸಾವಿತ್ರಿ, ''ಅತ್ತಿಗೆ, ಲೂಸಿ ನನಗೆ ಹೇಳಿದಳು, ಪಿಂಟೊ ತುಂಬ ಕೆಟ್ಟವನಂತೆ. ಬಂದಾಗಲೆಲ್ಲಾ ನನ್ನ ಹೊಡೆಯುತ್ತಾನೆ, ನಾನು ಯಾರ ಜೊತೆಯಲ್ಲೂ ಹೋಗಬಾರದು, ಮಾತನಾಡ ಬಾರದು ಎನ್ನುತ್ತಾನೆ. ಅಪರೂಪಕ್ಕೆ ಎಂದಾ ದರೂ ಸಿಟಿಗೆ ಹೋಗಿಬಂದರೂ ಅವನಿಗೆ ನಾನು ಹೋಗಿದ್ದು ತಿಳಿಯುತ್ತದೆ. ಆ ಸಾಯಂಕಾಲವೇ ಮನೆಗೆ ಬಂದು, ಯಾರ ಜೊತೆಯಲ್ಲಿ ಮಜ ಮಾಡಲು ಹೋಗಿದ್ದೆ ಎಂದು ಹೊಡೆಯುತ್ತಾನೆ. ನನ್ನ ತಂಗಿ ಒಬ್ಬಳು ಮಡ್‌ಗಾವ್‌ನಲ್ಲಿದ್ದಾಳೆ. ಅವಳು ಎಷ್ಟು ಮಜವಾಗಿದ್ದಾಳೆ ಗೊತ್ತಾ? ಅವಳ ಬಾಯ್‌ಫ್ರೆಂಡ್ ಜೊತೆ ದಿನಾ ಡ್ಯಾನ್ಸ್‌ಗೆ ಹೋಗುತ್ತಾಳೆ. ನನ್ನ ದುರಾದೃಷ್ಟ ಹೀಗೆ'' ಎಂದು ಬೇಜಾರುಪಟ್ಟುಕೊಂಡಳು ಎಂದಳು.

ಅದಕ್ಕೆ ಸುಶೀಲ, ''ಮದುವೆಯಾದರೆ ಸರಿ ಹೋಗುತ್ತದೆ, ಮದುವೆ ಆಗುವತನಕ, ಹೀಗೆ ಅನುಮಾನ ಪಡುತ್ತಾನೆ'' ಎಂದಳು.

''ಈಗ ಯಾವಾಗಲಾದರೂ ಒಮ್ಮೆ ಏಟು ತಿನ್ನುತ್ತಾಳೆ. ಮದುವೆ ಆದರೆ, ದಿನಾ ಏಟು ತಿನ್ನಬೇಕಲ್ಲ'' ಎಂದು ನಕ್ಕೆ ನಾನು.

''ಅವನು, ಅವಳನ್ನು ಮದುವೆ ಆಗುವು ದಿಲ್ಲವಂತೆ. ಬೇರೆಯವರು ಆಗಲೂ ಬಿಡುವು ದಿಲ್ಲವಂತೆ, ಅಂಥಾ ದುಷ್ಟಪ್ರಾಣಿ ಅವನು ಎಂದು ಹೇಳಿದಳು ಲೂಸಿ'' ಎಂದಳು ಸಾವಿತ್ರಿ.

''ಸದ್ಯ, ನನಗೆ ಬೇರೆ ಕೆಲಸ ಇದೆ. ದಯವಿಟ್ಟು ಅವರ ಮನೆ ಪುರಾಣ ಬೇಡ. ಇನ್ನುಮೇಲೆ ಅವರ ಹತ್ತಿರ ಮಾತನಾಡುವುದು ಕಮ್ಮಿ ಮಾಡಿ'' ಎಂದೆ ನಾನು.

''ನಮಗೆ ಇದನ್ನು ಹೇಳುವುದಕ್ಕಿಂತ ನೀವು 'ಪೀಸ್ ಮೇಕರ್' ಆಗುವುದನ್ನು ನಿಲ್ಲಿಸಿ'' ಎಂದಳು ಸುಶೀಲ.



ರಾತ್ರಿ ಸುಮಾರು ಹತ್ತು ಘಂಟೆ ಇರ ಬಹುದು. ಹೊರಗಡೆ ಕಾರಿನ ಶಬ್ದ ಕೇಳಿಸಿತು. ನಾನು ಹಾಲಿನಲ್ಲಿ ಕುಳಿತು, ಏನಾದರೂ ಆಗಲಿ ಇವತ್ತು ಅರ್ಧ ಬರೆದಿದ್ದ ಕತೆಯನ್ನು ಪೂರೈಸಲೇ ಬೇಕೆಂದು ಕುಳಿತಿದ್ದೆ.

ಕಾರಿನ ಶಬ್ದ ಕೇಳಿ, ಎದ್ದು, ಕಿಟಕಿ ಹತ್ತಿರ ಬಂದೆ. ಪಕ್ಕದ ಮನೆಯ ಮುಂದೆ ಕಾರು ನಿಂತಿದೆ. ಪಿಂಟೊ ಕಾರಿನಿಂದ ಇಳಿಯುತ್ತಿದ್ದಾನೆ.

ಕಾರಿನ ಹಾರ್ನ್ ಕೇಳಿ ಆ ಮುದುಕಿ, ಒಂದು ಚಿಮಣಿ ಬುಡ್ಡಿಯನ್ನು ಹಿಡಿದು ಬಾಗಿಲಿಗೆ ಬಂತು. ಅವನು ಎರಡು ದೊಡ್ಡ ಕವರುಗಳನ್ನು ಹಿಡಿದು ಬಂದ. ಅವನು ಬಂದ ಹತ್ತು ನಿಮಿಷಕ್ಕೆಲ್ಲಾ ಮನೆಯಲ್ಲಿ ಗಲಾಟೆ, ನಗು ಶುರುವಾಯ್ತು.

ನಾನು, ಹಾಲಿನಿಂದ ರೂಮಿಗೆ ಹೋಗಿ ಸುಶೀಲಳನ್ನು ಕೂಗಿದೆ. ''ಯಾಕ್ರಿ, ಹಾಗೆ ಜೋರಾಗಿ ಕೂಗುತ್ತೀರಿ. ನಯನಳನ್ನು ಈಗತಾನೇ ಮಲಗಿಸಿದೆ. ಅವಳು ಮಲಗಿದ ಮೇಲೆ ನಿಶ್ಚಿಂತೆ

ಯಿಂದ ಊಟ ಮಾಡೋಣವೆಂದರೆ, ನೀವು ಅದಕ್ಕೂ ಬಿಡುವುದಿಲ್ಲ'' ಎಂದಳು.

''ಅಡಿಗೆಮನೆ ಕಿಟಕಿ ಹತ್ತಿರ ಹೋಗಿ ತಮಾಷೆ ನೋಡು'' ಎಂದೆ.

ಸುಶೀಲ ಅಡಿಗೆಮನೆ ಕಿಟಕಿಗೆ ಓಡಿದಳು. ಅವರ ರೂಮಿನ ಕಿಟಕಿ ಬಾಗಿಲು ತೆರೆದಿತ್ತು. ರೂಮಿನ ಮಧ್ಯದ ಟೇಬಲ್ಲಿನ ಮೇಲೆ ದೊಡ್ಡ ದೀಪ ಉರಿಯುತ್ತಿತ್ತು.

ಅವರಿಬ್ಬರೂ ಮಂಚದ ಮೇಲೆ ಅಕ್ಕಪಕ್ಕದಲ್ಲಿ ಕುಳಿತಿದ್ದರು. ಪಿಂಟೊ, ಒಂದು ಕೈಯನ್ನು ಅವಳ ಕತ್ತಿನ ಸುತ್ತಲೂ ಬಳಸಿ, ಇನ್ನೊಂದು ಕೈಯಲ್ಲಿ ಗ್ಲಾಸನ್ನು ಹಿಡಿದಿದ್ದಾನೆ. ಅವಳು, ಅವನ ಮುಖವನ್ನೇ ನೋಡುತ್ತಾ-ಒಂದು ಕೈ ಅವನ ತೊಡೆಯ ಮೇಲಿದೆ-ಕೈಯಲ್ಲಿ ಗ್ಲಾಸನ್ನು ಹಿಡಿದು, ಏನೋ ಮಾತನಾಡುತ್ತಿದ್ದಾಳೆ.

ನನಗೆ ಒಂದು ತರಹ ಸಿಟ್ಟು ಮತ್ತೆ ಬೇಜಾರೂ ಆಯಿತು. ನಾನು, ಇನ್ನೆಂದೂ ಅವನು ಈ ಮನೆಗೆ ಬರುವುದಿಲ್ಲವೆಂದು ಕೊಂಡಿದ್ದೆ. ನನಗೆ, ನಾನಂದುಕೊಂಡಹಾಗೆ ನಡೆಯಲಿಲ್ಲವೆಂದು ಸಿಟ್ಟುಬಂತು.

ಒಮ್ಮೆಗೇ ಹಾಲಿಗೆ ನುಗ್ಗಿ, ಮಲಗಿದ್ದ ಸಾವಿತ್ರಿಯನ್ನು ಎಬ್ಬಿಸುವಂತೆ, ''ಸಾವಿತ್ರೀ, ನೀನು ಎಷ್ಟು ಘಂಟೆಗೆ ಹೋಗುತ್ತೀ, ಯಾವಾಗ ಬರುತ್ತೀ ಎನ್ನೋದರ ಬಗ್ಗೆ ಎಚ್ಚರ ಇದೆಯಾ ನಿನಗೆ?'' ಎಂದು ವಿಚಿತ್ರವಾಗಿ, ದೊಡ್ಡ ದನಿಯಲ್ಲಿ ಗದರಿಸತೊಡಗಿದೆ. ಇದೇನಪ್ಪ, ಹೊಸ ಅವತಾರ ಎನ್ನುವಂತೆ, ನಯನಾ, ನಿದ್ದೆ ಮುರಿದ ಪಿಳಿಪಿಳಿ ಕಣ್ಣುಗಳಿಂದ ನನ್ನನ್ನು ನೋಡುತ್ತಿದ್ದಳು.



ಸುಶೀಲ ಅಡಿಗೆಮನೆ ಕಿಟಕಿಗೆ ಓಡಿದಳು. ಅವರ ರೂಮಿನ ಕಿಟಕಿ ಬಾಗಿಲು ತೆರೆದಿತ್ತು. ರೂಮಿನ ಮಧ್ಯದ ಟೇಬಲಿನ ಮೇಲೆ ದೊಡ್ಡ ದೀಪ ಉರಿಯುತ್ತಿತ್ತು.

ಅವರಿಬ್ಬರೂ ಮಂಚದ ಮೇಲೆ ಅಕ್ಕಪಕ್ಕದಲ್ಲಿ ಕುಳಿತಿದ್ದರು.

ಮಾಲತಿ ನಾಡಿಗ್



# ಪ್ರತಿ ಓದುಗನಲ್ಲೊಬ್ಬ ಬರಹಗಾರ

[illegible]

# ಇಬ್ಬರನ್ನೂ ಉದ್ದೀಪಿಸಲೆಂದೇ ನಮ್ಮ ಪುಟಗಳು

---

[illegible] : ಸಂವೇದನೆಯ ಸಲಿಗೆಯಲ್ಲಿ ಬರೆಯುವ ಬಹಿರಂಗ ಪತ್ರ. ಕಣ್ಣಿನಿಂದ ಮರೆಯಾದ ಜೀವಗಳ ಜತೆ ಆಪ್ತ ಸಂಪರ್ಕ ಸಾಧಿಸಲು, ನಿಮ್ಮ ಎದೆಭಾರ ಇಳಿಸಿ ಕೊಳ್ಳಲು ಅವಕಾಶ. (ಪುಟಮಿತಿ ಫುಲ್‌ಸ್ಕೇಪ್ ಎರಡು)

[illegible] : ನಿಮ್ಮನ್ನು ಗಾಢವಾಗಿ ಪ್ರಭಾವಿಸಿ, ನಿಮ್ಮ ಬಾಳಿನ ದಿಶೆಯನ್ನು ಬದಲಿಸಿದ ಪಾತ್ರ, ವ್ಯಕ್ತಿ, ಉಕ್ತಿ, ಸನ್ನಿವೇಶಗಳನ್ನು ಹಂಚಿಕೊಳ್ಳಿ. ಆ ಮೂಲಕ ಅಸಂಖ್ಯ ಓದುಗರಿಗೂ ಸ್ಫೂರ್ತಿಯನ್ನು ಕೊಡಬಲ್ಲಿರಿ. (ಪುಟಮಿತಿ ಫುಲ್‌ಸ್ಕೇಪ್ ಎರಡು)

[illegible] : ಅರಿವಿಲ್ಲದೆ ಜರುಗಿದ ತಪ್ಪಿನಿಂದ ಒಳಿತೂ ಘಟಿಸಬಲ್ಲುದು. ನಿಮ್ಮ ಅಮಾಯಕ ತಪ್ಪೊಂದು ಬದುಕಿನ ನಿಗೂಢ ತಿರುವಿಗೆ ಕಾರಣವಾಗಿರಬಹುದು. ಅಂಥ ಕುತೂಹಲಕಾರಿ ತಪ್ಪಿನ ಬಗ್ಗೆ ಬರೆಯಿರಿ. (ಪುಟಮಿತಿ ಫುಲ್‌ಸ್ಕೇಪ್ ಎರಡು)

[illegible] : ನೀವು ಓದಿದ ಕತೆ ಕಾದಂಬರಿ, ನೋಡಿದ ನಾಟಕ-ಸಿನೆಮಾಗಳ ಪುಟ್ಟ ಕಥಾ ರೂಪದ ಸಾರಾಂಶ. ಮೂಲ ಕೃತಿಯಿಂದ ವಂಚಿತರಾದ ಓದುಗರಿಗೆ ಈ ಮೂಲಕ ಅದರ 'ಪುಟ್ಟ ದರ್ಶನ' ಭಾಗ್ಯ. (ಫುಲ್‌ಸ್ಕೇಲ್ ಎರಡು).

[illegible] : ನವಿರಾದ ಲಲಿತ ಪ್ರಬಂಧ, ಶಬ್ದಚಿತ್ರ, ಸ್ಮೃತಿಚಿತ್ರಗಳು (ಪುಟಮಿತಿ ಫುಲ್‌ಸ್ಕೇಲ್ ಆರು)

[illegible] : ಓದಿದ ಯಾವುದೇ ಒಳ್ಳೆಯ ಕೃತಿಯಿಂದ ಆಯ್ದು ಅಥವಾ ಸ್ವತಂತ್ರ, 'ಉಜ್ವಲ' ಚಿಂತನಶೀಲ, ಭಾವೋದ್ದೀಪಕ ಪರಿಚ್ಛೇದಗಳು ಮೂಲ ಕೃತಿ, ಲೇಖಕರ ಹೆಸರು ನಮೂದಿಸಬೇಕು. (ಪುಟಮಿತಿ ಫುಲ್‌ಸ್ಕೇಪ್ ಎರಡು)

> [illegible]

[illegible] : ದೀರ್ಘವಲ್ಲದ, ಕನಿಷ್ಠ ಐದಾರು ಕವಿತೆಗಳನ್ನು ಕಳಿಸಬೇಕು.
ಕತೆ ಹತ್ತು ಪುಟ ಮೀರದಂತಿರಲಿ. ಟೈಪ್ ಮಾಡಿದ್ದರೆ, ಕತೆಯಲ್ಲಿ ನಿಮಗಿಷ್ಟವಾದ ಒಂದೆರಡು ಸಾಲುಗಳು ನಿಮ್ಮ ಕೈಬರಹದಲ್ಲೇ ಬರೆದು, ಸಹಿ ಹಾಕಿ ಲಗತ್ತಿಸಿ.
ಮೆಚ್ಚಿನ ಸ್ವಂತ ಭಾವಚಿತ್ರವೊಂದನ್ನು-ಯಾರೊಂದಿಗಿನದೂ ಆದೀತು-ಕಳಿಸಿ.




ನನ್ನ ಆತ್ಮೀಯ ಗೆಳತಿ ಅನುಪಮಾ, ನೋಡಲು ಕೂಡ ಅನುಪಮವಾಗಿದ್ದಳು. ನಾವು ಒಬ್ಬರನ್ನು ಒಬ್ಬರು ಬಿಟ್ಟಿರುತ್ತಿರಲಿಲ್ಲ. ಇದರಿಂದ, ನಮ್ಮ ಗುರುವೃಂದವೇ ನಮಗೆ, 'ಜೋಡಿಹಕ್ಕಿ' ಎಂದು ಹೆಸರಿಟ್ಟಿತ್ತು. ನನ್ನ ತಂದೆಯವರು ನನ್ನ ಹುಟ್ಟಿದ ಹಬ್ಬದಂದು ಹೊಸ ವಾಚ್ ಕೊಡಿಸಿದ್ದರು. ಅದು ತುಂಬಾ ಹೊಸ ಮಾದರಿಯದು ಮತ್ತು ಬೆಲೆ ಬಾಳುವುದಾಗಿತ್ತು. ಮರುದಿನ, ಉತ್ಸಾಹದಿಂದಲೇ ಶಾಲೆಗೆ ಹೊರಟು, ಆ ಹೊಸ ವಾಚ್ ಅನ್ನು, ಮೊದಲು ನನ್ನ ಅನುಗೆ ತೋರಿಸಿದೆ. ಅವಳು ಕೂಡ ಅದನ್ನು ತುಂಬ ಇಷ್ಟಪಟ್ಟಳು. ನಾವು ಏನೇ ಹೊಸವಸ್ತು ಕೊಂಡರೂ, ಅದನ್ನು ಇಬ್ಬರೂ ವಿನಿಮಯ ಮಾಡಿಕೊಳ್ಳುತ್ತಿದ್ದೆವು. ಹಾಗೇ ಅವತ್ತೂ, ನನ್ನ ವಾಚನ್ನು ಅವಳು ಕಟ್ಟಿಕೊಂಡಳು. ಅವಳ ವಾಚನ್ನು ನಾನು ಕಟ್ಟಿಕೊಂಡೆ. ಸಾಯಂಕಾಲ ಅದನ್ನು ಕೇಳಲು ನೆನಪಾಗಲಿಲ್ಲ. ಮರುದಿನ ಕೇಳಿದರಾಯಿತು ಎಂದು ಸುಮ್ಮನಾದೆ. ಆದರೆ ನಮ್ಮ ತಂದೆ ನನಗೆ ಬಯ್ದರು. ಆ ಹೊಸ ವಾಚ್ ಹೇಗೆ ಕೊಟ್ಟೆ ಎಂದು.

ಮುಂದೆ 2-3 ದಿನ ಅವಳು ಶಾಲೆಗೆ ಬರಲಿಲ್ಲ. ಆನಂತರ ಬಂದ ಅವಳು, ಇದ್ದ ಪರಿಸ್ಥಿತಿ ಹೇಳಲು ಪ್ರಯತ್ನಿಸಿದಳು. ಆದರೆ ಅದನ್ನು ಕೇಳಲು ನಾನು ಸಿದ್ಧಳಿರಲಿಲ್ಲ. ನನ್ನ ಮನಸ್ಸಿನ ತುಂಬ ಇದ್ದ ಭಾವನೆ ಒಂದೇ ಆಗಿತ್ತು. ಅವಳಿಗೆ ಆ ವಾಚ್ ಕೊಡಲು ಇಷ್ಟವಿರಲಿಲ್ಲ. 'ಬೇಕೆಂದೆ ಅವಳು ಎರಡು ದಿನ ವಾಚ್ ಇಟ್ಟುಕೊಂಡಿದ್ದಳೆ?' ಎಂದು ಅವಳ ಬಗ್ಗೆ, ತುಂಬಾ ಕ್ರೂರ ರೀತಿಯಲ್ಲಿ ಯೋಚಿಸತೊಡಗಿದೆ. ನನ್ನ ಮನಸ್ಸು, ಅವಳನ್ನು ಶತ್ರು ಎಂಬ ಭಾವನೆಯಲ್ಲಿ ನೋಡತೊಡಗಿತು. ಅವಳು ಕೂಡ, ಸೂಕ್ಷ್ಮ ಅರ್ಥ ಮಾಡಿಕೊಂಡು ನನ್ನನ್ನು ಮಾತನಾಡಿಸುವ ಪ್ರಯತ್ನ ಮಾಡಲಿಲ್ಲ. ಇಬ್ಬರಿಗೂ ಸ್ಪರ್ಧೆ ಉಂಟಾಯಿತು. ಇಬ್ಬರೂ ಛಲಕ್ಕೆ ಬಿದ್ದು ಅಭ್ಯಾಸ ಮಾಡಿದೆವು. ಪರೀಕ್ಷೆ ಮುಗಿದು ಫಲಿತಾಂಶ ಬಂದಿತು. ಇಬ್ಬರೂ ತಾಲೂಕು ಮಟ್ಟದಲ್ಲಿ ಪ್ರಥಮ ಸ್ಥಾನದಲ್ಲಿ ಉತ್ತೀರ್ಣರಾಗಿದ್ದೆವು. ಅಂದು ನಾನೇ ಹೋಗಿ ಅವಳನ್ನು ಮಾತನಾಡಿಸಿದೆ. ಅವಳು ಕೂಡ ನನ್ನನ್ನು ಮಾತನಾಡಿಸಿದಳು. ಶತ್ರು ಭಾವನೆಯಿಂದಲ್ಲ, ಮತ್ತೆ ನನ್ನ ಆತ್ಮೀಯ ಅನು ಆಗಿ. ಅಂದು ಅವಳಿಗೆ ಮೈ ಹುಷಾರಿರಲಿಲ್ಲ. ಅದಕ್ಕಾಗಿ ಬಂದಿರಲಿಲ್ಲ ಎಂದು ಹೇಳಿದಳು. ನಮಗೆ ನಿಜವಾಗಿಯೂ ಸಂತೋಷವಾಗಿತ್ತು. ಏಕೆಂದರೆ ಮೊದಲು 'ಓದಿದವರು ಉದ್ಧಾರ ಆಗುವುದಿಲ್ಲ'! ಎಂದು ನಾವು ಓದಿಗೆ ಹೆಚ್ಚಿನ ಮಹತ್ವ ಕೊಟ್ಟಿರಲಿಲ್ಲ. ಆದರೆ ನಾನು ಮಾಡಿದ ಒಂದೇ ಒಂದು ತಪ್ಪಿನಿಂದ-ಅವಳನ್ನು ತಪ್ಪಾಗಿ ತಿಳಿದು, ಅವಳೊಂದಿಗೆ ಮಾತುಬಿಟ್ಟದ್ದು-ನಾನು, ಅನು, ನಮ್ಮ ಪಾಲಕರು ಎಲ್ಲರೂ ಸಂತೋಷಪಟ್ಟರು. ನನಗೆ ಇಂದಿಗೂ ನಿಜವಾಗಿಯೂ ಸಂತೋಷವಾಗುತ್ತಿದೆ. ನಾನು ಆ ತಪ್ಪು ಮಾಡದಿದ್ದರೆ ತಾಲೂಕು ಮಟ್ಟದಲ್ಲಿ ಪ್ರಥಮ ಸ್ಥಾನ ಪಡೆಯಲು ಸಾಧ್ಯವಾಗುತ್ತಿರಲಿಲ್ಲ. ಆದರೂ ಆ ಘಟನೆ ನನ್ನ ಮನಸ್ಸು ಕಲುಕುತ್ತದೆ.

**ಸ್ಮಿತಾ ಕುಲಕರ್ಣಿ**

**ರಾಣೆಬೆನ್ನೂರು**



## ಪ್ರಿಯತಮ

# ರೈಲುಗಾಡಿಯಲ್ಲಿ ಬಿಟ್ಟು ಬಂದ ಮುಖ

ಪದೇ ಪದೇ ನನಗೆ, ಹಿಂದೆ ರೈಲುಗಾಡಿಯಲ್ಲಿ ಕಂಡ ಆ ಮುಖ, ಬಿಟ್ಟುಬಂದ ಮುಖ ನೆನಪಿಗೆ ಬರುತ್ತದೆ, ಬಂದು ಸತಾಯಿಸತೊಡಗುತ್ತದೆ. ನಾನು ದೊಡ್ಡ ತಪ್ಪು ಮಾಡಿರುವೆನೆಂಬುವಂತೆ ಎಚ್ಚರಿಸಿ ಹೇಳುತ್ತಾ, ನನ್ನನ್ನು ಚುಚ್ಚುತ್ತದೆ. ನಾನು ಅಧೀರನಾಗುತ್ತೇನೆ.

ಇದರ ಹಿಂದಿನ ಕಥೆ ಹೀಗಿದೆ-

ಮುಂಬಯಿಯಿಂದ ಬೆಂಗಳೂರಿಗೆ ತೆರಳುವ ರೈಲುಗಾಡಿಯಲ್ಲಿ ನಾನು ಪ್ರಯಾಣಿಸುತ್ತಿದ್ದೆ. ನನಗೆ ಹುಬ್ಬಳ್ಳಿಗೆ ಹೋಗಲಿತ್ತು. ನನ್ನ ಇದಿರಿನ ಸೀಟಿನಲ್ಲಿ ಒಂದು ಹುಡುಗಿ ಮತ್ತು ಆಕೆಯ ತಾಯಿ (ಅದು ಆಕೆಯ ತಾಯಿಯೆಂಬುದು ನಂತರ ತಿಳಿದುಬಂದುದು) ಕುಳಿತಿದ್ದರು. ದಾದರ್ ಸ್ಟೇಷನ್‌ನಲ್ಲಿ ಅವರು ರೈಲು ಹತ್ತಿದರು. ಆ ಹುಡುಗಿಯ ದುಂಡಗಿನ, ಸುಕೋಮಲ, ಸ್ವಚ್ಛ ಮುಖವನ್ನು, ರಾತ್ರಿ ಬರ್ತ್‌ನಲ್ಲಿ ಆಕೆ ಮಲಗಿ ನಿದ್ರಿಸುತ್ತಿರುವಾಗ, ಮಂದ ಬೆಳಕಿನಲ್ಲಿ, ಹಲವಾರು ಬಾರಿ ನಾನು ಕದ್ದು ನೋಡಿದ್ದೆ.

ರೈಲುಗಾಡಿ, ಪ್ರಯಾಣಿಕರನ್ನು ಕುಲುಕಿಸುತ್ತಾ ರಾತ್ರಿಯ ಅಂಧಕಾರದಲ್ಲಿ ಮುನ್ನುಗ್ಗುತ್ತಿತ್ತು. ಎಲ್ಲರೂ ಮಲಗಿ ನಿದ್ರಿಸುತ್ತಿದ್ದರು. ನನಗೆ ಮಾತ್ರ, ಅದೇಕೋ ನಿದ್ದೆ ಬರುತ್ತಿರಲಿಲ್ಲ. ಸುತ್ತಮುತ್ತಲಿನ ಬರ್ತ್‌ಗಳಲ್ಲಿ ಮಲಗಿರುವ, ಗಾಢವಾಗಿ ನಿದ್ರಿಸುತ್ತಿರುವ ಮತ್ತು ಅರೆನಿದ್ರೆಯಲ್ಲಿ ಆಗಾಗ್ಗೆ ಮಗ್ಗುಲು ಬದಲಿಸುತ್ತಿರುವ ಜನರನ್ನು ನಾನು ನೋಡುತ್ತೇನೆ. ದಿನಾ ಎಂಬಂತೆ ಈ ಜನರೆಲ್ಲಾ ಎಲ್ಲಿಗೆ ಹೋಗುತ್ತಿರುತ್ತಾರೆ? ಅವರ ಗೊತ್ತುಗುರಿ ಏನು? ಎಂಬ ಪ್ರಶ್ನೆ ನನ್ನ ಮನಸ್ಸಿನಲ್ಲಿ ಹುಟ್ಟಿಕೊಳ್ಳುತ್ತದೆ. ಉತ್ತರ ದೊರಕದೇ ಅದನ್ನು ಜಾಡಿಸಿ ಹಾಕುತ್ತೇನೆ.

ರೈಲುಗಾಡಿ ಸಾಗತೊಡಗಿದಾಗಲೇ, ಆ ಮುಖ ನನಗೆ ಘಾಸಿಯನ್ನುಂಟುಮಾಡಿತ್ತು. ಹಾಗೆ ನೋಡ ಹೋದರೆ, ನಾಲ್ಕು ಜನರ ನಡುವೆ ಎದ್ದುಕಾಣುವಂತಹ ಮುಖ ಏನೂ ಅಲ್ಲ. ಅಂತಹ ಸೌಂದರ್ಯ ಆ ಮುಖದಲ್ಲಿರಲಿಲ್ಲ. ಆದರೆ ಪರಿಚಯದ ನಂತರ ಹುಟ್ಟುಹಾಕಿದ ಆ ಮುಖದ ಮೇಲಣ ತಣ್ಣಗಿನ ಭಾವ, ನಂತರ ಪೋಷಕವಾಗಿ ನಡೆದು ಬಂದ ಮಾತುಕತೆಯ ಯಥಾರ್ಥತೆ ಘಾಸಿಗೊಳಿಸಲು ಕಾರಣವಾಗಿರಬೇಕು.

ಹಾಗೆನೋಡಹೋದರೆ ಆಕೆಯೊಡನೆ ನನ್ನ ಮಾತುಕತೆ ನಡೆದೇ ಇಲ್ಲವೆನ್ನಬಹುದು. ಏನಾದರೂ ನಡೆದಿದ್ದರೆ, ಕೆಲವೇ ಶಬ್ದಗಳಿಗಷ್ಟೇ ಮೀಸಲು. ಹೆಚ್ಚಿನ ಸಂವಾದವೆಲ್ಲಾ ನಡೆದುದು ಆಕೆಯ ತಾಯಿಯಾದವಳೊಡನೆ. ಏನೆಂದರೂ, ಪ್ರವಾಸದಲ್ಲಿ ತುಟಿ ಬಿಗಿದುಕೊಂಡು ಕುಳಿತಿರಲಾಗುವುದೇ? ಆದರೂ ನಾನು ಯಾವಾಗಲೂ ಮಾತುಗಾರಿಕೆಯಲ್ಲಿ ಸ್ವಲ್ಪ ಹಿಂದೆ. ತುಂಬಾ ದಾಕ್ಷಿಣ್ಯ. ನಾನಾಗಿಯೇ ಮುಗಿಬೀಳುವವನಲ್ಲ. ಆ ತಾಯಿ ಆಕೆಯಾಗಿಯೇ ಕೇಳಿದ್ದಳು-

"ನೀವು ಎಲ್ಲಿಗೆ ಹೊರಟಿರುವಿರಿ? ಬೆಂಗಳೂರಿಗೋ?...

"ಅಲ್ಲ, ಹುಬ್ಬಳ್ಳಿಗೆ. ನೀವು....?"

"ಅರಸೀಕೆರೆ."

ತಾಯಿ ಮತ್ತೆ ತನ್ನ ಮಾತನ್ನು ಮುಂದುವರಿಸಿದ್ದಳು-




''ಜೀವನ ಸುಸೂತ್ರವಾಗಿ ಸಾಗುತ್ತಿದೆ ಅನ್ನುವಾಗ, ಅಕಸ್ಮಾತ್ ನಮ್ಮ ಮೇಲೆ ವಿಪರೀತ ಪರಿಸ್ಥಿತಿ ಬಂತು. ನನ್ನ ಗಂಡ ತೀರಿಕೊಂಡರು. ಎಲ್ಲಾದರೂ ಒಂದು ನೌಕರಿ ಹಿಡಿದು ಸಂಭಾಳಿ ಸೋಣವೆಂದರೆ, ನಾನು ಹೆಚ್ಚು ಕಲಿತವಳಲ್ಲ. ನಮ್ಮ ಮುಂದಿನ ಜೀವನದ ಗತಿಯೇನು? ಮುಂಬಯಿಯಲ್ಲಿ ಜೀವಿಸಿರಲು ಹೇಗೆ ಸಾಧ್ಯ? ಮಂದಾ ಸ್ವಲ್ಪ ದೊಡ್ಡವಳಾಗಿದ್ದರೆ, ಆಕೆಯ ಕಲಿಕೆ ಮುಗಿದಿದ್ದರೆ, ಮಾತು ಬೇರೆ. ಏನಾದರೂ ಒಂದು ಸಣ್ಣ ನೌಕರಿ ಹಿಡಿಯಬಹುದಿತ್ತು. ಏನು ಮಾಡುವುದು? ಅರಸೀಕೆರೆಯಲ್ಲಿ ನನ್ನ ತಮ್ಮ ನಿದ್ದಾನೆ. ಆತನ ಬಳಿ ಹೋಗಿ ಬೀಳಬೇಕಾಗಿ ಬಂದಿದೆ. ಬೇರೆ ಉಪಾಯವಿಲ್ಲ. ಕೂಡಿಟ್ಟ ಒಂದಿಷ್ಟು ಹಣವಿದೆ. ಗಂಡ ಕೆಲಸಮಾಡುತ್ತಲಿದ್ದ ಕಂಪೆನಿಯಿಂದ ಸ್ವಲ್ಪ ಬಂದಿದೆ. ಏನಿದ್ದರೂ, ಅದು ಕುಳಿತು ಉಣ್ಣಲು ಎಲ್ಲಿಗೆ ಸಾಕು? ಅಲ್ಲದೇ ಮಂದಾ ಬೆಳೆದಿದ್ದಾಳೆ. ಆಕೆಯ ಮದುವೆಯೂ ಬೇರೆ ಆಗಬೇಕು. ಆ ಜವಾಬ್ದಾರಿಯೂ ಇದೆ. ತಮ್ಮನಲ್ಲಿಗೆ ತೆರಳಿ, ಓದು ಮುಗಿಸಿ, ಮಗಳಿಗೊಂದು ಸಣ್ಣ ಟೀಚರ್ ಕೆಲಸ ಸಿಕ್ಕಿದರೂ ಸಾಕು, ನಡೆಯುತ್ತೆ. ಹೇಗಾದರೂ ಬದುಕಿ ಕೊಂಡೇವು. ನನ್ನ ತಮ್ಮ ಅಲ್ಲಿನ ಒಂದು ಶಾಲೆ ಯಲ್ಲಿ ಮಾಸ್ತರನಾಗಿದ್ದಾನೆ.''

ನಾನು ಮಂದಾಕಿನಿಯ ಕಡೆ ನೋಡು ವಂತಾಗಿತ್ತು. ಆಕೆಯ ಮುಖ ಕಂದಿತ್ತು. ನಾನು ನೋಡುತ್ತಿರುವುದನ್ನು ಗಮನಿಸಿ, ಆಕೆಯ

ಗೋಣು, ಅಲ್ಲೇ ಬಗ್ಗಿತ್ತು. ಓದುವುದರಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಾಳೆ. ಆದರೂ ನಮ್ಮ ಮಾತಿನ ಕಡೆ ಆಕೆಯ ಗಮನವಿದೆ ಎಂಬುದು ಆಗಾಗ್ಗೆ ಅವಳ ಮುಖದ ಮೇಲೆ ಲಾಸ್ಯವಾಡುವ ಭಾವ ದಿಂದ ತಿಳಿದುಬರುವಂತಾಗುತ್ತದೆ.

''ನೀವು ಹುಬ್ಬಳ್ಳಿಗೆ ಹೊರಟಿರುವಿರಿ ಎಂದಿರಲ್ಲಾ, ಅಲ್ಲಿ ನಿಮ್ಮ ಯಾರಿದ್ದಾರೆ? ಹೀಗೆಯೇ ಕೇಳಿದೆ'', ಎಂದಳಾ ತಾಯಿ.

''ಛೇ! ಅದರಲ್ಲೇನು? ಹೌದು. ಅಲ್ಲಿ ನಮ್ಮ ತಾಯಿ ಇದ್ದಾಳೆ. ವಯಸ್ಸಾಗಿದೆ, ಒಬ್ಬಳೇ ಇದ್ದಾಳೆ. ಮುಂಬಯಿಗೆ ಬಂದು ನನ್ನೊಡನಿರು ಎಂದರೆ ಕೇಳುವವಳಲ್ಲ, ಇತ್ತೀಚೆಗೆ ಆಕೆಯ ಆರೋಗ್ಯ ತುಂಬಾ ಕೆಟ್ಟಿದೆ. 'ಕಾಯಿಲೆ ಉಲ್ಬಣಿಸಿದೆ. ಹಾಸಿಗೆ ಹಿಡಿದಿದ್ದಾರೆ. ಅನ್ನ ನೀರು ಸೇರುವುದಿಲ್ಲ; ಬೇಗ ಹೊರಟು ಬನ್ನಿ' ಎಂಬುದಾಗಿ ನೆರೆಮನೆಯವರಿಂದ ಟೆಲಿಗ್ರಾಮ್ ಬಂದಿತ್ತು. ಹೊರಟೆ. ನೆರೆಮನೆಯವರು ತುಂಬಾ ಒಳ್ಳೆಯವರು. ಈಗಿನ ಕಾಲದಲ್ಲಿ ಅಂತಹವರು ನೋಡ ಸಿಗುವುದು ದುರ್ಲಭ. ಹಿಂದೆ ಎರಡು ಬಾರಿ ಹೀಗೇ ಆಗಿತ್ತು. ನಮ್ಮ ತಾಯಿ ಸತ್ತು ಬದುಕಿದಳು. ಆದರೆ ಇಂದು ಭರವಸೆಯಿಲ್ಲ. ದೇಹ, ಎಲುಬಿನ ಹಂದರವಾಗಿದೆ. ಬದುಕಿ ಉಳಿದರೆ ಪುಣ್ಯ.''

ನನ್ನ ಮಾತು ಕೇಳಿದ ಆಕೆ, ತಕ್ಷಣ, ''ಛೆ...ಛೆ! ಹಾಗನ್ನಬೇಡಿ. ಬದುಕಿಯೇ ಬದುಕುತ್ತಾರೆ ಅವರು.''

ನಂತರ ತುಸು ಮೌನ.

''ನಿಮ್ಮ ಮದುವೆ...?'', ನಂತರ ಸಂಕೋಚಿಸಿ ಕೇಳಿದ ಆಕೆಯ ಪ್ರಶ್ನೆ.

ತಾಯಿಯ ಸಂಕೋಚದ ಈ ಪ್ರಶ್ನೆಗೆ, ಮಗಳು ಉತ್ಸುಕತೆ ಮತ್ತು ಮುಜುಗರ ಎರಡನ್ನೂ ಅಡಗಿಸಿಡಲು ಯತ್ನಿಸಿದ್ದನ್ನು, ಕಣ್ಣಂಚಿನಿಂದ ನಾನು ಗಮನಿಸಿದೆ.

''ಇಲ್ಲ, ಇನ್ನೂ ಆಗಿಲ್ಲ.''

''ಕಾರಣ?''

''ಅಂತಹದೇನೂ ಇಲ್ಲ, ಆಗಿಲ್ಲ ಅಷ್ಟೆ'' ಎಂದು ನಕ್ಕೆ.

ಮಾತು ಅಲ್ಲಿಗೇ ಮುಗಿಯಿತು. ಮುಂದೆ ಅಂತಹ ವಿಶೇಷವಾದುದೇನೂ ನಡೆಯಲಿಲ್ಲ. ನಾನು ಬೇಡವೆಂದರೂ, ತಾನು ಕಟ್ಟಿಕೊಂಡು ತಂದ ಬುತ್ತಿಯಿಂದ ಒಂದಿಷ್ಟು ತಿಂಡಿ ನೀಡಿದಳು ಆಕೆ.

....ಹಂ, ಇನ್ನು ಇಳಿಯುವ ತಾಣ ಬಂತು ಎನ್ನುವಾಗ, ಇಳಿಯಲು ಸಿದ್ಧನಾಗಿ, ಮಂದಾಕಿನಿಯ ಕಡೆ ದೃಷ್ಟಿ ಬೀರಿದೆ. ಆಕೆ ನಕ್ಕಳು. ಆ ನಗು ಖುಷಿಕೊಡುವಂತಹುದು.

ಚಪ್ಪಲಿ ಮೆಟ್ಟಿ, ಸೂಟ್‌ಕೇಸ್‌ನ್ನು ಎತ್ತಿಕೊಂಡು, ''ಆಯ್ತು ಬರ್ತೀನಿ'' ಎಂದು ಅವರಿಬ್ಬರಿಗೂ ಹೊರಡುವೆನೆನ್ನುವಾಗ, ಮಂದಾಕಿನಿ ಎದ್ದು ನನ್ನೆಡೆಗೆ ಸರಿದು, ಯಾರಿಗೂ ತಿಳಿಯದಂತೆ ಸಣ್ಣ ಕಾಗದದ ತುಂಡೊಂದನ್ನು ನನ್ನ ಕೈಗೆ ತುರುಕಿ, ''ಅರಸೀಕೆರೆಯ ಮಾಮನ ವಿಳಾಸ'' ಎಂದು ಮೆಲ್ಲನೇ ನುಡಿದಳು.

ಸರಿ, ಆಕೆ ಕೊಟ್ಟ ಕಾಗದದ ತುಂಡನ್ನು ಕಿಸೆಗೆ ತುರುಕಿಸಿ ನಾನು ಹೊರಟೆ. ''ಬರ್ತೀನಿ'' ಎಂದೆ ಮತ್ತೊಮ್ಮೆ. ನನ್ನ ದೃಷ್ಟಿ ಆಕೆಯ ಮುಖದಲ್ಲಿ ಹರಿದಾಡಿದಾಗ ಆಕೆಯ ಕಣ್ಣರೆಪ್ಪೆಗಳು ಟಪಟಪಾಯಿಸಿದುವು. ಆಕೆ ನನ್ನನ್ನೇ ಆಳವಾಗಿ ನೋಡುತ್ತಿರುವಂತಾಯಿತು.

ನಾನು ರೈಲುಗಾಡಿಯಿಂದ ಇಳಿದೆ. ಕಾಲು ಹಿಡಿದುಕೊಂಡಂತಾಗಿ, ಸೂಟ್‌ಕೇಸನ್ನು ಅಲ್ಲೇ ಕೆಳಗಿಟ್ಟು, ಸ್ವಲ್ಪ ನಿಂತೆ. ಬಳಿಕ ಸೂಟ್‌ಕೇಸ್‌ನ್ನು ಎತ್ತಿಕೊಂಡು, ಪ್ಲಾಟ್‌ಫಾರ್ಮ್‌ನಲ್ಲಿ ಮುನ್ನಡೆಯತೊಡಗಿದೆ. ಸ್ವಲ್ಪ ದೂರ ಸಾಗುತ್ತಿದ್ದಂತೆ, ರೈಲುಗಾಡಿ ಸೀಟಿ ಊದಿತು. ಚಲಿಸತೊಡಗಿತು. ನಾನು ನಡಿಗೆ ನಿಲ್ಲಿಸಿ, ಒಂದ್ನಿಮಿಷ ನಿಂತಲ್ಲೇ ನಿಂತು, ಚಲಿಸುವ ಗಾಡಿಯ ನಾವಿದ್ದ ಡಬ್ಬಿಯ ಕಡೆ ನೋಡಿದೆ. ಅದು ಮುಂದೆ ಸಾಗಿಹೋಗುವಾಗ, ಕಿಟಕಿಯಿಂದ ಎರಡು ಕೈಗಳು ವಿದಾಯ

ಸೂಚಿಸುವಂತೆ ತೋರಿತು. ಅನಿರೀಕ್ಷಿತವಾಗಿ ಕೂಡಿಬಂದ, ಕೂಡಿಸಿಕೊಂಡ, ಅಲ್ಪಕಾಲದ ಒಂದು ಸಂಬಂಧಕ್ಕೆ ವಿದಾಯ.

ರೈಲ್ವೆ ಸ್ಟೇಷನ್‌ನಿಂದ ನಾನು ಹೊರಬಂದೆ. ರಿಕ್ಷಾವನ್ನೇರಿ ಕುಳಿತೆ.

''ಎಲ್ಲಿಗೆ?'' ಎಂದು ಕೇಳಿದ್ದ, ರಿಕ್ಷಾ ಚಾಲಕ.

.......

''ಎಲ್ಲಿಗೆ ಸಾರ್?... ಮತ್ತೊಮ್ಮೆ ಆತ ಕೇಳುವಂತಾಗಿತ್ತು.

ಆ ಗುಂಡಗಿನ ಸೌಮ್ಯ ಮುಖ, ಆ ಕಣ್ಣುಗಳಲ್ಲಿನ ಮುಗ್ಧ ಭಾವ ಒಂದು ವಿಚಿತ್ರ ಸಂವೇದನೆಗೆ ನನ್ನನ್ನು ಒಳಪಡಿಸಿ, ಮತ್ತೆ ಮತ್ತೆ ನೆನಪಿಸಿಕೊಳ್ಳುವಂತೆ ಮಾಡುತ್ತಲಿತ್ತು. ಅದರಲ್ಲಿ, ಆ ದೃಷ್ಟಿಯಲ್ಲಿ ಏನಾದರೂ ಅರಿಕೆ, ಯಾಚನೆ ಮನೆ ಮಾಡಿಕೊಂಡಿತ್ತೇ? ನಾನು ಅರ್ಥಮಾಡಿಕೊಳ್ಳದಂತಹವನಾದೆ. ಎಲ್ಲವೂ ಗೂಢತೆಯ ಅಧೀನಕ್ಕೆ ಒಳಪಟ್ಟಿತ್ತು.

ಕೊನೆಗೆ, ಇಳಿಯುವಾಗ ಆಕೆ ನನ್ನ ಕೈಗೆ ತುರುಕಿದ ವಿಳಾಸ...! ಅದೇಕೆ ಆಕೆ ಹಾಗೆ ಮಾಡಿದಳು? ಅದರ ಅರ್ಥವೇನು? ನಾನು ಆ ವಿಳಾಸಕ್ಕೆ ಬಂದು ಭೇಟಿಯಾಗಲೆಂದೇ? ಅದೇಕೆ? ಅದರಿಂದೇನಾಗುವುದು? ಅತ್ಯಲ್ಪ ಕಾಲದ ಭೇಟಿಯಲ್ಲಿ ಆಕೆ ನನ್ನಲ್ಲಿ ಅಂತಹುದೇನು ಕಂಡಳು?

ಇಲ್ಲ, ಮುಂದೆ ಮಂದಾಕಿನಿ ಏನಾದಳು ಎಂದು ತಿಳಿಯುವ ಗೋಜಿಗೆ ನಾನು ಹೋಗಲಿಲ್ಲ. ಅಂದರೆ, ಆಕೆ ನೀಡಿದ ಅರಸೀಕೆರೆಯ ಆ ವಿಳಾಸಕ್ಕೆ, ನಾನು ತೆರಳಲೇ ಇಲ್ಲ.

ಇದೆಲ್ಲಾ ನಡೆದು ಇದೀಗ ಎಷ್ಟೋ ವರ್ಷಗಳು ಕಳೆದಿವೆ. ಮಂದಾಕಿನಿ ಕೊಟ್ಟಿದ್ದ ವಿಳಾಸವೂ ಕಳೆದುಹೋಗಿದೆ. ಆದರೆ ಎಂದಾದರೂ ಬೆಂಗಳೂರಿಗೆ ತೆರಳುವಾಗ, ಅರಸೀಕೆರೆ ಬಂದಿತೆನ್ನುವಾಗ, ಮಂದಾಕಿನಿಯ ಮುಖ ಇದೀಗಲೂ ನೆನಪಿಗೆ ಬರುವುದು. ಆಕೆ ಇದಿರು ಬಂದು ನಿಂತಂತೆ, ದೈನ್ಯ ಭಾವದಿಂದ ಏನನ್ನೋ ಯಾಚಿಸಿದಂತೆ ಭಾಸವಾಗುವುದು. ಹೃದಯ ಕಂಪಿಸಿ, ನಾನೇನೋ ದೊಡ್ಡ ತಪ್ಪು ಮಾಡಿದೆ ಎನ್ನುವಂತಹ ಭಾವನೆ ನನ್ನೊಳಗೇ ಮೊಳಕೆಯೊಡೆದು, ಅದರಲ್ಲಿ ನಾನು ಕೊಚ್ಚಿಕೊಂಡು ಹೋಗುತ್ತೇನೆ. ಮೂಕನಂತಾಗುತ್ತೇನೆ.

ಮಂದಾಕಿನಿ ಈಗ ಎಲ್ಲಿರುವಳು, ಏನಾದಳು ಎಂಬುದು ತಿಳಿಯದಾದರೂ ಕೊನೆಗೆ ಆಕೆ ಎಲ್ಲಾದರೂ ಇರಲಿ, ಸುಖವಾಗಿರಲಿ ಎಂದು ಹೃದಯ ತಂತಾನೆ ಹಾರೈಸುತ್ತದೆ.







ಶತಮಾನದ ಮೆಲುಕು – 6



ಅಶ್ವತ್ಥ

# ಬೆತ್ತ ಮುರಿಯಿತು

"ಲೇ!" ಅವರ ಪಾಠದ ಬೆತ್ತದಂತೆಯೇ ಗಿಣ್ಣು ಗಿಣ್ಣಾದ ಸಣಕಲು ಮೈಬಿಟ್ಟುಕೊಂಡು, ಹಳೆಯ ಹಂಚಿನ ಸಣ್ಣ ಹಜಾರದಲ್ಲಿ ಕುಳಿತು, ತಕಲಿಯಿಂದ ದಾರ ತೆಗೆಯುತ್ತಿದ್ದ ಮೇಷ್ಟರು ನಂಜಪ್ಪನವರು ತಗ್ಗಿನ ಧ್ವನಿಯಲ್ಲಾದರೂ ಎಂದಿನ ಅಧಿಕಾರವಾಣಿಯಿಂದ ಕೂಗಿದುದು ಕೇಳಿಸಿತು.

ಅಡ್ಡ ಕುಂಕುಮ, ಕೆನ್ನೆಯ ಅರಸಿನದ ಲಕ್ಷಣವಾದ ಮುತ್ತೈದೆ ಗೌರಮ್ಮನವರು ಅಡುಗೆ ಮನೆಯಲ್ಲಿ ಗಳುವಿನ ಮೇಲೆ ಕೋಲಿನಿಂದ ಹರವುತ್ತಿದ್ದ ಸೀರೆಯನ್ನು ಅರ್ಧದಷ್ಟಕ್ಕೇ ಬಿಟ್ಟು ಹಜಾರದ ಬಾಗಿಲಿಗೆ ಬಂದು ಮೆಲ್ಲಗೆ, "ಏನು?" ಎಂದು ಕೇಳಿದರು.

ಆಗ ನಾನು ಅಮ್ಮ ಇಲ್ಲಿಗೆ ಕಳುಹಿಸಿದ್ದ ನಮ್ಮ ಹೊಲದ ಅವರೆಕಾಯನ್ನು ನಡುಮನೆಯಲ್ಲಿ ನನ್ನ ಬುಟ್ಟಿಯಿಂದ ಇವರ ಮೊರಕ್ಕೆ ಸುರಿಯುತ್ತಿದ್ದೆ.

"ಏನೂ ಇಲ್ಲಾ... ಮತ್ತೇ... ನಿನ್ನ ಹತ್ತಿರ ಚಿಲ್ಲರೆ ಪಲ್ಲರೆ ದುಡ್ಡು ಅಷ್ಟೇನಾದರೂ ಇದೆಯೇ ಅಂತ", ಮೇಷ್ಟರು ಅನುಮಾನಿಸುತ್ತ, ತಕಲಿಯಿಂದ ಕಣ್ಣನ್ನು ತೆಗೆಯದೆಯೇ ಕೇಳಿದರು.

"ಇಲ್ಲವಲ್ಲಾ... ಹುಡಿ ಪುಡಿ ಕಾಸು, ಎಂಟು ಹತ್ತು ಆಣೆ ಅಷ್ಟಿತ್ತೂ... ಇವತ್ತು ಬೆಳಗ್ಗೆ ವೆಂಕಟ ರಮಣ ಶೆಟ್ಟರ ಅಂಗಡಿಯಿಂದ ಕೊಂಚ ರವೆ, ಬೆಲ್ಲ ತರಿಸಿಬಿಟ್ಟೆ-ನಾಳೆ ಹಬ್ಬವಲ್ಲ ಅಂತ ಯಾತಕ್ಕೆ?"

"ಶ್ರೀಕಂಠನಿಗೆ ಗಣೇಶನ ಹಬ್ಬದಲ್ಲೂ ಏನೂ ಹೊಲಿಸಲಿಲ್ಲ; ಎರಡು ಭುಜವೂ ಹೊಲಿದ ಷರಟು, ಹಿಂದುಗಡೆ ತ್ಯಾಪೆ ಹಾಕಿದ ಚಡ್ಡಿಗಳನ್ನು ಹಾಕಿಕೊಂಡು ತಿರುಗಾಡ್ತಾ ಇದಾನಲ್ಲ ಅಂತ ಹೊಸದು ಒಂದು ಚಡ್ಡಿ, ಒಂದು ಷರಟನ್ನು ಖಂಡೋಜಿ ಹತ್ತಿರ ಹೊಲೆಯೋದಕ್ಕೆ ಹಾಕಿದೆ, ಈ ಹಬ್ಬಕ್ಕಾದರೂ ಇರಲಿ ಅಂತ. ಈಗ ಹೋಗಿ ತರಬೇಕಾಗಿತ್ತು. ಸ್ವಲ್ಪ ದುಡ್ಡು ಸಾಲದೆ ಬಂದಿದೆ. ಯೋಚಿಸ್ತಾ ಇದ್ದೆ..."

"ಓ", ಗೌರಮ್ಮನವರು ನಿಸ್ಸಹಾಯಕವಾಗಿ ಹೇಳಿಕೊಂಡರು.

"ಹ್ಞೂ... ಅಂದಹಾಗೇ ಶ್ರೀಕಂಠನ ಗೋಲಕದಲ್ಲಿ ಅಷ್ಟಿಷ್ಟು ಅವರಿವರು ಕೊಟ್ಟ ದಕ್ಷಿಣೆ ಪಕ್ಷಿಣೆ ದುಡ್ಡು ಇರಬಹುದೇನೋ ಅಲ್ವೆ?"

"ಹ್ಞೂ. ಇದ್ದೇ ಇರುತ್ತೆ; ನಾವು ಯಾರೂ ಈಚೆಗೆ ಇಸ್ಕೊಂಡಿಲ್ಲವಲ್ಲ"

"ಎಷ್ಟಿದೆಯೋ ಕಾಣೆ. ತಿಂಗಳ ಸಂಬಳ ಬಂದ ಮೇಲೆ ಕೊಟ್ಟುಬಿಡ್ತೀನಿ... ಎಲ್ಲಿ ಅವನು-ಕಾಣಿಸೋದಿಲ್ಲ?"

"ಕಾಳನಿಂಗೇಗೌಡನ ಗಾಡಿ ಮಂಡ್ಯಕ್ಕೆ ಹೋಗಿ ಬರುತ್ತೆ, ಹೋಗಿ ಬರ್ತೀನಮ್ಮಾ ಅಂತ ಗೋಗರೆದು ಕೊಂಡ-ನೀವು ಮನೇಲಿ ಇಲ್ದೆ ಇದ್ದಾಗ. ಅವನಿಗೇನೂ ಮನೇಲಿ ಕೆಲಸವಿಲ್ಲವಲ್ಲ ಅಂತ 'ಹ್ಞೂ' ಅಂದೆ."

“ಸರಿ... ಎಲ್ಲಿ ಹಾಗಾದರೆ ಅವನ ಪೆಟ್ಟಿಗೇಲಿ ನೋಡು... ಉಹುಂ, ನೀನು ನೋಡಯ್ಯ, ಅವಳು ಇನ್ನೂ ಮಡಿಯಲ್ಲಿರಬೇಕು.”

ಮೇಷ್ಟರ ಮಗ ಶ್ರೀಕಂಠನೂ ನಾನೂ ಗೆಳೆಯರು. ಆಗ ಇಬ್ಬರೂ ಮಾಧ್ಯಮಿಕ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದೆವು. ಆ ಕಾಲದ ನಮ್ಮ ಕೆರಗೋಡಿನಲ್ಲಿ ಯಾರೊಬ್ಬರ ಮನೆಯಲ್ಲಿ ನಾಮಕರಣ, ಚೌಲ, ಮುಂಜಿ, ಮದುವೆ, ವ್ರತ, ಉತ್ಸವ ಏನೊಂದಾದರೂ ಸಂತರ್ಪಣೆ ಇದ್ದೇ ಇರುತ್ತಿತ್ತು. ಲೋಟ ಹಿಡಿದುಕೊಂಡು ಹೋಗಿ ಪಟ್ಟಾಗಿ ಊಟ ಗಿಟ್ಟಿಸುವುದಷ್ಟೇ ಅಲ್ಲ, ಉಂಡೂ ಹೋದ ಕೊಂಡೂ ಹೋದ ಎನ್ನುವಂತೆ, ಕೊಸರಾಗಿ ಕಡೆಗೆ, ತಾಮ್ರದ ಮೂರು ಕಾಸಿನ ನಾಣ್ಯದ ದಕ್ಷಿಣೆಯನ್ನೂ ಹೊಡೆದುಕೊಂಡು ಬರುತ್ತಿದ್ದೆವು. ಇದು ನಮ್ಮ ಸ್ವಂತ ಸಂಪಾದನೆ, ನೇರವಾಗಿ ನಮ್ಮ ನಮ್ಮ ಗೋಲಕಕ್ಕೆ ಹೋಗುತ್ತಿತ್ತು. ಅಪ್ಪನ ಬಳಿ ಒಮ್ಮೊಮ್ಮೆ ಚಿಲ್ಲರೆಯಿಲ್ಲದಿದ್ದಾಗ, ಅಮ್ಮನ ಬಳಿ ದುಡ್ಡೇ ಇಲ್ಲದಿದ್ದಾಗ ನಮ್ಮ ಬ್ಯಾಂಕಿನಿಂದ ಒಂದೆರಡಾಣೆ ಸಾಲ ಕೊಟ್ಟು ಅನಂತರ ಬಡ್ಡಿ ಸಮೇತ ವಸೂಲಿ ಮಾಡಿಕೊಳ್ಳುತ್ತಿದ್ದೆವು. ಅನೇಕ ವೇಳೆ ಅಸಲಿಗಿಂತ ಬಡ್ಡಿಯೇ ಹೆಚ್ಚಾಗಿರುತ್ತಿತ್ತು. ಇದು ಈಗಲೂ ಎಷ್ಟೋ ಮನೆಯ ಹುಡುಗರಲ್ಲಿ ಇನ್ನೂ ವಾಡಿಕೆಯಲ್ಲಿರಬಹುದು.



ಗೌರಮ್ಮನವರು ಗೋಡೆಯ ಮೊಳೆಯ ಮೇಲಿದ್ದ ಜೀಗದ ಕೈಯನ್ನು ತೆಗೆದು ನನ್ನ ಕೈಗೆ ಹಾಕಿದರು. ಮೇಷ್ಟರ ಆಜ್ಞೆಯಂತೆ ನಾನು ಅಲ್ಲೀ ಹಜಾರದ ಮೂಲೆಯಲ್ಲಿದ್ದ ಪೆಟ್ಟಿಗೆಯ ಮುಚ್ಚಳ ವನ್ನು ತೆಗೆದೆ. ಕಜ್ಜಿಣದ ಪಟ್ಟಿಗಳನ್ನು ತೊಡೆದ ಜಾಯಿಕಾಯಿ ಮರದ ಈ ಪೆಟ್ಟಿಗೆ ನನಗೆ ಪರಿಚಿತ ವಾದದ್ದೇ. ಶ್ರೀಕಂಠನೊಡನೆ ಆಟ ಪಾಠಗಳಿ ಗಾಗಿ ಬಂದಾಗ, ಇದರೊಳಗೆ ಎಷ್ಟು ಬಾರಿ ಇಣಕಿಣಕಿ ನೋಡಿದ್ದೆನೋ. ಬಲಗಡೆಯ ಮೇಲು ಖಾನೆಯಲ್ಲಿ ಬಿಡಿಕಾಸಿಗೊಂದು ಗುಳಿಗೆಯ ಮಸಿ ತುಂಬಿದ್ದ ಸೀಸೆಯ ಬುಡ್ಡಿ, ಚನ್ನಪಟ್ಟಣದ ಮುಕ್ಕಾಲಾಣೆಯ ಲೇಖನಿ, ಮೂರುಕಾಸಿಗೆರಡಾದ ಹೊಸ ನಿಬ್ಬುಗಳು (ಬರೆಯುವ ಮುಳ್ಳು), ಆರು ಕಾಸಿನ ಆನೆ ಮಾರ್ಕ್‌ನ ಸೀಸದ ಕಡ್ಡಿ, ಕರಟ, ಮುರಿದ ಸೀಸದ ಚೂರು, ಸೀಮೆಸುಣ್ಣದ ಒಂದೆರಡು ತುಂಡು ಇತ್ಯಾದಿ ಶಾಲಾಬಾಲಕ ಲೋಕ. ಯಾವ ಯಾವಾಗಲೋ ಶಾಯಿ ಸ್ವಲ್ಪ ತುಳುಕಿ, ಗೋಂದು ಕೊಂಚ ಚೆಲ್ಲಿ, ಹೇಗೆ ಹೇಗೆ ಆಗಬಹುದಿತ್ತೋ ಹಾಗಿತ್ತು. ಪೆಟ್ಟಿಗೆಯ ಕೆಳಭಾಗ ದಲ್ಲಿ, ಹಿಂದಿನ-ಮುಂದಿನ ಹಲಗೆಗಳ ಮಧ್ಯೆ ಗ್ರಂಥಾಲಯದಲ್ಲಿ ಜೋಡಿಸಿ ನಿಲ್ಲಿಸಿರುವಂತೆ, ಪಠ್ಯಪುಸ್ತಕಗಳು. ಶ್ರೀಕಂಠ ಇವಕ್ಕೆಲ್ಲ 'ವೃತ್ತಾಂತ ಪತ್ರಿಕೆ'ಯ ಹಾಳೆಗಳಿಂದ ರಟ್ಟು ಹಾಕಿ ಎಷ್ಟು ಎಚ್ಚರಿಕೆಯಿಂದ ಇಟ್ಟುಕೊಂಡಿದ್ದನೆಂದರೆ, ಇಷ್ಟು ಕಾಲದ ಮೇಲೂ ಅವು ಇನ್ನೂ ಹೊಸ ಪುಸ್ತಕ ಗಳಂತೆಯೇ ಇದ್ದವು. ಅವುಗಳ ಮೇಲೆ ತನ್ನ ಹೆಸರನ್ನು ಕೂಡ ಬರೆದಿರಲಿಲ್ಲ. ಈ ಪುಸ್ತಕಸಾಲಿನ ಪಕ್ಕದಲ್ಲಿ ಸ್ಲೇಟ್ ಮೇಲೆ ಜೋಡಿಸಿ ಇಟ್ಟ ಎಕ್ಸರ್‌ಸೈಸ್ ಪುಸ್ತಕಗಳು. ಈ ಪಾಠ ಸಲಕರಣೆಗೆ ಜೋಡಿಯಾಗಿ, ಬಲಗಡೆ, ತಾನೇ ಕಟ್ಟಿಗೆಯಿಂದ ಕೆತ್ತಿ ಮಾಡಿದ್ದ ಬುಗುರಿ, ದಾರದ ಉಂಡೆ, ಎರಡು ಚಿನ್ನಿಗಳು, ಒಂದು ದಾಂಡು, ಡಬ್ಬಿ ಮುಚ್ಚಳ ವೊಂದರಲ್ಲಿ ಗೋಲಿ, ಗಜ್ಜುಗ ಮುಂತಾಗಿ ಆಟದ ಸಾಮಾನು. ಕಡೆಗೆ, ಖಾನೆಯ ಕೆಳಗೆ, ಹಿಂದಿನ ಮೂಲೆಯ ಕತ್ತಲಿನಲ್ಲಿತ್ತು, ಈ ನಾಲ್ಕಂಗುಲ ಎತ್ತರದ ದುಂಡು ಗೋಲಕ ಡಬ್ಬಿ; ಅಲ್ಲಿಗೆ ಕೈತೂರಿಸಿ ಎತ್ತಿದರೆ ಭಾರವೇ ಇಲ್ಲ! ನಾಣ್ಯಗಳ ಶಬ್ದವೂ ಆಗಲಿಲ್ಲ! ಬರಿದು!... ಅನಾಹುತ! ನನಗೆ ಎದೆ ಧಸಕ್ಕೆಂದಿತು.

"ಯಾಕೆ?... ಏನು?", ಮೇಷ್ಟರು ಹುಬ್ಬು ಕೂಡಿಸಿ ಕೇಳಿದರು; ಅವರು ನನ್ನ ಅಗಲವಾಗಿ ಬಿಟ್ಟ ಕಣ್ಣಿನ ದಿಗಿಲುಬಿದ್ದ ಮುಖವನ್ನು ನೋಡಿದರು.

ನನಗೆ ಮಾತು ಹೊರಡಲೇ ಇಲ್ಲ; ಒಣಗಿದ ತುಟಿಯನ್ನು ನಾಲಿಗೆಯಿಂದ ಸವರಿಕೊಳ್ಳುತ್ತ ಗೋಲಕವನ್ನು ತಳಮೇಲು ಮಾಡಿ ಅಲ್ಲಾಡಿಸಿದೆ, ಅಷ್ಟೇ.

"ಆ!... ಏನೂ!... ಖಾಲಿಯಾಗಿದೆಯೇ?", ಮೇಷ್ಟರು ಬುಸುಗುಟ್ಟಿದರು. ಅವರ ಹುಬ್ಬು ಗಂಟು, ಮೇಲೆದ್ದ ಗುಡ್ಡೆಗಣ್ಣು, ಕಚ್ಚಿದ ಹಲ್ಲು, ನನ್ನ ಎದೆಯ ಬಡಿತವನ್ನು ಇನ್ನೂ ಹೆಚ್ಚಿಸಿದವು. ಗೌರಮ್ಮನವರ ಎದೆಯೂ ಎದ್ದೆದ್ದು ಬೀಳುತ್ತಿತ್ತು, ನೋಟ ಮೇಷ್ಟರ ಮೇಲೆ ನೆಟ್ಟಿತ್ತು.

"ಎಲಾ ಎಲಾ!... ಹೀಗೆ ಮಾಡಿದಾನೆಯೋ?... ಬರಲಿ ಬರಲಿ!... ಮಾಡ್ತೀನಿ ಅವನಿಗೆ ಹಬ್ಬ-ಬೆತ್ತ ಮುರಿಯ!... ಚರ್ಮ ಸುಲಿದು ಹಾಕ್ತೇನಿ! ಹೂಂ!" ಮೇಷ್ಟರು ಹೂಂಕರಿಸಿದರು.

"ಡಬ್ಬೀನ ಒಳಗಿಟ್ಟು ನೀನು ಹೋಗಪ್ಪ", ಗೌರಮ್ಮನವರು ನನಗೆ ಹೇಳಿದರು.

ನನಗೂ ಇಲ್ಲಿಂದ ಹೋಗುವುದಷ್ಟೇ ಬೇಕಾಗಿತ್ತು. ಗೋಲಕವನ್ನಿಟ್ಟು ಪೆಟ್ಟಿಗೆಯನ್ನು ಮುಚ್ಚಿ, ತಂದಿದ್ದ ಮೊರವನ್ನು ತೆಗೆದುಕೊಂಡು, ನಾನೇ ತಪ್ಪಿತಸ್ಥನೋ ಎನ್ನುವಂತೆ ಅಲ್ಲಿಂದ ಜಾರಿಕೊಂಡೆ.

"ನೋಡಿದೆಯಾ ಇವನ್ನ! ಎಷ್ಟರ ಮಟ್ಟಿಗಾಗಿದಾನೆ!... ಈಗ ಗೊತ್ತಾಯ್ತೋ ಅವನು ಮಂಡ್ಯಕ್ಕೆ ಹೋಗಿರೋ ಗುಟ್ಟು! ಇಲ್ಲಿ ಗೋಲಕ ದಿಂದ ದುಡ್ಡು ಕದ್ದು, ಅಲ್ಲಿ ಯಾವ ಯಾವುದೋ ಹಾಳುಮೂಳಿನ ಮೇಲೆ ಹಾಕಿ ಉಡಾಯಿಸೋ

ದಕ್ಕೆ... ಎಷ್ಟು ದಿನದಿಂದ ಹೀಗೆ ಮಾಡುತ್ತಿದ್ದಾನೋ'' ಮೇಷ್ಟರ ಮಾತು ಕೇಳಿಸುತ್ತಿತ್ತು, ನಾನು ಹೊರಬಾಗಿಲನ್ನು ದಾಟುತ್ತಿದ್ದಾಗ.

''ಆಗಲಿ... ನೋಡೋಣ. ಬರಲಿ... ವಿಚಾರಿಸೋಣ... ಕದ್ದು ಗಿದ್ದು ಮಾಡೋನಲ್ಲ-ಇಷ್ಟಕ್ಕೂ ದುಡ್ಡು ಅವನದ್ದೇ...'', ಗೌರಮ್ಮನವರು ಹೇಳುತ್ತಿದ್ದರು.

''ಸರಿ ಸರಿ, ನೋಡೋದೇನಿದೆ, ನೀನು ಹೇಳೋದು!... ಅಲ್ಲಾ, ಅವನದ್ದೇ ಅಂದುಕೊಂಡರೇನು, ಅದು ಬರಿ ಮೇಲು ವಿಚಾರ. ಹಾಗೇಂತ ಅವನು ತನ್ನ ಇಷ್ಟ ಬಂದ ಹಾಗೆ ಮಾಡಬಹುದೇನು-ನಾವಿರುವಾಗ, ಹೇಳದೆ ಕೇಳದೆ?... ಹಾಗೆ ಮಾಡೋದಕ್ಕೆ ಎಷ್ಟು ಧೈರ್ಯ ಅಂತೀನಿ... ಹೀಗಾದರೆ ನಾಳೆ ಇವನು ಹೇಗಾದಾನು, ಎಂತಾದಾನು ಅಂತ... ಭಡವಾ!...''

ಮುಂದಿನ ಮಾತು ನನಗೆ ಕೇಳಿಸಲಿಲ್ಲ. ಮೆಟ್ಟಿಲನ್ನಿಳಿದು ಬಂದುಬಿಟ್ಟಿದ್ದೆ.

ದಾರಿಯಲ್ಲಿ ಶ್ರೀಕಂಠನ ಬಗ್ಗೆ ಯೋಚಿಸುತ್ತ ನನಗೆ ಆತಂಕ ಕವಿಯಿತು. 'ಅವನು ಅಂಥ ಕೆಟ್ಟ ಹುಡುಗನಾಗಿರಲಿಲ್ಲವಲ್ಲ? ನನಗೆ ಚೆನ್ನಾಗಿ ಗೊತ್ತಿರಲಿಲ್ಲವೆ?.... ಹುಂ, ನಿಜ, ಅವನ ಎದುರು ಒಂದೆರಡು ಬಾರಿ ನನ್ನ ಗೋಲಕ ಉದುರಿಸಿದ್ದೆ. ನಾವು ನಂಜುಂಡ ಸೆಟ್ಟಿಯ ಅಂಗಡಿಯಲ್ಲಿ ಬೆಲ್ಲದ ಮಿಠಾಯನ್ನು ಕೊಂಡು ತಿಂದಿದ್ದೆವು. ಆದರೆ ಅವನು ಹಾಗೆ ಮಾಡಿದ್ದನ್ನು ನಾನು ಕಂಡಿರಲಿಲ್ಲ. ಈಗ ಹೀಗೆ ಗೋಲಕವನ್ನೆಲ್ಲ ಖಾಲಿ ಮಾಡಿ, ಮಂಡ್ಯಕ್ಕೆ ತೆಗೆದುಕೊಂಡು ಹೋಗಿ ಉಡಾಯಿಸಬಲ್ಲನೆಂದು ನನಗೆ ಲವಲೇಶವಾದರೂ ಸಂಶಯ ಬಂದಿರಲಿಲ್ಲವಲ್ಲ? ಹೀಗೇಕೆ ಮಾಡಿಬಿಟ್ಟ? ಛೆ!... ಇನ್ನು ಅವನಿಗೆ ಏನು ಕಾದಿದೆಯೋ-ಮೇಷ್ಟರ ಕೈಯಲ್ಲಿ! ಅಬ್ಬಬ್ಬ' ನೆನಸಿಕೊಂಡಂತೆ ನನ್ನ ಮೈ ನಡುಗಿತು, ಮನ ಮರುಗಿತು.

ನಂಜಪ್ಪ ಮೇಷ್ಟರೆಂದರೆ ಸಾಮಾನ್ಯರೇ? ಶಿಕ್ಷಣ ಕ್ರಮದಲ್ಲಿ ಅವರಿಗೆ ಎಷ್ಟು ನಿಷ್ಠೆಯಿದ್ದಿತೋ, ಶಿಕ್ಷೆಯ ವಿಷಯದಲ್ಲಿ ಅಷ್ಟೇ ನಿರ್ದಾಕ್ಷಿಣ್ಯ, ನಿಷ್ಠುರ, ಕಾಠಿಣ್ಯ. ಪಾಠದಲ್ಲಾಗಲೀ, ನಡತೆಯಲ್ಲಾಗಲೀ ತಪ್ಪಿದರೆ ಅವರಿಂದ ತಪ್ಪಿಸಿಕೊಳ್ಳಲಾಗುತ್ತಿರಲಿಲ್ಲ. ತಕ್ಕದ್ದನ್ನು-ತಕ್ಕದ್ದಕ್ಕಿಂತ ಹೆಚ್ಚನ್ನೇ ಅನ್ನಬೇಕು-ಅನುಭವಿಸಿಯೇ ತೀರಬೇಕಾಗಿತ್ತು. ಯಮಧರ್ಮರಾಯನ ನಿಯಮ. ಯಾರಾದರೂ ಸರಿಯೆ, ಅವರ ಮಗ, ಇವರ ತಮ್ಮ ಎಂದು ಹಿಂದು ಮುಂದು ನೋಡಿದವರೇ ಅಲ್ಲ. ಅವನ ಮೇಲೆ, ಅವರ ಆ ಕುಪ್ರಸಿದ್ಧ ಬೆತ್ತ-ಯಮದಂಡ-ಬೀಳದಿರುತ್ತಿರಲಿಲ್ಲ. ನಾನು ಊರಿನಲ್ಲಿ ದೊಡ್ಡವರ ಮನೆಯವನೇ ಆದರೂ ತರಗತಿಯ ಮಾನಿಟರೇ ಆದರೂ ಮೂರ್ತಪ್ಪನವರ ಮನೆಯಲ್ಲಿ ಲಂಕಾದಹನವಾಡಿದ ದಿನ ನನಗೂ ಬಿಸಿ ಬಿಸಿಯಾಗಿ ಬಿದ್ದದ್ದನ್ನು ಇನ್ನೆಲ್ಲೋ ತಮಗೆ ಅರಿಕೆ ಮಾಡಿಕೊಂಡಿದ್ದೇನಲ್ಲವೆ? ಶ್ರೀಕಂಠನನ್ನಂತೂ-ಅವನು ಬಹಳ ಬುದ್ಧಿವಂತನೇ-ಮಗನೆಂದು ಬಗೆಯದಿರುವುದಿರಲಿ, ಇತರರಿಗಿಂತ ಅವನನ್ನು ಇನ್ನಷ್ಟು ಕಠಿಣವಾಗಿಯೇ ಕಾಣುತ್ತಿದ್ದರು. ಅವರಿಂದ 'ಅಪ್ಪಾ, ಅಯ್ಯಾ' ಎನ್ನಿಸಿಕೊಂಡ ಹುಡುಗರನ್ನು ನಾನಂತೂ ಕಂಡಿರಲೇ ಇಲ್ಲ. ಅದಕ್ಕೆ ಯಾವ ತಪ್ಪನ್ನು ಮಾಡಬೇಕಾಗಿತ್ತೋ ನಮಗೆ ಗೊತ್ತಿರಲಿಲ್ಲ. ಹೀಗಿರುವಾಗ ಈ ಬಡಪಾಯಿ ಶ್ರೀಕಂಠ ಎಂಥ ಕೆಟ್ಟ ಧೈರ್ಯ ಮಾಡಿಬಿಟ್ಟಿದ್ದಾನೆ!

ಮನೆಗೆ ಹೋದ ಮೇಲೂ ನಾನು ಜಗುಲಿಯ ಮೇಲೆ ಕುಳಿತಿದ್ದೆ-ನೆಪಕ್ಕೆ ಪುಸ್ತಕವೊಂದನ್ನು ಹಿಡಿದುಕೊಂಡು. ಕಾಳನಿಂಗೇಗೌಡನ ಗಾಡಿ ಕಂಡಕೂಡಲೇ, ಓಡಿಹೋಗಿ, ಶ್ರೀಕಂಠನಿಗೆ ಗೋಲಕದ ಗುಟ್ಟು ರಟ್ಟಾದದ್ದನ್ನು ತಿಳಿಸಬೇಕೆಂದುಕೊಂಡು, ಪುಸ್ತಕದ ಹಾಳೆಯ ಮೇಲಿನಿಂದ ಊರಿನ ಮುರಿದ ದಿಡ್ಡಿ ಬಾಗಿಲಿನ ಕಡೆಗೆ ನೋಡುತ್ತಿದ್ದೆ. ಅಷ್ಟು ಇಷ್ಟು ಹೊತ್ತಾಯಿತು. ಗಾಡಿಯ ಸುಳಿವಿಲ್ಲ ಇನ್ನೂ.

ಓ, ಮೇಷ್ಟರು! ಹುಂ, ಮೇಷ್ಟರು ತಮ್ಮ ಮನೆಯ ಕಡೆಯಿಂದ ಬರುತ್ತಿದ್ದುದು ಕಂಡಿತು.

ಮೇಲುನೋಟಕ್ಕೆ ಮೇಷ್ಟರ ವ್ಯಕ್ತಿತ್ವದಲ್ಲಿ ಶ್ರೇಷ್ಠ ವೈಶಿಷ್ಟ್ಯವೇನೂ ಇರಲಿಲ್ಲ. ಯಾಕೆ, 'ತರಕ ಲಾಂಟಿ' ಅನ್ನುವಂತೆಯೇ ಇದ್ದರು. ಗಂಟು ಗಂಟಾದ, ಒಣಕಲು ಮೂಳೆ ಮೂಳೆ ಚಕ್ಕಳಗಳ, ಸಾಮಾನ್ಯ ಎತ್ತರದ ಶರೀರ. ಚೂಪಾದ ಮೂಗು, ಗಲ್ಲ. ಎದ್ದುಬಿದ್ದು ಹಪ್ಪಳವಾಗಿ, ಸ್ವಲ್ಪ ಸುಕ್ಕು ಸುಕ್ಕೂ ಆಗಿದ್ದ ಕೆನ್ನೆ. ಬೂದು ಬಣ್ಣದ ಗುಡ್ಡೆಗಣ್ಣುಗಳ ಮೇಲೆ ಅರೆ ನೆರೆತ ಒತ್ತು ಹುಬ್ಬು. ಮುಂದೆ ಚಾಚಿ ಬಂದು, ಅಡ್ಡ ಗಂಧಾಕ್ಷತೆಯಿಂದ ಅಲಂಕೃತವಾದ ದೊಡ್ಡ ಹಣೆ. ಮೀಸೆಯಿಲ್ಲದ ತೆಳು ತುಟಿ, ಗೆರೆಬಾಯಿ, ವಿನಾಯಕನ ಕಿವಿಗಳು. ಇಂಥ ಮುಖ ನಿಂತಿದ್ದದ್ದು, ದೊಡ್ಡ ಗೋಮಾಳೆ ಗಂಟು ಮೇಲೆ ಕೆಳಗೆ ಆಡುವ ಕೋಲು ಕೊರಳಿನ ಮೇಲೆ. ಉದ್ದ ಕೂದಲಿನ ದಪ್ಪ ಜುಟ್ಟನ್ನು ಪೂರ್ತಿಯಾಗಿ ಮುಚ್ಚುವ ಸಾಮರ್ಥ್ಯವಿಲ್ಲದಿದ್ದ ಸಾದಾ ರುಮಾಲು. ನಿಂಬೆಹಣ್ಣು ತೂರಬಹು ದಾದಷ್ಟು ಸಡಿಲವಾದ ಕಂತಪಟ್ಟಿಗೆಯ, ಕಂದು ಬಣ್ಣದ, ಮುಚ್ಚು ಕೋಟಿನ ತೋಳುಗಳಿಂದ ಹೊರಬಂದ ಬಿದಿರು ಬೆರಳುಗಳು. ಮೊಣಕಾಲು ಮುಚ್ಚದ ಕಡ್ಡಿಯಂಚಿನ ಕಚ್ಚೆಪಂಚೆಯ ಕೆಳಗಿನ ಬರಿಗಾಲು. ಹೊಲದಲ್ಲಿ ಹಕ್ಕಿಯೋಡಿಸುವ ಬೆದರುಗೊಂಬೆ ಜೀವ ಹೊಂದಿ ನಡೆದುಬರು ವಂತಿತ್ತು... ಹುಂ, ಆಗ, ಅಂದರೆ ಸುಮಾರು ನಲವತ್ತೈದು ವರ್ಷಗಳ ಹಿಂದೆ 20-$^{1}/_{2}$-30 ಸಂಬಳದಲ್ಲಿ ಒದ್ದಾಡುತ್ತ, ಸಂತಾನ ನಿಯಂತ್ರಣದ ಹೆಸರನ್ನೇ ಕೇಳದಿದ್ದ ಕಾಲದಲ್ಲಿ ಏಳು ಮಕ್ಕಳ ತಂದೆಯಾಗಿ, ವರದಕ್ಷಿಣೆ ವರೋಪಚಾರಗಳು ಕೊರಳಿನುರುಳಾಗಿದ್ದಾಗ, ನಾಲ್ಕು ಹೆಣ್ಣುಗಳ ಮದುವೆ ಮಾಡಿ ಕೃತಕೃತ್ಯ ರಾಗಿದ್ದ ಬಡಮೇಷ್ಟರು, ಪ್ರಕೃತಿಯಿಂದಲೇ ಕೃಶವಾದವರು, ಇನ್ನು ಹೇಗೆ ತಾನೇ ಇದ್ದಾರು? ಆದರೇನು, ನಮಗೆ ಈ ವ್ಯಕ್ತಿಯಲ್ಲಿ ಎಷ್ಟೊಂದು ಭಕ್ತಿ, ಭಯ! ಊರಿನ ಹಿರಿಯರಿಗೂ ಇವರಲ್ಲಿ ಎಷ್ಟು ಗೌರವಾದರ!

ಮೇಷ್ಟರು ನಮ್ಮ ಮನೆಗೇ ಬರುತ್ತಿದ್ದರು ನಾನು ತಟ್ಟನೆ ಎದ್ದು, ಜಗುಲಿಯಿಂದ ಧುಮು ನಿಂತುಕೊಂಡೆ. "ಹೀಗೆ ಹೊರ ಜಗುಲಿಯ ಮೇಲೆ ಕುಳಿತಿದ್ದರೆ ತಲೆಗೆ ಏನು ಹತ್ತುತ್ತೆ?" ಹತ್ತಿರಕ್ಕೆ ಬಂದಮೇಲೆ ಅವರು ಕೇಳಿದರು.

ನನಗೆ ತಬ್ಬಿಬ್ಬಾಯಿತು. ಸುಮ್ಮನಿದ್ದೆ.

"ಮನೇಲಿದಾರೇನು, ಯಜಮಾನರು?"

ಸದ್ಯ!

"ಇದಾರೆ ಸಾರ್! ಇದಾರೆ!... ಅಣ್ಣಾ ಅಣ್ಣಾ!... ಮೇಷ್ಟರು ಬಂದಿದಾರೆ, ಮೇಷ್ಟರು ಬಂದಿದಾರೆ!", ನಾನು ಕೂಗಿಕೊಳ್ಳುತ್ತ ಒಳ ಗಡೆಗೆ ಓಡಿದೆ. ನನಗೆ ಬೇಕಾಗಿದ್ದದ್ದೂ ಅಷ್ಟೇ- ತಪ್ಪಿಸಿಕೊಳ್ಳೋದು.

ಅಣ್ಣ ಬಾಗಿಲಿಗೇ ಬಂದು "ದಯಮಾಡ ಬೇಕು ಮೇಷ್ಟರೆ!" ಎಂದು ಸ್ವಾಗತಿಸಿ, ಹಜಾರಕ್ಕೆ ಕರೆದುಕೊಂಡು ಬಂದರು. ಇಬ್ಬರೂ ಚಾಪೆಯ ಮೇಲೆ ಕುಳಿತು ಮಾತನಾಡುತ್ತಿದ್ದಾಗ, ನಾನು ಕೋಣೆಯೊಳಗೆ ಅಡಗಿಕೊಂಡು, ಈಗ ಕಿಟಕಿ ಯಿಂದ, ದಿಡ್ಡಿ ಬಾಗಿಲಿನ ದಾರಿಯನ್ನು ನೋಡುತ್ತ ಕೂತೆ. ಮೊದ ಮೊದಲು ಮೇಷ್ಟರು, ಅಣ್ಣ ಆಡುತ್ತಿದ್ದ ಮಾತಿಗೆ ಕಿವಿಗೊಟ್ಟು ಕೇಳುತ್ತಿದ್ದೆ. ಶ್ರೀಕಂಠನ ವಿಚಾರವೇನೂ ಬರಲಿಲ್ಲ, ಊರಿನ ಯಾವು ಯಾವುದೋ ಸಮಾಚಾರ. ನನ್ನ ಆಸಕ್ತಿ ನಿಂತುಹೋಯಿತು. ಸ್ವಲ್ಪ ಹೊತ್ತಾದ ಮೇಲೆ, ಮೇಷ್ಟರು ಹೊರಡುವಾಗ, "ಸಂಬಳ ಬರು ತ್ತಲೂ ಕೊಟ್ಟುಬಿಡ್ತೀನಿ" ಎಂದದ್ದು ಕಿವಿಯ ಮೇಲೆ ಬಿತ್ತು. ಅಣ್ಣ, "ಇರಲಿ, ಮೇಷ್ಟರೇ ಅದೇನು ಜುಜುಬಿ" ಅಂದಾಗ ನಾನು ಅರ್ಥ ಮಾಡಿಕೊಂಡೆ. ಮೇಷ್ಟರು ಅಂಗಡಿಯ ಕಡೆ ಹೋದದ್ದನ್ನು ಕಿಟಕಿಯ ಸಂದಿಯಿಂದ ನೋಡು ತ್ತಿದ್ದೆ. ಇನ್ನಷ್ಟು ಹೊತ್ತಾದ ಮೇಲೆ ಅವರು ಹಿಂತಿರುಗಿ ಬಂದು, ಅವರ ಮನೆಯ ಕಡೆಗೆ ಹೋದರು. ಅವರ ಕೈಯಲ್ಲಿ ಹೊಸ ಬಟ್ಟೆಯ ಸುರುಳಿ ಕಾಣಿಸಿತು.

ಕತ್ತಲಾಗುತ್ತಿತ್ತು. ಗಾಡಿ ಇನ್ನೂ ಕಾಣಸಲೇ ಇಲ್ಲ. ನೋಡಿ, ನೋಡಿ ನನ್ನ ಕಣ್ಣು ನೋಯುತ್ತಿತ್ತು. 'ಥಾಂ, ಥಾಂ... ಥಾಂ!' ಐದು ನಿಮಿಷ ಮುಂದಾಗಿದ್ದ ಹಜಾರದ ಗಡಿಯಾರ ಏಳು ಗಂಟೆ ಹೊಡೆಯಿತು.

ಓ, ಸಂಜೆ ಪಾಠದ ಹೊತ್ತು! ಗಡಿಬಿಡಿ ಯಿಂದ ಪುಸ್ತಕ, ಸ್ಲೇಟುಗಳನ್ನು ಜೋಡಿಸಿ ಕೊಂಡು ಮೇಷ್ಟರ ಮನೆಗೆ ಓಡಿದೆ.

ಭಾನುವಾರವಾದರೇನು, ಮೇಷ್ಟರ ಮನೆಯ ಪಾಠಕ್ಕೆ ರಜವಿರಲಿಲ್ಲ. ಲೋಯರ್ ಸೆಕೆಂಡರಿ ಪರೀಕ್ಷೆಗಾಗಿ ಅವರು, ಶಾಲೆಯ ಪಾಠದ ಜತೆಗೆ, ಈ ರೀತಿಯಾಗಿಯೂ ವಿದ್ಯಾರ್ಥಿಗಳನ್ನು ತಯಾ ರಿಸುತ್ತಿದ್ದರು. ಬೇಕಾದವರು ಬರಬಹುದೆಂದು ಅವರು ವಾಡಿಕೆಯಾಗಿ ಹೇಳುತ್ತಿದ್ದರಾದರೂ, ಎಲ್ಲ ತಂದೆ ತಾಯಿಗಳೂ ಹುಡುಗರನ್ನು ಕಳುಹಿಸುತ್ತಲೇ ಇದ್ದರು. ಅಲ್ಲದೆ ಹುಡುಗ ರಲ್ಲಿಯೂ ಬಹುಪಾಲು, ಬರಲು ಇಷ್ಟ ಪಡು ತ್ತಿದ್ದರು. ಅಂಥ ಪಾಠದ ಬೆಲೆಯನ್ನು ಬಲ್ಲರು. ಚೆನ್ನಾಗಿ ಪಾಸು ಮಾಡಬೇಕಾಗಿತ್ತಲ್ಲ. ಒಬ್ಬಿಬ್ಬರಿಗೆ ಬರಲು ಇಷ್ಟವಿಲ್ಲದಿರಬಹುದು, ಆದರೆ ಬರದಿ ರಲು ಧೈರ್ಯವೆಲ್ಲಿ ಬಂತು? ಹೀಗೆಂದರೆ, ಈ ಬಲ ವಂತದ 'ಪ್ರೈವೇಟ್ ಟ್ಯೂಷನ್'ನಿಂದ ಮೇಷ್ಟರು ಹೇರಳವಾಗಿ ಹಣ ಸಂಪಾದಿಸುತ್ತಿದ್ದರೆಂದಲ್ಲ. ಮನೆಯಲ್ಲಿ 'ಅಹನ್ಯಾಹಿಕ'ವಾಗಿದ್ದರೂ ಮನೆ ಪಾಠಕ್ಕೆ ಹಣ ಕೇಳಬೇಕೆಂಬುದು ಆ ಬಡ ಮೇಷ್ಟರ ಬುದ್ಧಿಗೆ ಹೊಳೆದೇ ಇರಲಿಲ್ಲ. ವಿದ್ಯಾರ್ಥಿಗಳ ಪೋಷಕರಿಗೂ ಅಷ್ಟೆ. ಆಗಿನ ನೌಕರಿ, ಕೂಲಿ ಕೇಳದ ತೋಳಸ ಕೆಲಸವೆಂದೆನಿಸಿಕೊಂಡಿರಲಿಲ್ಲ. ಸರಕಾರಿ ಡಾಕ್ಟರು, ಔಷಧಿಯನ್ನು ಮನೆಗೆ ಸಾಗಿಸಿ, ರೋಗಿಗೆ, 'ಮನೆಗೆ ಬನ್ನಿ' ಎಂದು ಹೇಳುತ್ತಿರಲಿಲ್ಲ. ಮೇಷ್ಟರು 'ಇವತ್ತು ಪಾಠ ತಗೊಳ್ಳೊಲ್ಲ' ಎಂದು ಹೇಳಿ ಪುಣ್ಯವಂತರ ಹುಡುಗನಿಗೆ, 'ನೀನು ತುಂಬ backward ಆಗಿದೀಯೆ. ಟ್ಯೂಷನ್ ಹೇಳಿಸಿಕೊ, ಇಲ್ಲದೆ ಇದ್ರೆ, ಫೇಲಾಗ್ತಿಯೆ' ಎಂದು ಹೇಳುತ್ತಿರಲಿಲ್ಲ. ಹುಡುಗರು ಬುದ್ಧಿವಂತರಾಗಿ ಮುಂದುವರಿಯ ಬೇಕೆಂಬುದೊಂದೇ ಮೇಷ್ಟರ ಉದ್ದೇಶ. ನಮ್ಮ ಶಾಲೆಯಲ್ಲಿ ಹದಿನೈದು ಹುಡುಗರು ಪರೀಕ್ಷೆಗೆ ಕಟ್ಟಿದರೆ ಆರೆಂಟಾದರೂ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದುತ್ತಿದ್ದರು.

ನಾನು ಮೇಷ್ಟರ ಮನೆಗೆ ಬಂದಾಗ, ಅಂಗಳ ದಲ್ಲಿ, ಕಕ್ಕಡದಷ್ಟು ದೊಡ್ಡದಾದ ಬುಡ್ಡಿಯ ಸುತ್ತ, ಹುಡುಗರು ಗುಂಡಾಗಿ ಕುಳಿತು ಪುಸ್ತಕಗಳನ್ನು ತೆರೆದು ಓದಿಕೊಳ್ಳುತ್ತಿದ್ದರು. ನಾನು ಸುತ್ತ ನೋಡಿದೆ. 'ಅಯ್ಯೋ ಶ್ರೀಕಂಠನೆಲ್ಲಿ, ಇನ್ನೂ ಬಂದಿಲ್ಲವಲ್ಲ!' ಎಂದುಕೊಂಡೆ. ಬಾಗಿಲಿನಲ್ಲಿ



ಗೌರಮ್ಮನವರು ನಿಂತುಕೊಂಡಿದ್ದರು. ಅವರಿಗೂ ಅದೇ ಯೋಚನೆ ಇದ್ದಿರಬೇಕು. ನಾನು ಹುಡುಗರ ವರ್ತುಳದಲ್ಲಿ ಸ್ಥಳಮಾಡಿಕೊಳ್ಳುತ್ತಿದ್ದಂತೆಯೇ ಮೇಷ್ಟರು ಬಂದು, ಅವರಿಗಾಗಿ ಕಾದಿರಿಸಿದ್ದ ಸ್ಥಾನದಲ್ಲಿ ಕುಳಿತರು. ಆಗ ತಾನೆ ಅವರು ಸಂಧ್ಯಾವಂದನೆ ಮುಗಿಸಿ ಬಂದಿದ್ದು, ಅರೆಬೆತ್ತಲೆಯಾಗಿಯೇ ಇದ್ದರು. ತಂದಿದ್ದ ಮೂರು ಪುಸ್ತಕಗಳನ್ನು ಎಡತೊಡೆಯ ಮೇಲಿಟ್ಟುಕೊಂಡರು. ಬಲತೊಡೆಯ ಮೇಲೆ ಆ ಬಿಡದ ಬೆತ್ತ.

ಮೇಷ್ಟರು ಎಲ್ಲ ವಿಷಯಗಳನ್ನೂ ಬೋಧಿಸುತ್ತಿದ್ದರೂ ಮನೆಪಾಠದಲ್ಲಿ ಮುಖ್ಯವಾಗಿ ಗಮನ ಕೊಡುತ್ತಿದ್ದುದು ಭೂಗೋಳ, ವ್ಯಾಕರಣ, ಗಣಿತಗಳಿಗೇ. 'ಏಕೈಕಮಪ್ಯನರ್ಥಾಯ' ಎಂದಂತೆ, ಅವು ಒಂದೊಂದೇ, ತಲೆನೋವಾಗಿ ಸಾಮಾನ್ಯ ವಿದ್ಯಾರ್ಥಿಗೆ ಪರೀಕ್ಷೆಯಲ್ಲಿ ಅನರ್ಥವನ್ನುಂಟು ಮಾಡುವಂಥವು. ಅದನ್ನರಿತೇ ಮೇಷ್ಟರು, ಅವುಗಳಲ್ಲಿ ನಮ್ಮನ್ನು ಪಾರಂಗತರನ್ನಾಗಿ ಮಾಡುವ ವಿಶೇಷ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದರೇನೋ. ಅವರೇನೋ ಮಹಾರಾಯರು, ಅವನ್ನು ಪೂರ್ಣವಾಗಿ ಜೀರ್ಣಸಿಕೊಂಡು ಲೀಲಾಜಾಲವಾಗಿ ಹೇಳಿಕೊಡುತ್ತಿದ್ದರು. ರಘುನಾಥರಾಯರ 'ಭೂಗೋಳ' ಮತ್ತು ವಿದ್ಯಾಭ್ಯಾಸ ಇಲಾಖೆಯ 'ಹೊಸಗನ್ನಡ ವ್ಯಾಕರಣ' ಅವರಿಗೆ ಕಂಠಪಾಠವಾದಂತಿತ್ತು. ಪಾಠ ಹೇಳುವಾಗ ಪುಸ್ತಕಗಳು ಮುಂದಿದ್ದರೂ ಅವರು ಅದನ್ನು ತೆರೆಯುತ್ತಿದ್ದುದೇ ಅಪರೂಪ. ಪುಸ್ತಕಗಳು ಹಳೆಯವಾಗಿದ್ದರೂ, ಹಾಳೆಗಳು ಹಳದಿಯಾಗಿದ್ದರೂ, ಬೆರಳಿನ ದಾಳಿಗೆ ಬಹಳವಾಗಿ ಸಿಕ್ಕಿ ಸವೆದಿರಲಿಲ್ಲ. ಜಗತ್ತಿನಲ್ಲಿ ಅತ್ಯುನ್ನತವಾದ ಪರ್ವತ ಶಿಖರ ಎವರೆಸ್ಟ್ ಎಂದೂ, ಅತ್ಯಂತ ಹೆಚ್ಚು ಮಳೆ ಬೀಳುವ ಸ್ಥಳ ಚಿರಾಪುಂಜಿಯೆಂದೂ, ಅತ್ಯಂತ ಉದ್ದವಾದ ನದಿ ಚೀಣಾದ ಯಾಂಗ್‌ಟ್ಸಿ-ಕಿಯಾಂಗ್ ಎಂದೂ, ಅತ್ಯಂತ ದೊಡ್ಡ ಸಂತೆ ನಡೆಯುತ್ತಿದ್ದು ರಷ್ಯಾದ ನಿಜನಿ ನೌಗ್ರಾಡ್‌ನಲ್ಲಿ ಎಂದೂ, ಇಂಥಾದ್ದೇ ನೂರಾರು-ಸಾವಿರಾರೇ-ವಿಚಾರಗಳು ಎಷ್ಟು ಕೊಡಹಿದರೂ ನನ್ನ ಬುರುಡೆಯಿಂದ ಇನ್ನೂ ಬಿದ್ದುಹೋಗದಿದ್ದರೆ, ಆ ಅಪರಾಧಕ್ಕೆ ಅವರೇ ಕಾರಣರು. ಈಗ ನೀವು ಓದುತ್ತಿರುವುದರಲ್ಲಿ ಅಷ್ಟಿಷ್ಟು ವ್ಯಾಕರಣ ಕಂಡು ಬಂದರೆ, ಅದು ಅವರ ಅನುಕರಣವೇ. ಇನ್ನು ಗಣಿತವೋ? ಓ, ಅವರು ಗಣಿತದಿಂದಲೇ, ಅದರ ಅಗಣಿತ ಜೀವಕಣಗಳಿಂದಲೇ ಮಾಡಲ್ಪಟ್ಟಿದ್ದರೆಂದು ನನ್ನ ನಿಸ್ಸಂಶಯ ನಿರ್ಧಾರ. ಗಂಟೆಗೆ ಮೂವತ್ತು-ನಲವತ್ತು ಭಿನ್ನರಾಶಿ, ತ್ರೈರಾಶ್ಯಾದಿ ಲೆಕ್ಕಗಳನ್ನು ಮಾಡಿ ಮುಗಿಸುತ್ತಿದ್ದರೆಂದರೆ ಇಂದಿನವರನೇಕರಿಗೆ ಅದು ರಾಮಾಯಣ ಭಾರತ, ಭಾಗವತ, ಪುರಾಣಗಳ ಪವಾಡ ಕತೆಯೆಂದೆನ್ನಿಸಬಹುದು-ಹನುಮಂತ ಸಮುದ್ರವನ್ನು ಹಾರಿದ, ಕೃಷ್ಣ, ತುದಿಬೆರಳಲ್ಲಿ ಗೋವರ್ಧನ ಪರ್ವತವನ್ನೆತ್ತಿದ ಎಂದು ಮುಂತಾಗಿ ಹೇಳಿದಂತೆ. ದಿನದಿನವೂ, ದಿನಕ್ಕೆರಡು ಬಾರಿ, 'ಅಭ್ಯಾಸ'ದ ಲೆಕ್ಕಗಳನ್ನು ನಮಗೆ ಹೇಳಿ ಬರೆಯಿಸುತ್ತಿದ್ದುದರಿಂದ, ಅವರ 'ಅಂಕಗಣಿತ' ಪುಸ್ತಕ-ಯಾವ ಓಬೀರಾಯನ ಕಾಲದಲ್ಲಿ ಕೊಂಡದ್ದೋ ಏನೋ-ಬೆರಳಿನ ತಿಕ್ಕಾಟಕ್ಕೆ ಸಿಕ್ಕಿ ಮೇಲು ಕೆಳಗಿನ ಮೂಲೆಗಳು ಗೆದ್ದಲು ತಿಂದಂತಾಗಿದ್ದುದಷ್ಟೇ ಅಲ್ಲ, ಮಧ್ಯದಲ್ಲೂ ಅಲ್ಲಲ್ಲಿ ಹರಿದು, ಜೂಲಾಗಿ ಹೋಗಿತ್ತು. ಹಾಳೆಗಳು ಮಾಸಲು



ಕೆಂದು ಬಣ್ಣಕ್ಕೆ ತಿರುಗಿ, ಮುರಿಮುರಿಯು ವಂತಾಗಿ, ಒಣಗಿದ ಹಪ್ಪಳವಾಗಿದ್ದವು. ಮೇಲಿನ ಕೆಂಪು ರಟ್ಟು ಯಾವಾಗಲೋ ಹರಿದು ಹೋಗಿತ್ತು. ಅದರ ಸ್ಥಾನದಲ್ಲಿ ತ್ಯಾಪೆ ಅಂಟಿಸಿದ್ದ ಕತ್ತೆ ಕಾಗದದ ರಟ್ಟು ಅದೆಷ್ಟನೆಯ ಬಾರಿ ಯದೋ. ಅಂಕಗಣಿತದ ಪರಿಚಯ ಮೇಷ್ಟರಿಗೆ ಅಷ್ಟೊಂದು ಗಾಢವಾಗಿ ಇದ್ದಿತೆಂದೇ, ಅವರಿಗೆ ಆ ಚಿಂದಿ ಪುಸ್ತಕದಿಂದ ಪಾಠ ಹೇಳುವುದು ಸಾಧ್ಯ ವಾಗಿತ್ತು. ಅದರಲ್ಲಿಯ ಅಭ್ಯಾಸಗಳ ಲೆಕ್ಕಗಳನ್ನು ಬರೆಸುವಾಗ, ಅವರು ಕೂಡ ಒಮ್ಮೊಮ್ಮೆ ಅಂಕಿ ಗಳನ್ನು ಸರಿಯಾಗಿ ಓದಲಾಗದೆ ತಡವರಿಸು ತ್ತಿದ್ದರೆಂದರೆ ಪುಸ್ತಕದ ಸ್ಥಿತಿಯನ್ನು ಊಹಿಸಿಕೊಳ್ಳ ಬಹುದು. ಅಂತೂ ಮುರಿದು, ಹರಿದು, ತ್ಯಾಪೆ-ತ್ಯಾಪೆಯಾಗಿ ಮುಪ್ಪಾದ ಆ ಪುಸ್ತಕವೇ ಹೇಗೋ ಇನ್ನೂ ನಡೆಯುತ್ತಿತ್ತು-ಸಾವಿಗೊಂದು ಹೆಜ್ಜೆಯಿಟ್ಟು ಮುರಿದು ಬೀಳುತ್ತಿದ್ದರೂ ನಿವೃತ್ತರಾಗಲು ನಿರಾ ಕರಿಸುವ ಅಧಿಕಾರ ಮೋಹಿತರಂತೆ.

ಮೇಷ್ಟರ ಬೋಧನ ಕ್ರಮದಲ್ಲಿ, ಅವರ ಎಡ ತೊಡೆಯ ಮೇಲಿದ್ದ ಆ ಪುಸ್ತಕಗಳ ಪಾತ್ರಕ್ಕಿಂತ, ಬಲ ತೊಡೆಯ ಮೇಲಿದ್ದ ಬೆತ್ತದ ಪ್ರಾಶಸ್ತ್ಯವೇ ಹೆಚ್ಚೇನೋ. ಹಾಗೆ ಯೋಚಿಸಿದಾಗ, ಒಂದೊಂದು ಬಾರಿ, ನಮಗೆ ಗುರುಭಕ್ತಿಗಿಂತಲೂ ವೇತ್ರಭಕ್ತಿ, ಭಯವೇ ಹೆಚ್ಚಾಗಿತ್ತೆಂದು ತೋರುತ್ತಿತ್ತು. ಹುಂ, ಬೆತ್ತವಿಲ್ಲದ ಗುರು, ಬಾಲವಿಲ್ಲದ ಚೇಳು ಎಂದು ಪರಿಗಣಿಸುತ್ತಿದ್ದ ಕಾಲ ಅದು. ಪಾಠದ್ರವವನ್ನು ವಿದ್ಯಾರ್ಥಿಯೊಳಗೆ ರಕ್ತಗತವಾಗುವಂತೆ ಚುಚ್ಚುವ ಇಂಜಕ್ಷನ್ ಸೂಜಿಯಾಗಿತ್ತು, ಬೆತ್ತ. ಎಡಗೈಯಲ್ಲಿ ಮತಗ್ರಂಥ, ಬಲಗೈಯಲ್ಲಿ ಕತ್ತಿಯನ್ನು ಹಿಡಿದ ಮತ-ಪ್ರಚಾರಕರಂತೆ ಗುರು, ಪಠ್ಯಪುಸ್ತಕ, ಬೆತ್ತಗಳನ್ನು ಹಿಡಿದು ಸವ್ಯಸಾಚಿಯಾಗಿರುತ್ತಿದ್ದರೆ ಅವರನ್ನು ಯಾವ ಬಡವಿದ್ಯಾರ್ಥಿ ತಾನೆ ಎದುರಿಸಬಲ್ಲವನಾಗಿದ್ದ? ಆಗ ಇನ್ನೂ ಮನೋ ವಿಜ್ಞಾನದ ಮೆತ್ತೆದಿಂಬುಗಳನ್ನು ಒದಗಿಸುತ್ತಿರ ಲಿಲ್ಲ, ಬೆತ್ತದೊಡನೆ ಕಸರತ್ತು ಮಾಡಬೇಕಾಗಿತ್ತು. ಹಾಗೇ ನಾವು ಮನುಷ್ಯರಾದೆವು ಅನ್ನಿ. ಮೇಷ್ಟ ರಂತೆಯೇ ಇದ್ದ ಅವರ ತೆಳುವಾದ ಗಟ್ಟಿ ಬೆತ್ತ, ಎರಡು ಅಡಿ ಉದ್ದವಿತ್ತು. ಅವರ ಬೆರಳಿ ನಂತೆಯೇ ಅದರ ಗಿಣ್ಣೂ. ಹುಡುಗರ ಹಸ್ತ ಸಂಪರ್ಕದಿಂದ (ಹಸ್ತಂಗತವಾಗಿ?) ಅದಕ್ಕೆ ಪಾಲೀಷ್ ಕೊಟ್ಟಂತಾಗಿ, ಅದು ನಮ್ಮ ಮುಂದಿನ ಬುದ್ಧಿಯ ಬೆಳಕಿನಲ್ಲಿಯೂ ಕೂಡ ಮಿರಿಮಿರಿ ಮಿಂಚುತ್ತಿತ್ತು. ಮೇಷ್ಟರು ಅದನ್ನು ಝಳಪಿಸಿದಾಗ ಅದರಿಂದ ಮಿಂಚೇ ಹೊರಡುತ್ತಿದ್ದಂತೆ ಹುಡು ಗರಿಗೆ ಕಾಣುತ್ತಿತ್ತು-ಇಂದ್ರಾಯುಧದಿಂದ ಹೊರಟಂತೇನೋ. ಅದು ಅಂಗೈ ಮೇಲೆ 'ಛಟ್' ಅಂದರೆ ನಮಗಂತೂ ಸಿಡಿಲು ಬಡಿ ದಂತೇ ಆಗುತ್ತಿತ್ತು. ಇನ್ನು ತೃತೀಯ ಶ್ರೇಣಿಯ (ಥರ್ಡ್‌ಕ್ಲಾಸ್) ವಿದ್ಯಾರ್ಥಿಗಳು ಪ್ರಥಮ ಶ್ರೇಣಿ (ಫಸ್ಟ್‌ಕ್ಲಾಸ್!) ಆಗದೆ ಹೇಗಿದ್ದಾರು? ಈ ಪರಿವರ್ತನೆಯಾಗುವವರೆಗೆ ಮಾತ್ರ-ಕಮ್ಮಾರನ ಕೈಯಲ್ಲಿ ಕಬ್ಬಿಣ ರೂಪುಗೊಂಡಂತೆ-ಆ ವಿದ್ಯಾರ್ಥಿಯ ಪಾಡು ಬಹಳ ಕಷ್ಟವೇ, ಪಾಪ! ಅಂದು ನಾನು ಪಾಠಕ್ಕೆ ಕುಳಿತಾಗ, 'ಇಂದು ಯಾರು ಯಾರಿಗೆ ಗ್ರಹಚಾರ ವಕ್ರವಾಗಿದೆಯೋ' ಎಂದುಕೊಂಡೆ. ತಟ್ಟನೆ, 'ಛೆ, ಅಂದಹಾಗೆ ಶ್ರೀಕಂಠ ಇನ್ನೂ ಬರಲಿಲ್ಲವಲ್ಲ! ದೇವರೇ!' ಎಂದು ಬಂದಿತು ನೆನಪು.

ಪಾಠ ಮೊದಲಾಯಿತು.

'ಷಫೀಲ್ಡ್ ಎಲ್ಲಿದೆ, ಯಾತಕ್ಕೆ ಪ್ರಸಿದ್ಧಿ?', ಗಲ್ಫ್‌ಸ್ಟ್ರೀಮ್ ಅಂದರೇನು, ಅದರಿಂದ ಏನು ಪ್ರಯೋಜನ?', 'ಡೆನ್‌ಮಾರ್ಕ್ ದೇಶದ ರಾಜಧಾನಿ ಯಾವುದು?', 'ಕುಲ್‌ಗೂರ್ಲಿ ಮತ್ತು ಕುಲ್ಗಾರ್ಡಿ- ಇವು ಏನು, ಇವುಗಳ ಪ್ರಾಶಸ್ತ್ಯಕ್ಕೆ ಕಾರಣವೇನು?' ಹೀಗೆ ನೂರಾರು ಪ್ರಶ್ನೆಗಳು ಪಟಾಕಿಯಂತೆ ಚಟಪಟಗುಟ್ಟುತ್ತಿದ್ದವು. ಕೆಲ ಕೆಲವರನ್ನು, ಕೆಲ ಕೆಲವು ದೇಶದ ಬಗ್ಗೆ ಕೇಳು ತ್ತಿದ್ದರು. ಉತ್ತರಗಳೂ ಒಗ್ಗರಣೆಯ ಸಾಸಿವೆ ಯಂತೆ ಸಿಡಿಯುತ್ತಿದ್ದವು. ಸರಿಯಾದ ಉತ್ತರಕ್ಕೆ,

ಮೇಷ್ಟರಿಂದ 'ಹೂಂ' ಎಂಬ ಸ್ವರ ಮಾತ್ರ. ಹೆಚ್ಚಿನ ಮೆಚ್ಚುಗೆಯನ್ನು ನಾವು ಅರಿತಿರಲಿಲ್ಲ. ಅಷ್ಟೇ ನಮಗೆ ಸಾಕಾಗಿತ್ತು-ಬೀಸುವ ದೊಣ್ಣೆಯನ್ನು ತಪ್ಪಿಸಿಕೊಂಡವರ ಪರಿಹಾರವಾಗುತ್ತಿತ್ತು. ಒಳಗೊಳಗೇ ಹೆಮ್ಮೆ, ಉತ್ಸಾಹ.

''ಗಂಗಾನದಿ ಸಮುದ್ರವನ್ನು ಎಲ್ಲಿ ಸೇರುತ್ತದೆ?''

''ಬಂಗಾಳಕೊಲ್ಲಿಯಲ್ಲಿ.''

''ಹೂಂ, ಆಗ ಎಷ್ಟು ಮುಖ್ಯಶಾಖೆಗಳಾಗಿ ಒಡೆಯುತ್ತವೆ? ಅವುಗಳ ಹೆಸರೇನು?''

''ಅ...ಅ...'', ರಂಗಪ್ಪ ದೊಡ್ಡದಾಗಿ ಕಣ್ಣು ಬಿಟ್ಟು ತೊದಲಿದ. ಮೇಷ್ಟರು ಹೂಂಕರಿಸಿದರೂ ಉತ್ತರ ಹೊರಡಲಿಲ್ಲ.

''ರಜವಿತ್ತಲ್ಲ, ಮಧ್ಯಾಹ್ನವೆಲ್ಲ ಏನು ಮಾಡ್ತಾ ಇದ್ದೆ, ಚೆನ್ನಾಗಿ ಓದಿಕೊಳ್ಳದೆ?... ಹೇಳಿಕೊಟ್ಟಿರಲಿಲ್ಲವೆ?.... ಹಿಡಿ ಕೈ'', ಫೈಡ್! ರಂಗಪ್ಪನ ಅಂಗೈಯಿಗೆ ಬಿದ್ದಿತು ಬೆತ್ತ.

''ಸಾ!... ಸಾ!'' ರಂಗಪ್ಪ ಕೆಂಪಾದ ಕೈಯನ್ನು ಕೊಡಹಿಕೊಳ್ಳುತ್ತ ನೋವಿನಿಂದ ಮುಖವನ್ನು ಸೊಟ್ಟ ಮಾಡಿದ. ''ನೀನು!'', ಮೇಷ್ಟರು ವೆಂಕಟರಾಮುವಿನ ಕಡೆಗೆ ತಿರುಗಿದರು. ಉತ್ತರ ಬರಲಿಲ್ಲ. ''ಹಿಡಿ ಕೈ!'', ಫೈಡ್!

''ಸಾ... ಸಾ!''. ಈಗ ವೆಂಕಟರಾಮುವಿನ ಸರದಿ, ''ನೀನು!''. ಸೀನಪ್ಪ, ಸುಬ್ಬಾಶಾಸ್ತ್ರಿ ಇವರಿಗೂ ಆಯಿತು ಪೂಜೆ.

''ನೀನು!'', ಶಾಮಯ್ಯನ ಕಡೆಗೆ ತಿರುಗಿ ನೋಡಿದರು.

''ಗಂಗಾನದಿಯು ಹೂಗ್ಲಿ, ಭಾಗೀರಥಿ ಎಂಬ ಎರಡು ದೊಡ್ಡ ಶಾಖೆಗಳಾಗಿ ಒಡೆದು...''

''ಹೂಂ''

ಶಾಮಯ್ಯಂಗಾರಿ ಗೆದ್ದುಕೊಂಡ.

ಹೀಗೆ ಮುಕ್ಕಾಲು ಗಂಟೆ ನಡೆದು, ಕಡೆಗೆ ನಾವೆಲ್ಲರೂ ಆಸ್ಟ್ರೇಲಿಯಾ ಖಂಡದ ಭೂಪಟವನ್ನು ಬರೆದು ತೋರಿಸಿದ ಮೇಲೆ, ಭೂಗೋಳ ಪಾಠ ಕೊನೆಗೊಂಡಿತು.



ವ್ಯಾಕರಣ ಪಾಠದಲ್ಲೂ ಅದೇ ಚಟಪಟ. ಸಮಾರಾಧನೆಯ ಭೋಜನದಲ್ಲಿ ಮಧ್ಯೆ ಮಧ್ಯೆ ಫೈಡ್, ಫೈಡ್ ವ್ಯಂಜನ.

''ಅರಿ ಸಮಾಸವೆಂದರೇನು?''

ಮೇಷ್ಟರು ನನ್ನನ್ನು ಕೇಳುತ್ತಿದ್ದರೆಂದು ನನಗೆ ಮೊದಲು ಗೊತ್ತಾಗಲೇ ಇಲ್ಲ; ನಾನು ತಲೆಯನ್ನು ಕೆಳಗೆ ತಗ್ಗಿಸಿದ್ದರೂ, ದೃಷ್ಟಿಯನ್ನು ಆದಷ್ಟೂ ಮೇಲೆತ್ತಿ ದಿಡ್ಡಿಯ ಬಾಗಿಲಿನ ಕಡೆಗೆ ನೋಡುತ್ತಿದ್ದೆ; ಗಾಡಿಯ ಶಬ್ದಕ್ಕಾಗಿ ಕಿವಿಗೊಟ್ಟಿದ್ದೆ. ಆಗಾಗ ಮನೆಯ ಮುಂಬಾಗಿಲಿಗೆ ಬಂದು, ಬಂದು ಹೋಗುತ್ತಿದ್ದ ಗೌರಮ್ಮನವರ ಕಡೆಗೂ ನನ್ನ ಗಮನ ಒಮ್ಮೊಮ್ಮೆ ಹರಿಯುತ್ತಿತ್ತು. ಅವರಿಗೂ ನನ್ನಂತೆಯೇ ಆಗಿರಬೇಕು.

''ಎಲ್ಲಿದೆ ಜ್ಞಾನ ನಿನ್ನದು-ಪಾಠ ಬಿಟ್ಟು?'', ಮೇಷ್ಟರು ಬೆತ್ತ ಎತ್ತಿದರು.

''ಕರ್ಣಾಟಕ ಪದಕ್ಕೂ ಸಂಸ್ಕೃತ ಪದಕ್ಕೂ ಸಮಾಸವಾದಾಗ ಅದನ್ನು ಅರಿ ಸಮಾಸವೆನ್ನುವರು'', ತಟ್ಟನೆ ಹೇಗೋ ನನ್ನಿಂದ ಉತ್ತರ ಬಂದುಬಿಟ್ಟಿತು. ಕೂದಲೆಳೆಯಿಂದ ಗಂಡಾಂತರವನ್ನು ತಪ್ಪಿಸಿಕೊಂಡಿದ್ದೆ.

''ಉದಾಹರಣೆ?'' ಮೇಷ್ಟರು ಬಿಡಲಿಲ್ಲ.

''ಅ... ಅರಸು ಕುಮಾರಂ.''

''ಹೂಂ... ಅತ್ತಿತ್ತ ಗಮನ ಹರಿಸೀಯೆ ಹುಷಾರ್!''

ಈಗ ದೃಷ್ಟಿಯನ್ನೇನೋ ಮೇಷ್ಟರ ಮೇಲೆ ನೆಟ್ಟೆ. ಆದರೆ ಮನಸ್ಸು ಮಾತ್ರ ಶ್ರೀಕಂಠನ ಮೇಲೆಯೇ ಹಾರಾಡುತ್ತಿತ್ತು. 'ಅವನೇಕೆ ಇನ್ನೂ ಬರಲಿಲ್ಲ? ಏನಾಗಿರಬಹುದು... ಈಗ ಪಾಠಕ್ಕೆ ತಡವಾಗಿ, ಇಷ್ಟು ತಡವಾಗಿ ಬರುತ್ತಿರುವುದೇ ಮಹಾಪರಾಧ... ಆದರೆ ಅವನೇನು ಮಾಡು ತ್ತಾನೆ-ಗಾಡಿ ಹೊತ್ತಾದರೆ, ಹೇಗಿದ್ದರೂ ಮನೆ ಯಲ್ಲಿ ಕೇಳಿಕೊಂಡು ಹೋಗಿದ್ದಾನೆ. ಅದೇನು ಪರವಾಯಿಲ್ಲವೇನೋ ಹೇಗೋ... ಆದರೆ ಆ ಗೋಲಕದ ದುಡ್ಡು!'

ನನ್ನ ಮೈ ಜುಂ ಎಂದಿತು. ಇಂದು ನನಗೆ ಮೇಷ್ಟರು, ಎಂದಿಗಿಂತಲೂ ಬಹಳ ಕಠಿಣವಾಗಿ ಕಾಣುತ್ತಿದ್ದರು-ಅವರ ಕ್ರೂರ ನೋಟದಲ್ಲಿ, ಪ್ರಶ್ನೆಯ ಗಡಸು ಧ್ವನಿಯಲ್ಲಿ, ಬೆತ್ತವನ್ನೆತ್ತಿ ಬಾರಿ ಸುವುದರಲ್ಲೂ. ಅದು ನನ್ನ ಭ್ರಮೆ ಮಾತ್ರವಾಗಿ ದ್ದರೂ ಇರಬಹುದು. 'ಅಂತೂ ಈಗ ಅವನು ಬರದೆಯೇ ಇದ್ದರೆ ಚೆನ್ನವೋ; ಎಲ್ಲರ ಮುಂದೂ ಏನಾಗುತ್ತೋ; ಅವರ ಕೋಪ ಅಷ್ಟಿಷ್ಟಾದರೂ ಇಳಿದ ಮೇಲೆ...' ನನ್ನ ಯೋಚನೆಗೆ ಗಣಿತದ ಪಾಠ ಅಡ್ಡಿಬಂದಿತು.

ಮೇಷ್ಟರು ನಮ್ಮ 'ಹೋಂ ವರ್ಕ್'ಗಳನ್ನೆಲ್ಲ ನೋಡಿ, ತಮ್ಮ ಟೀಕೆ, ಟಿಪ್ಪಣಿಗಳನ್ನು ಮುಗಿಸುವಲ್ಲಿ ನಮಗೆ ಲೆಕ್ಕಗಳು ಇನ್ನಷ್ಟು ಚೆನ್ನಾಗಿ ಮನದಟ್ಟಾಯಿತು. ರಾಮಸೆಟ್ಟಿಯ 'ಲಾಭ-ನಷ್ಟ'ದ ಒಂದು ಲೆಕ್ಕ ಎಷ್ಟು ತಪ್ಪಾಗಿದ್ದಿತೆಂದರೆ ಅವನಿಗೆ ಏಟು ಬಿದ್ದದ್ದಷ್ಟೇ ಅಲ್ಲ, ಮೇಷ್ಟರು ಅವನಿಂದಲೇ ಅದನ್ನು ಸರಿಯಾಗಿ ಮಾಡಿಸಿ, ಅದನ್ನು ಇಪ್ಪತ್ತು ಸಾರೆ ಬರೆದು ತಂದು ಮಾರನೆಯ ದಿನ ತೋರಿಸಬೇಕೆಂದು 'ಇಂಪೊಸಿಷನ್' ಕೂಡ ಕೊಟ್ಟರು. ಇನ್ನು ಸೆಟ್ಟಿಗೆ ಜೀವನ ಪರ್ಯಂತ ನಷ್ಟವಾಗುವಂತಿರಲಿಲ್ಲ. ಹುಂ, ನಿನ್ನೆ 'ಕಾಲ-ಅಳತೆ' ಯನ್ನು ಹೇಳಿಕೊಟ್ಟಿದೀನಲ್ಲ, ಅದರ ಮೇಲೆ ಒಂದು ಲೆಕ್ಕ ಬರೆದುಕೊಳ್ಳಿ'', ಮೇಷ್ಟರು ಆ ಜೂಲು ಪುಸ್ತಕವನ್ನು ತೆರೆದು, ಬುಡ್ಡಿಯ ಬೆಳಕಿನ ಹತ್ತಿರ ಹಿಡಿದು ಓದುತ್ತಿದ್ದರು. ''ಆರು ಅಡಿ ಉದ್ದ, ನಾಲ್ಕು ಅಡಿ ಅಗಲ, ಮೂರು ಅಡಿ ಎತ್ತರದ ಒಂದು ತೊಟ್ಟಿಯಲ್ಲಿ ಮುಕ್ಕಾಲು ಅಡಿ ಎತ್ತರದಷ್ಟು ನೀರಿದೆ. ಆಗ ನಲ್ಲಿಯೊಂದರಿಂದ ನಿಮಿಷಕ್ಕೆ... ನಿಮಿಷಕ್ಕೇ... ಇಲ್ಲಿ ಸರಿಯಾಗಿ ಕಾಣ್ತಾ ಇಲ್ಲ, ಹರಿದು ಹೋಗಿದೆ. ಎಲ್ಲಿ ರಾಮ ಸೆಟ್ಟಿ, ನಿನ್ನ ಅಂಕಗಣಿತದಿಂದ ಓದಿ ಹೇಳು-ಪುಟ ಎಪ್ಪತ್ತೊಂಬತ್ತು, ಅಭ್ಯಾಸ ಹದಿನೇಳು, ಲೆಕ್ಕ ಮೂರು...''

ರಾಮಸೆಟ್ಟಿ, ಚನ್ನೇಗೌಡ ಮತ್ತು ನಾನು-ಇಷ್ಟ ರಲ್ಲಿ ಮಾತ್ರ ಅಂಕಗಣಿತದ ಪುಸ್ತಕವಿತ್ತು. ಇತರರು ಮೇಷ್ಟರ ನೋಟ್ಸನ್ನೇ ಅವಲಂಬಿಸಿ ಕೊಂಡಿದ್ದರು ಹಾಗೂ ನಮ್ಮ ಪುಸ್ತಕಗಳಿಂದ ಬೇಕಾದದ್ದನ್ನು ಬರೆದುಕೊಳ್ಳುತ್ತಿದ್ದರು. ರಾಮಸೆಟ್ಟಿ ಗಡಿಬಿಡಿಯಿಂದ ಹಾಳೆ ತಿರುವಿಹಾಕಿದ. ''...ನಿಮಿಷಕ್ಕೆ ಎರಡೂ ಕಾಲು ಗ್ಯಾಲನ್ ಪ್ರಕಾರ....'' ಎಂದು ಓದಿದ. ಮೇಷ್ಟರು ಅದನ್ನೇ ಹೇಳಿ ಬರೆಯಿಸಿದರು. ಅನಂತರ ''ತೊಟ್ಟಿಯ ತಳದಲ್ಲಿರುವ ತೂತೊಂದರಿಂದ ಗಂಟೆಗೆ... ಗಂಟೆಗೇ...'' ಎಂದು ಮತ್ತೆ ನಿಲ್ಲಿಸಿ ತಡವರಿಸಿದರು. ರಾಮಸೆಟ್ಟಿಯ ಸಹಾಯ ಮತ್ತೆ ಅಗತ್ಯವಾಯಿತು. ಲೆಕ್ಕವೇನೆಂದು ಗೊತ್ತಾಯಿ ತಲ್ಲ-ಅಂಥ ಸಂದರ್ಭದಲ್ಲಿ, ತೊಟ್ಟಿ ಇಷ್ಟೆತ್ತರ ತುಂಬುದಕ್ಕೆ ಎಷ್ಟು ನಿಮಿಷಗಳು ಬೇಕಾಗುತ್ತವೆ ಎಂದು. ನಾವು ಲೆಕ್ಕವನ್ನರಿತುಕೊಳ್ಳುವುದಕ್ಕೇ ಎಷ್ಟೋ ಹೊತ್ತು ತೆಗೆದುಕೊಂಡಾಗ ಮೇಷ್ಟರು ಎರಡು ನಿಮಿಷಗಳೊಳಗಾಗಿ ಅದನ್ನು ಬಾಯ ಲ್ಲಿಯೇ ಮಾಡಿ ವಿವರಿಸಿ, ಉತ್ತರವನ್ನೂ ಹೇಳಿ ಬಿಟ್ಟರು. ಬಾಕಿ ಎಂಟು ಲೆಕ್ಕಗಳನ್ನೂ ಮೇಷ್ಟರು, ರಾಮಸೆಟ್ಟಿಯ ಪುಸ್ತಕದಿಂದಲೇ ಓದಿ ಹೇಳಿ ದರು- ತಮ್ಮ ಪುಸ್ತಕವನ್ನು ಅತ್ತ ತೆಗೆದಿಟ್ಟು. ಅವನ್ನು ಹಾಗೆಯೇ ಬಾಯಲ್ಲಿ ಮಾಡಾದ ಮೇಲೆ ''ನಾಳೆ

ಇವನ್ನೆಲ್ಲ ಮಾಡಿಕೊಂಡು ಬಂದು ತೋರಿಸಿ'' ಎಂದು ಆಜ್ಞಾಪಿಸಿ ಮೇಲೆದ್ದರು. ನಾವೂ ಪಾಠ ಮುಗಿದ ಸಂಭ್ರಮದಿಂದ ಪುಸ್ತಕಗಳನ್ನು ಜೋಡಿಸಿಕೊಳ್ಳುತ್ತಿದ್ದೆವು.

ಆಗ ಕೇಳಿಸಿತು- ಆ ಪರಿಚಿತ ಜೋಡೆತ್ತಿನ ಕಂಠ ಘಂಟಾನಾದ! ಕಾಳನಿಂಗೇಗೌಡನ ಗಾಡಿ ಬರುತ್ತಿತ್ತು. ದಿಡ್ಡಿ ಬಾಗಿಲನ್ನು ದಾಟಿ, ಮೇಷ್ಟರ ಮನೆಯ ಮುಂದೇ ಹಾಯುತ್ತಿತ್ತು.

''ಯಾಕಪ್ಪಾ, ಇಷ್ಟು ಹೊತ್ತೂ?'', ಗೌರಮ್ಮನವರು ಆತಂಕದಿಂದ ಗಾಡಿಯ ಕಡೆಗೆ ಕೂಗಿದರು. ಅವರಿಗೆ ಎರಡು ಚಿಂತೆಗಳಿರಬೇಕು- ಮಗ ಹೊತ್ತಾಗಿ ಬಂದದ್ದು ಒಂದು, ಪಾಠ ತಪ್ಪಿದರ ಪರಿಣಾಮವೇನೆಂಬುದು ಇನ್ನೊಂದು.

''ಮಂಡೇದಿಂದ ಹೊಂಟಾಗ ಎಡೆತ್ತಿನ ಕಾಲು ವಸಿ ಕುಂಟಾಗಿ, ಹೊತ್ತಾತವ್ವ'', ಗಾಡಿಯ ನಿಂಗಯ್ಯ ಹೇಳಿ ಎತ್ತಿನ ಹಗ್ಗವನ್ನೆಳೆದು ಗಾಡಿಯನ್ನು ನಿಲ್ಲಿಸಿದ.

ಕೂಡಲೇ ಅದರೊಳಗಿಂದ ಶ್ರೀಕಂಠ ನೆಲಕ್ಕೆ ನೆಗೆದು, ಜಿಂಕೆಯಂತೆ ಚಿಮ್ಮುತ್ತ, ಓಡೋಡಿ ಬಂದ. ಮನೆ ಕಡೆಗೆ ತಿರುಗುತ್ತಿದ್ದ ಮೇಷ್ಟರು ಹಾಗೆಯೇ ನಿಂತರು. ಅವರ ಮುಖದ ರೌದ್ರ ಮುದ್ರೆಯನ್ನು ನೋಡಿ ನನ್ನ ಎದೆ ಡವಡವ ಗುಟ್ಟಿತು. ಓಡೋಡಿ ಬಂದ ಮಗ, ತಂದೆಯ ಮುಂದೆ ಹಾಯ್ದು ಮನೆಗೆ ಹೋಗುವುದರಲ್ಲಿದ್ದ.

''ನಿಲ್ಲೋ! ಎಲ್ಲಿ ಹೋಗ್ತೀಯೋ!'', ಮೇಷ್ಟರು ಆರ್ಭಟಿಸಿದರು.

ಮಗ ಮುಗ್ಗರಿಸಿ ಗಕ್ಕನೆ ನಿಂತ-ಕೈಕಟ್ಟಿ ಮೇಷ್ಟರ ಮುಂದೆ. ಅವರ ಮುಖವನ್ನು ನೋಡಿ ಅವನಿಗೆ ಗಾಬರಿಯಾಗಿರಬೇಕು. ಕಾಲುಗಳು ನಡುಗಲಾರಂಭಿಸಿದವು. ಗೌರಮ್ಮನವರು, ಹುಡುಗರು ನಾವೆಲ್ಲ ಶಿಲ್ಪಗಳಂತಾಗಿದ್ದೆವು.

''ಅಲ್ಲಾ ಕಣೋ ಭಡವಾ!... ಆ... ಆ...'', ಮೇಷ್ಟರಿಗೆ ಕೋಪದಲ್ಲಿ ಮಾತು ಹೊರಡುವುದು ತಡೆಯುತ್ತಿತ್ತು.

''ಆ.... ಗೋಲ್ಕದ ದುಡ್ಡು... ಕದ್ದೂ...''

''ಇ...ಇ...'', ಭಯಾನ್ವಿತನಾದ ಶ್ರೀಕಂಠನಿಗೆ ಮಾತು ಹೇಗೆ ಹೊರಡಬೇಕು? ಅಷ್ಟಕ್ಕೇ ನಿಂತಿತು. ತುಟಿಗಳು ಸದ್ದಿಲ್ಲದೆ ಚಲಿಸುತ್ತಿದ್ದವು.

''ಹ್ಞೂಂ, ಕದ್ದೂ... ಏನು ಮಾಡಿದೆಯೋ ಅದನ್ನಾ?''

ಕನಸಿನಲ್ಲಿ ದೆವ್ವವನ್ನು ಕಂಡಂತಾಗಿದ್ದ ಹುಡುಗನಿಗೆ ತೊದಲಲೂ ಆಗಲಿಲ್ಲ. ನಡುಗುವ ತುಟಿ, ಬೆವರಿದ ಹಣೆ, ಬಿರಿದ ಕಣ್ಣು.

''ಬೊಗಳೋ!...'' ಫೈಡ್! ಬೆತ್ತ ಬಿದ್ದಿತು, ಜೋರಾಗಿ, ಬೆನ್ನಿನ ಮೇಲೆ. ಫೈಡ್! ಇನ್ನೊಂದೇಟು. ಫೈಡ್! ಫೈಡ್! ಮತ್ತೊಂದು, ಮಗದೊಂದು, ಏಟುಗಳು ಬೀಳುತ್ತಿದ್ದವು ಬಾಲಕನ ಮೇಲೆ.

''ಇ....ಇಲ್ಲಾ...''

''ಏನಿಲ್ಲವೋ? ಕದಿಯಲಿಲ್ಲವೇನೋ? ದುಡ್ಡು ನಿನ್ನದಾದರೇನು?... ನಮಗೆ ತಿಳಿಯದ ಹಾಗೆ... ಗುಟ್ಟಾಗಿ... ಮೋಸದಿಂದ ಮಾಡಿದೀಯೆ... ಆ !... ನನ್ನ ಶಿಷ್ಯನಾಗಿ!....'' ''ಸಾರ್ ಸಾರ್.... ಅಪ್ಪಾ!'', ಹುಡುಗನಿಗೆ ಬೇರೇನನ್ನೂ ಹೇಳಲು ಬಾಯಿ ಬರಲೇ ಇಲ್ಲ.

ಮೇಷ್ಟರು ಬೆತ್ತದಿಂದ ಬಾರಿಸುವ ದೃಶ್ಯ ನಮಗೇನು ಹೊಸದಾಗಿರಲಿಲ್ಲ. ನಾವು ಯಾರೂ, ಏನನ್ನೂ ಮಾಡುವಂತಿರಲಿಲ್ಲ, ಅವರನ್ನು ತಡೆಯು ವುದಕ್ಕೆ. ನನಗೆ ಒಳಗೊಳಗೇ ಚಳಿ ಬಂದು ಬಿಟ್ಟಿತ್ತು; ಒಂದೊಂದು ಏಟು ಬಿದ್ದಾಗಲೂ ಬೆಚ್ಚುತ್ತಿದ್ದೆನಷ್ಟೆ. ಇತರ ಹುಡುಗರಿಗೂ ಹಾಗೆಯೇ ಆಗಿರಬೇಕು. ಮೇಷ್ಟರಿಗೆ ಹೇಳಬಹುದಾದವರು ಒಬ್ಬರೆಂದರೆ, ಗೌರಮ್ಮನವರು. ಆದರೆ ಅವರು ಪತಿಯ ಎದುರು ನಿಂತವರೇ ಅಲ್ಲ, ಆಡಿದವರೂ ಅಲ್ಲ; ಅದೇ ಅವರ ಸಂಪ್ರದಾಯ. ಈಗ ಮೂಕ ಯಾತನೆಯನ್ನು ಮಗನಷ್ಟೇ, ಅದಕ್ಕಿಂತ ಹೆಚ್ಚಾಗಿಯೇ ಅನುಭವಿಸುತ್ತಿದ್ದರೇನೋ, ಪಾಪ!

"ಏನು ತಗೊಂಡೆಯೋ-ಆ ದುಡ್ಡನ್ನೆಲ್ಲ ಉಡಾಯಿಸಿ?.... ಬೊಗಳೋ... ಬೇಗ..."

"ಅ...ಅ...", ಅವನಿಂದ ಹೊರಟ ಸ್ವರವಷ್ಟೆ-ಮೇಷ್ಟರ ಗರ್ಜನೆ ಏಟುಗಳ ಮಧ್ಯೆ.

"ಏನು ಅ ಅ? ನಿನ್ನ ತಲೆ? ಹೇಳೋ ದಕ್ಕಾಗದಂಥಾದ್ದರ ಮೇಲೆ ಹಾಕಿದ್ದೀಯಾ-ಹಾಳುಮೂಳಿಗೆ! ಅಪಾಪೋಲಿ ವಿದ್ಯೆ ಕಲೀತಾ ಇದೀಯಾ, ಚಂಡಾಲಾ!", ಈವರೆಗೆ ಬೆನ್ನಿನ ಮೇಲೆ ಬಿಗಿಯುತ್ತಿದ್ದವರು, ಈಗ ಕಟ್ಟಿದ್ದ ಕೈಗಳೆರಡಕ್ಕೂ ಬಲವಾಗಿ ಪೆಟ್ಟು ಕೊಟ್ಟರು.

ಈ ಏಟಿಗೆ ಶ್ರೀಕಂಠನ ಕಟ್ಟಿನ ಕೈಗಳು ಬಿಚ್ಚಿಕೊಂಡು ಸಡಿಲವಾಗಿ, ಕೆಳಗಿಳಿದು ಬಿದ್ದು, ನೋವಿನಿಂದ ಒದರಿಕೊಂಡವು. ಅದೇ ಸಮಯ ದಲ್ಲಿ, ಅವನ ಷರಟಿನೊಳಗಿನಿಂದ, ಅವನು ಈವರೆಗೆ ತನಗೇ ತಿಳಿಯದಂತೆ ಬಿಗಿಯಾಗಿ ಅವುಚಿ ಹಿಡಿದಿದ್ದ ಕೆಂಪು ರಟ್ಟಿನ ಪುಸ್ತಕವೊಂದು ನೆಲಕ್ಕೆ ಬಿದ್ದಿತು-ಅಂಕಗಣಿತ! ಮೇಷ್ಟರ ಬುಸು ಬುಸುಗುಟ್ಟುವ ಉಸಿರು ಮೆತ್ತಗಾಯಿತು; ಎತ್ತಿದ್ದ ಬೆತ್ತ ಎತ್ತರದಲ್ಲೇ ನಿಂತಿತು, ದೃಷ್ಟಿ ಮಗನಿಂದ ಪುಸ್ತಕದ ಕಡೆಗೆ ಹೋಯಿತು.

"ಇದು ಯಾಕೋ ನಿಂಗೆ ಈ ಪುಸ್ತಕ?... ನನ್ನದು ಇರಲಿಲ್ಲವೆ?... ನಾನು ಬರೆಸುತ್ತಲೂ ಇರಲಿಲ್ಲವೆ?", ಮೇಷ್ಟರ ಉದ್ರೇಕ ಆರಿಹೋಗಿರ ಲಿಲ್ಲ, ಅರ್ಧವಾಗಿತ್ತು ಅನ್ನಬಹುದು. ಮಾತೂ ತನ್ನ ಕಾಠಿಣ್ಯವಷ್ಟನ್ನು ಕಳೆದುಕೊಂಡಿತ್ತು.

"ಏನೊ?"

"ನಂಗಲ್ಲ-ಅಪ್ಪಾ-ಸಾರ್!", ಏಟುಗಳು ನಿಂತಿದ್ದು, ಹುಡುಗನ ಗಾಬರಿ ಕಡಿಮೆಯಾಗಿ, ಮಾತು ಹೊರ ಟಿತು-ಅಳುವಿನಿಂದ ಸೊಟ್ಟವಾದ ಮುಖದಿಂದ.

"ಅ!... ನಿಂಗಲ್ಲ! ಮತ್ತೆ...?"

"ನಿಂಗೆ...ನಿಮಗೆ... ನಿಮಗೇಂತ."

"ನಂಗೆ!...ನಂಗೇ?....", ಕ್ಷಣಕಾಲ ಈಗ ಮೇಷ್ಟರಿಗೆ ಮುಂದಿನ ಮಾತು ಹೊರಡಲಿಲ್ಲ. "ನಂಗೆ ಯಾಕೆ? ಹೇಳಿದ್ದೆನೆ ತಾ ಅಂತ?"



**ಅಶ್ವತ್ಥ**

ಮಾಸ್ತಿ ಪರಂಪರೆಯ ಕತೆಗಾರ ಅಶ್ವತ್ಥ, ತಮ್ಮ ವಿಶಿಷ್ಟ ಶೈಲಿಯ ಕತೆಗಳಿಗಾಗಿ ಹೆಸರಾದವರು. ಆಪ್ತಶೈಲಿಯಲ್ಲಿ, ವಿಸ್ತೃತವಾಗಿ, ಪ್ರಸಂಗ-ಪ್ರಕರಣ ಗಳನ್ನು ಹೇಳುವ ಧಾಟಿಯಲ್ಲಿ ಬೆಳೆಯುವ ಅವರ ಕತೆಗಳಲ್ಲಿ ಋಜುತ್ವ, ಮೌಲ್ಯಪ್ರಜ್ಞೆ, ಬಡತನದಲ್ಲಿ ಹುದುಗಿರುವ ಹೃದಯ ಶ್ರೀಮಂತಿಕೆಗಳು ಅಂತರ್ಗಾಮಿಯಾಗಿರು ತ್ತವೆ. 'ಓದಿಗೂ ಒದೆಗೂ/ನಡೆವಳಿಕೆಗೂ ಖಂಡಿತಾ ಸಂಬಂಧವಿದೆ' ಎಂದು ನಂಬಿದ್ದ ಕಾಲದಲ್ಲಿ, ಶಿಸ್ತಿನ ಸಿಪಾಯಿಯಾದ ಶಾಲಾ ಮಾಸ್ತರರೊಬ್ಬರು ತಮ್ಮ ಮಗನನ್ನು ತಪ್ಪು ತಿಳಿದುಕೊಂಡು ಥಳಿಸಿ, ನಂತರ ಪಶ್ಚಾತ್ತಾಪ ಪಡುವ ಮಾರ್ಮಿಕ ಚಿತ್ರಣವೇ 'ಬೆತ್ತಮುರಿ ಯಿತು'ನ ಕಥಾವಸ್ತು. 'ಮಿರಿಮಿರಿ' ಮಿಂಚುವ, 'ಇಂದ್ರಾಯುಧ'ದಂತೆ ಝಳಪಿಸುವ, ಅವರ 'ಕುಪ್ರಸಿದ್ಧ' ಬೆತ್ತದೇಟಿನ ರುಚಿ ತಿಂದೂ, ಮಕ್ಕಳು ಮೇಷ್ಟ್ರ ಮೇಲಿಟ್ಟಿದ್ದ ಅಸಾಧಾರಣ ಗೌರವ, ಪ್ರೀತಿ ಕತೆಯ ಶಿಲ್ಪದಲ್ಲೇ ಹೊರ ಸೂಸುವುದನ್ನು ಗಮನಿಸಬಹುದು.

''ಇ-ಲ್ಲ.... ಅಷ್ಟೊಂದು... ಹರಿದು... ಹೋಗಿತ್ತು... ಅಂತ'', ಮಗ ಉಗ್ಗುತ್ತಿದ್ದ, ಅಳು ಏದುಸಿರುಗಳ ಮಧ್ಯೆ ಮಧ್ಯೆ. ''ನಿಮಗೆ... ಅಂಕಿ-ಕಾಣ್ತಾ-ಇರಲಿಲ್ಲಾ-ಅಂತ-... ಓದೋಕೆ- ತಡವರಿಸ್ತಾ-ಇದ್ರಲ್ಲ ಅಂತ.''

ಮೂಕ ಮೇಷ್ಟರ ಕೈ ಕೆಳಗಿಳಿದು, ಬೆತ್ತ ತಾನಾಗಿ ಜಾರಿ ಬಿದ್ದಿತು.

''ನಂಗೆ ಯಾಕೆ ಹೇಳಿ ಹೋಗಲಿಲ್ಲವೋ'', ಮೇಷ್ಟರು ಈಗ ಅಬ್ಬರಿಸಲಿಲ್ಲ. ಅದು ಪ್ರಶ್ನೆಯೂ ಆಗಿರಲಿಲ್ಲ. ನೋವಿನ ಕೂಗಾಗಿತ್ತು. ಅವರ ಬಲಗೈ ಹಣೆಗೆ ಹೋಯಿತು.

''ಗುಟ್ಟಾಗಿದ್ರೆ-ಚೆನ್ನಾಗಿರುತ್ತೆ-ಹಬ್ಬಕ್ಕೆ ಅಂತ... ಹೀಗೆ...''

''ಹಬ್ಬಕ್ಕೇ? ಏನು, ಉಡುಗೊರೆಯೇ ನಂಗೆ? ಅದಕ್ಕೆ ಹೀಗೆ ಗುಟ್ಟಾಗಿ ಮಾಡಿದೆಯಾ ಎಲ್ಲ?'', ಮೇಷ್ಟರು ಮಗನ ಮಾತು, ತಲೆದೂಗುಗಳನ್ನು ಅರ್ಥಮಾಡಿಕೊಳ್ಳುತ್ತ ಕ್ಷಣ ಕಾಲ ಮೌನವಾಗಿದ್ದರು. ''ಅಲ್ಲಾ, ಕೇಳಿದಾಗಲಾದರೂ ಹೇಳೋದಕ್ಕಿಲ್ಲವೇನೋ... ಅನ್ಯಾಯವಾಗಿ ಅಷ್ಟೊಂದು ಏಟು ತಿಂದೆಯಲ್ಲೋ-ಅಪ್ಪಾ!'' 'ಅಪ್ಪಾ' ಎಂಬ ಮಾತು ಅವರ ಬಾಯಿಂದ ಬಂದದ್ದನ್ನು ಕೇಳಿದ್ದು ಆಗಲೇ...''

''ಹೆದರಿಕೇಲಿ....ಮಾತು....''

'ಉಹ್ಲೊ!'', ಮೇಷ್ಟರು ದೀರ್ಘವಾಗಿ ನಿಟ್ಟುಸಿರುಬಿಟ್ಟರು. ''ಚಂಡಾಲ ಕೋಪ... ಚಂಡಾಲ...'', ಹಲ್ಲು ಕಚ್ಚಿ ತಮ್ಮಷ್ಟಕ್ಕೆ ತಾವೇ ಕೆಳ ಧ್ವನಿಯಲ್ಲಿ ಹೇಳಿಕೊಂಡರು. ಸ್ವಲ್ಪ ಹೊತ್ತು ಸುಮ್ಮನಾಗಿ ಯೋಚಿಸುತ್ತಿದ್ದರು.

ಈಗ, ತಾಯಿ ಮಾತಾಡದೆ ಮುಂದೆ ಬಂದು, ಮಗನನ್ನು ಕರೆದುಕೊಂಡು ಹೋದರು, ಅವನ ಬೆನ್ನಿನ ಮೇಲೆ ಕೈಯಾಡಿಸುತ್ತ.

ಮೇಷ್ಟರು ಮೆಲ್ಲನೆ ಬಗ್ಗಿ, ಅಲ್ಲಿ ಬಿದ್ದಿದ್ದ ಮಗನ ಉಡುಗೊರೆ ಪುಸ್ತಕವನ್ನು ಎಡಗೈಯಿಂದ ಎತ್ತಿಕೊಂಡು ನೋಡಿದರು, ನೋಡುತ್ತಿದ್ದರು. ಹಾಗೇ ಇನ್ನೊಮ್ಮೆ ಬಗ್ಗಿ, ಅಲ್ಲಿಯೇ ಬಿದ್ದಿದ್ದ ಬೆತ್ತವನ್ನು ಬಲಗೈಯಿಂದ ತೆಗೆದುಕೊಂಡರು; ಯೋಚಿಸಿದರು; ಯೋಚಿಸುತ್ತಲೇ ಒಂದು ಕೊನೆ ನೆಲದ ಮೇಲಿರುವ ಓರೆಯಾಗಿ ಅದನ್ನು ಹಿಡಿದು, ಅಂಗಾಲಿನಿಂದ ನಿಧಾನವಾಗಿ, ಆದರೆ ಬಲವಾಗಿ ತುಳಿದುಬಿಟ್ಟರು. ಆ ಪ್ರಸಿದ್ಧ ಬೆತ್ತ 'ಫಟ್' ಎಂದು ಒಡೆದು, 'ನರನರ' ಎಂದು ಮುರಿದುಹೋಯಿತು. ಮೇಷ್ಟರು ಅದನ್ನು ಅತ್ತ ದೂರಕ್ಕೆ ಎಸೆದು, ಪುಸ್ತಕವನ್ನು ನಾವೆಲ್ಲ ಮಾಡುವಂತೆ ಎಡಗೈಯಿಂದ ಎದೆಗವುಚಿಕೊಂಡು, ನಮ್ಮ ಕಡೆ ನೋಡದೆಯೇ ಮನೆಯೊಳಕ್ಕೆ ಹೊರಟು ಹೋದರು.

ನಾವು ಗುಂಪುಗೂಡಿ, ಮೌನವಾಗಿ ಅಷ್ಟು ದೂರ ಸಾಗಿದೆವು. ಅನಂತರ ಆ 'ಬೆತ್ತ ಮುರಿದ ಪ್ರಕರಣ' ನಮ್ಮಲ್ಲಿ ಕೋಲಾಹಲವನ್ನೆಬ್ಬಿಸಿತು. ಅದರ ನೆನಪು ನನ್ನಲ್ಲಿ ಈಗಲೂ ಅಚ್ಚಳಿಯದೆ ಉಳಿದಿದೆ.

(ಅಶ್ವತ್ಥರ ಅಪ್ರಕಟಿತ ಕತೆಗಳು (1996) ಸಂಕಲನದಿಂದ)







ಎಂ. ಎಸ್. ಶ್ರೀರಾಮ್

# ಹೋಗುವುದೆಲ್ಲಿಗೆ

ಪೊಲೀಸ್ ಠಾಣೆಯಲ್ಲಿ ಕಂಡ ಆ ಮಗು ವಿಶುವನ್ನು ಸಂಪೂರ್ಣವಾಗಿ ಆವರಿಸಿಬಿಟ್ಟಿತ್ತು. ತಕ್ಷಣಕ್ಕೆ ಅದು ಹೆಣ್ಣೋ ಗಂಡೋ ತಿಳಿಯಲಿಲ್ಲವಾದರೂ, ಸಮಯ ಸರಿದಂತೆ, ಈ ರೌದ್ರ ವಾತಾವರಣ ಉದ್ಭವವಾದದ್ದೇ ಅದು ಹೆಣ್ಣಾಗಿದ್ದರಿಂದ ಎಂದು ನಂತರ ತಿಳಿಯಿತು. ಜೀವನ ವಿಶು ಅಂದುಕೊಂಡಷ್ಟು ಸರಳವಾಗಿದ್ದಿದ್ದರೆ, ಈ ಎಲ್ಲಕ್ಕೂ ತನ್ನ ಬಳಿ ತತ್‌ಕ್ಷಣ ಒದಗಿಸಬಹುದಾದ ದಿಢೀರ್ ಉತ್ತರಗಳಿದ್ದುವು. ಆದರೆ ದುರಾದೃಷ್ಟವಶಾತ್ ಜೀವನ ಅಷ್ಟು ಸರಳವಾಗಿರಲಿಲ್ಲ. ಒಂದು ವಿಧವಾಗಿ ಅದೂ ಒಳ್ಳೆಯದೇ ಅನ್ನಿ. ಹೀಗೆ ದಿಢೀರ್ ನಿರ್ಧಾರಗಳನ್ನು ಕೈಗೊಂಡು, ಆರಾಮವಾಗಿ ಆ ಬಗ್ಗೆ ಪಶ್ಚಾತ್ತಾಪ ಪಡುವ ಪ್ರಕ್ರಿಯೆಯನ್ನಾದರೂ ತಪ್ಪಿಸಬಹುದು.

ಸುಮಾರು ಎರಡು ಮೂರು ವರ್ಷಗಳಿಂದ ಈ ವಿಚಾರ ಅವರ ತಲೆಯಲ್ಲಿ ಸುಳಿದಾಡುತ್ತಿತ್ತು. ಮದುವೆಯಾಗಿ ಆರೇಳು ವರ್ಷಗಳು ಕಳೆದರೂ ನಯನಾ ಬಸುರಾಗದೇ ಇದ್ದಾಗ, ಎಷ್ಟೋ ಬಾರಿ, ಈ ಬಗ್ಗೆ ಅವರುಗಳು ಆಲೋಚಿಸಿದ್ದುಂಟು. ಮೊದಮೊದಲಿಗೆ ಅವರುಗಳು ಮಗುವೇ ಬೇಡವೆಂದು ಅಂದುಕೊಂಡದ್ದು ನಿಜ. ನಂತರ ಯಾಕೋ ಆಗಲಿಲ್ಲ. ಬಹಳಷ್ಟು ಮಂದಿ ಡಾಕ್ಟರ ಬಳಿ ತೋರಿಸಿಕೊಳ್ಳಿ ಎಂದು ಉಚಿತ ಸಲಹೆ ಕೊಟ್ಟರಾದರೂ ಇವರುಗಳು ಅದನ್ನು ಕಿವಿಗೆ

ಸೃಜನ್

ಹಾಕಿಕೊಳ್ಳಲಿಲ್ಲ. ಎಷ್ಟೋ ಅನಾಥ ಮಕ್ಕಳು ಬೀದಿ ಬೀದಿ ಸುತ್ತುತ್ತಿರುವಾಗ ಅವುಗಳಲ್ಲಿ ಒಂದನ್ನು ತಮ್ಮದಾಗಿಸಿಕೊಳ್ಳುವ ವಿಚಾರವಿದ್ದದ್ದ ರಿಂದ ಅವರು ಹೀಗೆ ಮಾಡಿರಲಿಕ್ಕೂ ಸಾಕು. ಆದರೆ ಈಗ ಇಬ್ಬರೂ ನಲವತ್ತರ ಹೊಸ್ತಿಲಲ್ಲಿ ನಿಂತಿದ್ದರಿಂದ, ಇಬ್ಬರೂ ಚರ್ಚಿಸುತ್ತಿದ್ದರಾದರೂ ಈ ಬಗ್ಗೆ ಯಾವೊಂದು ನಿಲುವನ್ನು ತೆಗೆದು ಕೊಳ್ಳುವ ಧೈರ್ಯವನ್ನು ಮಾತ್ರ ಇಬ್ಬರೂ ಮಾಡಿರಲಿಲ್ಲ. ಇದಕ್ಕೆ ಕಾರಣವಿಲ್ಲದಿರಲಿಲ್ಲ. ಯಾಕೆಂದರೆ, ಯಾವುದಾದರೊಂದು ನಿರ್ಧಾರ ತೆಗೆದುಕೊಂಡ ಮರುಕ್ಷಣವೇ, ಅನುಮಾನ ವೆಂಬ ಪಿಶಾಚಿ ಅವರಿಬ್ಬರನ್ನೂ ಆವರಿಸಿ, ಕಬಳಿಸಿಬಿಡುತ್ತಿತ್ತು.

ಬಹುಶಃ, ಅವರಿಬ್ಬರಿಗೆ ಇಬ್ಬರೇ ಇದ್ದು ಅಭ್ಯಾಸವಾದದ್ದರಿಂದ, ಬೇರೊಂದು ಜೀವ, ಈ ಹಂತದಲ್ಲಿ ತಮ್ಮ ನಡುವೆ ಸೇರಿಕೊಳ್ಳುವುದು ಸ್ವಲ್ಪ ಕಷ್ಟವೆನ್ನಿಸಿರಬಹುದು. ಆಗ ಜೀವನದ ಗತಿಯೇ ಬದಲಾಗಿ ಬಿಡುತ್ತಿತ್ತಲ್ಲ? ಆದರೆ, ಮಗು ಎಷ್ಟಾದರೂ ಮಗು ತಾನೇ ಎಂಬಂಥ ವಿಚಾರ ಬಂದು, ಯಾವ ನಿರ್ಧಾರಕ್ಕೂ ಬರಲಾರದೇ ಇಬ್ಬರೂ ಒದ್ದಾಡಿಹೋಗಿದ್ದರು. ಈಗ, ಸ್ಟೇಷ ನ್ನಿನಲ್ಲಿ ಈ ಮುದ್ದಾದ ಮಗುವನ್ನು ಕಂಡಾಗ, ವಿಶುವಿಗೆ ತಡೆಯಲಾಗಲಿಲ್ಲ. ಜಗತ್ತಿನರಿವು ಇಲ್ಲದೇ, ತನ್ನ ಭವಿಷ್ಯದ ಬಗ್ಗೆ ಏನೊಂದೂ ಕಾಳಜಿಯಿಲ್ಲದೇ, ಹಾಯಾಗಿ ಮಲಗಿದ್ದ ಈ ಮಗುವನ್ನ ಕಂಡರೆ ಯಾರಿಗಾದರೂ ಎತ್ತಿ ಕೊಳ್ಳಬೇಕೆನ್ನಿಸುವುದು ಸಹಜ. ವಿಶುವಿಗೂ, ಹುಟ್ಟಿ ಒಂದೆರಡೇ ದಿನಗಳಾಗಿದ್ದ ಈ ಪುಟ್ಟ ಮಗುವನ್ನು ತನ್ನ ಕೈತುಂಬಾ ತುಂಬಿಸಿಕೊಳ್ಳ ಬೇಕೆನ್ನಿಸಿದ್ದು ಸಹಜವೇ ಆಗಿತ್ತು. ಆದರೆ ಈಗ ಠಾಣೆಯಲ್ಲಿ ಮಾತನಾಡುವ ಧೈರ್ಯ ವಿಶುವಿಗೆ ಬರಲಿಲ್ಲ. ಎಷ್ಟಾದರೂ ತನ್ನ ಪಾತ್ರ ಅಲ್ಲಿನ ಆಗುಹೋಗುಗಳನ್ನು ನೋಡುವುದಕ್ಕಷ್ಟೇ ಸೀಮಿತವಾಗಿತ್ತು.



ಠಾಣೆಯ ವಾತಾವರಣ ಉಸಿರುಗಟ್ಟಿಸು ತ್ತಿತ್ತು. ಅಲ್ಲಿ ಬೆಳಕು ತೀರಾ ಮಂದವಾಗಿತ್ತು ಹಾಗೂ ಭಯದ ವಾತಾವರಣ ಇಡೀ ಜಾಗವನ್ನ ಆಕ್ರಮಿಸಿಬಿಟ್ಟಿತ್ತು. ಬಹುಶಃ ಪೊಲೀಸು ವರ್ದಿಯ ಶಕ್ತಿ ವಿಶುವನ್ನು ಕುಗ್ಗಿಸಿರಲಿಕ್ಕೆ ಸಾಕು. ಮನೆಯಲ್ಲಿ ಕಳ್ಳತನ ಆಗಿ, ಠಾಣೆಗೆ ಪ್ರತಿವಾರ, ತಾನು ಎಡೆಬಿಡದೆ ಬರಲು ಪ್ರಾರಂಭಿಸಿದಾಗಿನಿಂದಲೂ ವಿಶುವಿಗೆ ಈ ಅನುಭವವಾಗಿತ್ತು. ವಿಶು ಮತ್ತು ನಯನಾ ಇಬ್ಬರೂ ಕೆಲಸ ಮಾಡುತ್ತಿದ್ದ ರಾದ್ದರಿಂದ ಮನೆಗೆ ಯಾವಾಗಲೂ ಬೀಗವೇ ಭೂಷಣವಾಗಿ ಇರುತ್ತಿತ್ತು. ಆದರೆ, ಆಶ್ಚರ್ಯ ವಶಾತ್, ಕಳ್ಳತನ ಭಾನುವಾರದಂದು, ತಾವಿ ಬ್ಬರೂ ಬಂಧುಗಳ ಮನೆಯ ಮದುವೆಗೆಂದು ಹೋಗಿದ್ದಾಗ ಆಯಿತು! ಅವರುಗಳು ಮನೆಗೆ ಬಂದು ನೋಡಿದಾಗ, ಬೀಗವೇ ಕಾಣಲಿಲ್ಲ. ಒಳಬಂದು ನೋಡಿದರೆ, ಮನೆಯ ಟಿವಿ, ವಿಸಿಆರ್, ಮತ್ತು ಮ್ಯೂಸಿಕ್ ಸಿಸ್ಟಂ ಜತೆಗೆ ಹಲವು ಸೀಡಿಗಳು, ಕೆಸೆಟ್ಟುಗಳು-ಎಲ್ಲವೂ ಕಳುವಾಗಿತ್ತು. ಅದನ್ನು ಕಂಡು ಇಬ್ಬರಿಗೂ ಆಘಾತವಾದದ್ದು ನಿಜ.

ವಾರಾವಾರ ಬರುತ್ತಿದ್ದುದರಿಂದ ಠಾಣೆಯ ಪರಿಸರ ವಿಶುವಿಗೆ ಹೊಸತಾಗಿರಲಿಲ್ಲವಾದರೂ, ಪ್ರತಿಬಾರಿಯೂ ವಿಶುವಿಗೆ ಹೊಸ ಅನುಭವ ವಂತೂ ಆಗುತ್ತಿತ್ತು. ಈ ವಾರ, ವಿಶು ಸ್ಟೇಷನ್ ಪ್ರವೇಶಿಸುತ್ತಿದ್ದಂತೆ, ಅಲ್ಲಿ ಈ ಮಗುವಿನ ವಿಷಯ ವಾಗಿ ಜೋರಾಗಿ ವಾದವಿವಾದ ನಡೆಯು ತ್ತಿದ್ದುದನ್ನು ಕಂಡ. ಅಲ್ಲಿನ ಮಂದ ಬೆಳಕಿಗೆ ಹೊಂದಿಕೊಳ್ಳುವುದಕ್ಕೆ ಸ್ವಲ್ಪ ಸಮಯ ಹಿಡಿ ಯುವಂತೆ, ಮಾತುಕತೆಯ ವಾತಾವರಣಕ್ಕೆ ಹೊಂದಿಕೊಳ್ಳುವುದಕ್ಕೂ ವಿಶುವಿಗೆ ಸಮಯ ಹಿಡಿಯಿತು. ಕಂಗಳು, ಬೆಳಕಿಗೆ ಹೊಂದಿ ಕೊಳ್ಳುತ್ತಿದ್ದಂತೆ, ದುಪ್ಪಟಿಯ ಮೇಲೆ ಮಲಗಿಸಿದ್ದ ಪುಟ್ಟ ಮಗುವನ್ನು ಅವನು ಕಂಡ. ಠಾಣೆದಾರನ ಸುತ್ತಮುತ್ತ ಕೆಲ ಜನ ನಿಂತಿರುವುದೂ ಅವನಿಗೆ ಕಾಣಿಸಿತು. ಅವರೆಲ್ಲ ಸಮೀಪದ ಕೊಳಗೇರಿ ಯಿಂದ ಬಂದಿದ್ದರಂತೆ. ಎಲ್ಲರೂ ಎತ್ತರದ ಧ್ವನಿಯಲ್ಲಿ ಹೊಡೆದುಕೊಳ್ಳುತ್ತಿದ್ದುದರಿಂದ ಅವರುಗಳ ಮಾತಿನ ವಿಷಯ ಅರ್ಥಮಾಡಿ ಕೊಳ್ಳುವುದು ಕಷ್ಟವಿತ್ತು. ಆದರೆ ಅಲ್ಲಿನ ವಾತಾವರಣಕ್ಕೆ, ಬೆಳಕಿಗೆ ಹೊಂದಿಕೊಳ್ಳು ತ್ತಿದ್ದಂತೆ, ವಿಶುವಿಗೆ ಅಲ್ಲಿನ ಚರ್ಚೆಯ ಎಳೆಗಳೂ ದೊರೆಯಲಾರಂಭವಾಯಿತು.

ವಿಶುವಿಗೆ ಸ್ವಲ್ಪ ಕಾಲದಿಂದ ಕೃಷ್ಣಯಾದವ್‌ನ ಪರಿಚಯವಿತ್ತು. ತಮ್ಮ ಮನೆಯಲ್ಲಿ ಕಳ್ಳತನವಾದ ದಿನ ಆತ ಅಲ್ಲಿನ ಠಾಣೆದಾರನಾಗಿ ರಲಿಲ್ಲವಾದರೂ, ಆ ನಂತರ ಆತ ಚೆನ್ನಾಗಿಯೇ ಪರಿಚಯವಾಗಿದ್ದ. ತಮ್ಮ ಮನೆಯಲ್ಲಿ ಕಳ್ಳತನ ವಾದಾಗ ಠಾಣೆದಾರನಾಗಿದ್ದದ್ದು ಕೃಷ್ಣಾರೆಡ್ಡಿ ಯೆಂಬ ವ್ಯಕ್ತಿ. ವಿಶುವಿಗೆ ಕಳ್ಳತನವಾದ ದಿನ ಇನ್ನೂ ಚೆನ್ನಾಗಿ ನೆನಪಿದೆ. ಅಂದು ತಮಗೆ ವಿಷಯ ತಿಳಿದಾಕ್ಷಣ ಒಳ್ಳೆಯ ಪ್ರಜೆಯ ಹಾಗೆ, ಕೂಡಲೇ ಠಾಣೆಗೆ ಹೋಗಿ ಎಫ್.ಐ.ಆರ್. ದಾಖಿಲು ಮಾಡಿದ್ದ. ಕಳುವಾದ ಸಕಲ ವಸ್ತುಗಳ ವಿವರಗಳನ್ನೂ ಅದರಲ್ಲಿ ಬರೆದುಕೊಟ್ಟಿದ್ದ. ಆದರೆ ಕಳ್ಳತನವಾದ ಒಂದು ವಾರದ ಒಳಗಾಗಿಯೇ, ಕೃಷ್ಣಾರೆಡ್ಡಿಗೆ ಕಂಟ್ರೋಲ್ ರೂಮಿಗೆ ವರ್ಗ ಮಾಡಿಬಿಟ್ಟಿದ್ದರು. ಅಂದು ಠಾಣೆಯಿಡೀ ಶೋಕ ದಲ್ಲಿ ಮುಳುಗಿದ್ದಂತಿತ್ತು. ಇಂಥ 'ಎಫಿಸೆಂಟ್ ಆಫೀಸರ್‌ನ' ಠಾಣೆಯಿಂದ ವರ್ಗ ಮಾಡಲು ಆ ಕಟುಕರಿಗೆ ಮನಸ್ಸಾದರೂ ಹೇಗೆ ಬಂತು? ಎಷ್ಟಾದರೂ, ವಿಶುವಿನ ಕೇಸನ್ನು, ಚಿಟಿಕೆ ಬಡಿಯುವುದರಲ್ಲಿ ಬಗೆಹರಿಸುವ ಛಾತಿ ಇದ್ದ ಏಕೈಕ ಆಫೀಸರನ್ನ, ಕಂಟ್ರೋಲ್ ರೂಮಿನಲ್ಲಿ ಕೂತು ವಾಕಿಟಾಕಿಯಲ್ಲಿ ನಡೆಯೋ ಮಾತುಕತೆ ಕೇಳೆಂದು ಹೇಳಿದರೆ ಅನ್ಯಾಯವಲ್ಲದೇ ಮತ್ತೇನು? ಸಾಲದ್ದಕ್ಕೆ, ಇಂಥ ಪೋಸ್ಟಿಂಗ್ ಸಿಗಬಾರದೆಂದು ಮೊದಲೇ ಮೇಲಿನಧಿಕಾರಿಗಳನ್ನು ನೋಡಿ ಕೊಂಡು ತಯಾರಾಗಿದ್ದರೂ ಹೀಗೆ ಮಾಡಿ ದ್ದಾರಲ್ಲಾ ಬೇಯಿಮಾನಿಗಳು! ಹೀಗೆಲ್ಲಾ ಕೃಷ್ಣಾರೆಡ್ಡಿ ಮರುಗಿದ್ದರೂ ಅದರಿಂದ ವಿಶುವಿನ ಕೇಸಿಗೇನೂ ಪುಡಿಗಾಸಿನ ಸಹಾಯವಾಗಿರಲಿಲ್ಲ.

ಈಗ, ಈ ಘಟನೆಯಾಗಿ ಆರು ತಿಂಗಳುಗಳು ಕಳೆಯುತ್ತಾ ಬಂದಿರಲು, ಈ ಬಗ್ಗೆ ಚಟಾಕಿ ಹಾರಿಸಿ ನಗುವ ಮನಸ್ಥಿತಿಗೆ ವಿಶು, ನಯನಾ ಇಬ್ಬರೂ ತಲುಪಿಬಿಟ್ಟಿದ್ದರು. ಆಶ್ಚರ್ಯದ ವಿಷಯ ವೆಂದರೆ, ಅಂದಿನ ಕಳ್ಳ ಬರೇ ಎಲೆಕ್ಟ್ರಾನಿಕ್ ವಸ್ತುಗಳನ್ನು ಮಾತ್ರ, ಒಂದು ಚಾದರ, ದಿಂಬಿನ ಚೀಲದಲ್ಲಿ ಸುತ್ತಿ ಒಯ್ದಿದ್ದ(ಳು). ಅವರುಗಳು ಅಂದು ಹೊರಟಿದ್ದ ಮದುವೆಗೆಂದು ನಯನಾ, ಬ್ಯಾಂಕಿನ ಲಾಕರ್‌ನಿಂದ (ಅಲ್ಲಿ, ಆ ಕ್ಷಣಕ್ಕೆ, ಯಾವ ಒಡವೆಗಳನ್ನು ಮದುವೆಗೆ ಧರಿಸ ಬೇಕೆಂದು ನಿರ್ಧರಿಸಲಾಗದ್ದರಿಂದ) ಸಕಲ ಒಡವೆಗಳನ್ನೂ ತಂದುಕೊಂಡಿದ್ದಳು. ಸುಮಾ ರಷ್ಟು ಒಡವೆಗಳು ಕಪಾಟಿನಲ್ಲಿ ಬೀಗವೂ ಇಲ್ಲದೇ ಹಾಗೇ ಬಿದ್ದುಕೊಂಡಿದ್ದುವು. ಕಳ್ಳರಿಗೆ ಆ ಬಗ್ಗೆ ಯಾವೊಂದೂ ಆಸಕ್ತಿಯುಂಟಾಗಲಿಲ್ಲವೆಂಬುದು ವಿಶುವಿಗೆ ಮಹತ್ವದ ವಿಷಯ ಎನ್ನಿಸಿತ್ತು. ಆಫೀಸಿನಲ್ಲಿ ಮೂಲಶಕ್ತಿ, ಸ್ಪೆಷಲೈಸೇಷನ್



ವಿಷಯದ ಚರ್ಚೆ ಬಂದಾಗಲೆಲ್ಲಾ, ತಪ್ಪದೇ ಅವನು ಈ ವಿಷಯವನ್ನ ಹೇಳುತ್ತಿದ್ದ.

ಹೊಸ ಠಾಣೆದಾರ ಕೃಷ್ಣ ಯಾದವ್, ಯುವಕ ಹಾಗೂ ಒಳ್ಳೆಯ ಮೂಡಿನಲ್ಲಿದ್ದಾಗ ಸ್ನೇಹಜೀವಿ. ಕಳುವಾದ ದಿನ ಮಹಜರ್, ಬೆರಳಚ್ಚು ಶೇಖರಣೆ, ನಾಯಿಗಳ ಶೋಧ ಹಾಗೂ ಇತರೆ ಕಾರ್ಯಕಲಾಪಗಳೆಲ್ಲ ನಡೆಯುವವರೆಗೂ ತಾವಿಬ್ಬರೂ ಶಾಂತಿಯಿಂದ ಹೊರಗೆ ಕಾದಿದ್ದ ವಿಷಯ ಕೇಳಿ, ಇಬ್ಬರನ್ನೂ ಬಹಳ ಮೆಚ್ಚಿ ಕೊಂಡಿದ್ದ. ತನ್ನ ಫಿರ್ಯಾದಿನಲ್ಲಿ, ವಿಶು ಕೂಡಾ, ಕಳುವಾದ ವಸ್ತುಗಳ ಗುರ್ತುಗಳು, ಅವುಗಳ ನಂಬರುಗಳು ಎಲ್ಲವನ್ನೂ ತನ್ನ ಬಳಿಯಿದ್ದ ರಸೀದು, ವಾರಂಟಿ ಚೀಟಿಗಳ ಆಧಾರದ ಮೇಲೆ ಶಿಸ್ತಿನಿಂದ ಬರೆದುಕೊಟ್ಟಿದ್ದ. ಈ ಘಟನೆ ನಡೆದಾಗಿನಿಂದಲೂ, ಪ್ರತಿ ಶನಿವಾರ, ಠಾಣೆಗೆ ಹಾಜರಿ ಹಾಕಿ, ಕೇಸಿನ ಸ್ಥಿತಿಗತಿಯನ್ನ ವಿಚಾರಿಸಿ ಬರುತ್ತಿದ್ದ. ಈ ಆರು ತಿಂಗಳುಗಳಲ್ಲಿ, ಕಳೆದುಕೊಂಡ ಪ್ರತಿ ವಸ್ತುವಿನ ಜಾಗದಲ್ಲಿ ಈಚಿನ ಮಾಡೆಲ್‌ನ ಹೊಸ ಪರಿಕರಗಳನ್ನು ತಂದುಕೊಂಡಿದ್ದರಾದರೂ, ವಾರಕ್ಕೊಮ್ಮೆ ಠಾಣೆಗೆ ಹೋಗುವ ರಿವಾಜನ್ನು ಮಾತ್ರ ವಿಶುವಿಗೆ ತಪ್ಪಿಸಲಾಗಲಿಲ್ಲ. ಅದು ಈಗ ಪ್ರತಿ ಶನಿವಾರದ ಚಟದಂತಾಗಿಬಿಟ್ಟಿತ್ತು.

ಠಾಣೆಯಲ್ಲಿ ಇಬ್ಬರು ಮೂವರು ಕೃಷ್ಣ ಯಾದವ್ ಜತೆ ವಾದವಿವಾದ ಮಾಡುತ್ತಾ ನಿಂತಿದ್ದರು. ಅವರ ಮಧ್ಯೆ ಒಬ್ಬ ಹೆಂಗಸೂ ಇದ್ದಳು. ಸಮುದ್ರದಲ್ಲಿ ಮಗುವನ್ನ ತೇಲಿಬಿಟ್ಟು ಕುಂತಿಯ ಹಾಗೆ ಹೊರಟುಬಿಡುತ್ತಿದ್ದ ಆಕೆಯನ್ನ ರಾತ್ರೆಯ ಬೀಟ್ ಕಾನ್ಸ್‌ಟೇಬಲ್ ಹಿಡಿದಿದ್ದ. ಈಗ, ಆ ಘಟನೆಗೆ ಸಂಬಂಧಿಸಿದ ವಿಷಯಗಳನ್ನು ಸರಿತಿದ್ದುವ ವಿಚಾರವನ್ನ ಎಲ್ಲರೂ ಚರ್ಚಿಸುತ್ತಿದ್ದರು. ಆ ಹೆಣ್ಣು, ಮಗುವನ್ನ ನೀರಿಗೆ ಹಾಕಿ ಹೋಗಲೆತ್ನಿಸಿದ್ದನ್ನು ಅಲ್ಲಗಳೆಯಲಿಲ್ಲ. ಬದಲಿಗೆ, ಗಂಡ ಕುಡುಕನಾಗಿದ್ದುದರಿಂದ ತನಗೆ ಬೇರೆ ಮಾರ್ಗವಿರಲಿಲ್ಲವೆಂದು ಸಮಜಾಯಿಷಿ ಹೇಳಿಕೊಳ್ಳಲು ಯತ್ನಿಸುತ್ತಿದ್ದಳು. ಕುಡುಕ ಗಂಡ, ಮಗು ಬೆಳೆದಂತೆ ಅದನ್ನ ಹೊಡೆದು, ಬಡಿದು ಸೂಳೆಗಾರಿಕೆಗೆ ತಳ್ಳುವುದರಲ್ಲಿ ಅನುಮಾನವಿದ್ದಿರಲಿಲ್ಲವಾದ್ದರಿಂದ ಮಗುವಿಗೆ ಅಂಥ ಕರಾಳ ಭವಿಷ್ಯ ನೀಡುವುದಕ್ಕಿಂತ ಈಗಲೇ ಮಗುವನ್ನು ಮುಗಿಸಿ, ನೋವನ್ನು ಕಮ್ಮಿ ಮಾಡುವುದೇ ತನ್ನ ಉದ್ದೇಶವಾಗಿತ್ತೆಂದು ಆಕೆ ಹೇಳುತ್ತಿದ್ದಳು.

ಅವರುಗಳ ಮಾತು ಕೇಳಿ ವಿಶುವಿಗೆ ಅಪಘಾತವಾದದ್ದು ನಿಜ. ಆದರೆ ಕೃಷ್ಣ ಯಾದವ್‌ಗೆ ಇದ್ಯಾವುದೂ ತಟ್ಟಿದಂತಿರಲಿಲ್ಲ. ಕೃಷ್ಣಯಾದವ್‌ನನ್ನೊಳಗೊಂಡು ಎಲ್ಲರೂ, ಕೆಟ್ಟ ಭಾಷೆಯ, ಕೆಟ್ಟ ಬೈಗುಳಗಳನ್ನು ಉಪಯೋಗಿಸುತ್ತಾ ಸಂಭಾಷಣೆಯನ್ನ ಮುಂದುವರೆಸಿದ್ದರು. ಮಾತು ಮುಂದುವರೆಸುವ ಮುನ್ನ ಕೃಷ್ಣ ಯಾದವ್, ಯಾರಾದರೂ ಕಪಾಳಕ್ಕೆ ಬಾರಿಸಿಯೇ ಮುಂದುವರೆಯುತ್ತಿದ್ದುದು. ಹೀಗಾಗಿ, ಮೊದಲು ಆ ಹೆಂಗಸಿನ ಕಪಾಳಕ್ಕೆ ಹಾಕಿ, ಮಾತು ಮುಂದುವರೆಸಿದ, ''ಮಕ್ಕಳನ್ನು ಸಾಯಿಸೋದೇ ಆದ್ರೆ ಯಾಕೆ ಹುಟ್ಟಿಸ್ತೀರಿ?'' ಕೃಷ್ಣಯಾದವ್ ಕೂಗಾಡಿದ. ಆ ಹೆಂಗಸು ಮಾತಿನಲ್ಲಿ ಕಡಿಮೆಯೇನೂ ಇರಲಿಲ್ಲ. ''ಯಾಕೇಂದ್ರೆ ನನ್ನ ಮೈ ನನ್ನ ಕೈಯಲ್ಲಿಲ್ಲ. ಅದೂ ಅಲ್ದೇ ಗಂಡುಮಗು ಆಗಬೈದೂಂತ ಅಂದ್ಕಂಡಿದ್ದೆ. ಒಂದಕ್ಕೊಂದು ಅರ್ಥಾರ್ಥ ಸಂಬಂಧವಿಲ್ಲದ ಎರಡು ಮಾತುಗಳನ್ನ ಅವಳು ಹೇಳಿದ್ದಳು. ''ಸಾಲದ್ಕೆ, ಈ ಸೂಳೆಮಗನ ನರಳ್ನಾಗೆ ಬಳೆದ್ರೆ, ಅದರ ಕೈಲಿ ಖಂಡಿತ ಸೂಳೆಗರಿಕೆ ಮಾಡಿಸ್ತಾನೆ. ಅದಕ್ಕೆ ಬದಲು ಅವಳು ಈಗಲೇ ಸಾಯೋದು ವಾಸಿ.''

ಈಗ ಅವಳ ಕಪಾಳಕ್ಕೆ ಬಾರಿಸುವ ಸರದಿ ಅವಳ ಗಂಡನದ್ದಾಯ್ತು. ''ನನ್ನನ್ನ ಸೂಳೇಮಗ ಅನ್ನೋಷ್ಟು ಕೊಬ್ಬು ಬಂತೇನೇ ಲೌಡಿ. ಸರ್, ನಾ ಹೇಳ್ತೀಪ್ನಿ, ಈ ಮಗು ನನ್ನದಲ್ವೇ ಅಲ್ಲ. ಇವ್ಳು ಯಾರ್‍ಯಾರ ಜತೆ ಮಸೀಕ್ಕಂಬಂದವ್ಳೋ ಯಾರಿಗ್ ಗೊತ್ತು? ಅದ್ಕೇ ಮಗೂನ ಸಾಯಿಸ್ಲಿಕ್ ಒಂಟವ್ಳೆ. ಮಗು ಎಣ್ಣಾದ್ರೇನು, ನಾನು ಸಾಕಿ ಬೆಳಸ್ತೀನಿ.'' ಗಂಡ ಘರ್ಜಿಸಿದ. ಈಗ ಅವನ ಕಪಾಳಕ್ಕೆ ಬಾರಿಸುವ ಸರದಿ ಕೃಷ್ಣಯಾದವ್‌ನದ್ದಾಯಿತು. ''ಮುಚ್ಕೋ ಮಗನೇ, ಯಾವಾಗ ನೋಡಿದ್ರೂ ಕುಡಕೊಂಡು ಯಾವಳ ಜತೆ ಮಲಗಿದ್ದೀಯೋ ತಿಳಿದೇ ಬಿದ್ದಿರ್ತೀಯ, ಹೆಣ್‌ಮಗೂನ ಸಾಕ್ತೀಯಾ? ಮುಚ್ಕಂಡು ಮನೆಕಡೆ ಹೋಗು, ನಾವು ಈ ಮಗೂನ ಯಾವುದಾದರೂ ಅನಾಥಾ ಶ್ರಮಕ್ಕೆ ಕಳಿಸ್ತೀವಿ. ಅಲ್ಲಾದರೆ ವಾತಾವರಣ ನಿಮ್ಮ ಕೊಳೆಗೇರಿಗಿಂತ್ಲೂ ಚೆನ್ನಾಗಿರುತ್ತೆ. ಸರಿ ಯಾಗಿ ಬೆಳೆದಾದ್ರೂ ಬೆಳೆಯುತ್ತೆ ಮಗು.''

ಠಾಣೆಗೆ ಬರಲು ಆರಂಭಿಸಿದಾಗಿನಿಂದಲೂ ವಿಶು, ಇಂಥ ಅನೇಕ ಘಟನೆಗಳಿಗೆ ಸಾಕ್ಷಿ ಯಾಗಿದ್ದ. ಆದರೂ ಇಂದಿನ ಘಟನೆ ಮಾತ್ರ ಅನೇಕ ವಿಧಗಳಿಂದ ವಿಶಿಷ್ಟವಾಗಿತ್ತು. ಕೃಷ್ಣ ಯಾದವ್, ಖುದ್ದಾಗಿ, ಜನರನ್ನ ಹೊಡೆದು ಬಡಿದು ಮಾಡುವುದನ್ನು ಅವನೆಂದೂ ಕಂಡಿರ ಲಿಲ್ಲ. ಠಾಣೆಗಳಲ್ಲಿ ಇಂಥ ಘಟನೆಗಳು ಇನ್ನೂ ಯಾಕೆ ಘಟಿಸುತ್ತಲೇ ಇರುತ್ತವೆ ಎಂಬುದಕ್ಕೆ ವಿಶುವಿನ ಬಳಿ ಉತ್ತರವಿರಲಿಲ್ಲ. ಇಂಥ ಸಂದರ್ಭಗಳನ್ನ ಇನ್ನಷ್ಟು ಸೌಹಾರ್ದಯುತವಾಗಿ ಬಗೆಹರಿಸಿಕೊಳ್ಳುವ ಮಾರ್ಗವೇ ಇರಲಿಲ್ಲ ವೇನು? ಕೃಷ್ಣಯಾದವ್, ಈ ಸಂದರ್ಭದಲ್ಲಿ, ವಿಷಯವನ್ನ ಪೂರ್ತಿ ಅರ್ಥಮಾಡಿಕೊಳ್ಳದೆಯೇ ಮುಂದುವರೆಯುತ್ತಿದ್ದಾನೆಂದು ವಿಶುವಿಗನ್ನಿಸಿತು. ಅವರುಗಳ ಚರ್ಚೆಯ ಮಧ್ಯೆ ತಾನೂ ಸೇರಿ, ಪರಿಸ್ಥಿತಿಯ ಉದ್ರಿಕ್ತತೆಯನ್ನ ಕಡಿಮೆ ಮಾಡ ಬಹುದು ಅಂತಲೂ ಅನ್ನಿಸಿತು. ಒಂದು ಕ್ಷಣದ ಮಟ್ಟಿಗೆ, ವಿಶು, ತನ್ನ ಕುರ್ಚಿಯಿಂದ ಎದ್ದುನಿಂತು, ಆ ಮಗುವನ್ನ ತಾನು ಕೊಂಡೊಯ್ಯಲು ತಯಾರಾಗಿದ್ದೇನೆಂದು ಹೇಳುವವನೇ ಇದ್ದ. ಇದರಿಂದ ಚರ್ಚೆ ದಿಕ್ಕಾದರೂ ಬದಲಾಗ ಬಹುದಿತ್ತು. ಜೊತೆಗೆ ಇಂಥ ಸಮಯದ ತುರ್ತು ನಿರ್ಧಾರಗಳು ಎಷ್ಟೋ ಬಾರಿ, ಚಿಂತನ ಮಂಥನ ಮಾಡಿ ತೆಗೆದುಕೊಂಡ ನಿರ್ಧಾರಗಳಿಗಿಂತ ಒಳ್ಳೆಯದ್ದಾಗಿರುತ್ತಿದ್ದುವು. ಆದರೆ ತಾನೀಗ ಮಧ್ಯೆ ತಲೆತೂರಿಸುವುದರಿಂದ ವಾತಾವರಣ ತಣ್ಣ ಗಾಗುವ ಖಾತ್ರಿಯೇನೂ ಇರಲಿಲ್ಲ. ಹಾಗೂ ವಿಷಯ ಅಷ್ಟು ಸರಳವೂ ಆಗಿರಲಿಲ್ಲ.

ವಿಶು, ಕಳೆದಾರು ತಿಂಗಳುಗಳಲ್ಲಿ ಕಂಡಿದ್ದ ಕೃಷ್ಣಯಾದವ್‌ನ ವರ್ತನೆಗೂ, ಇಂದು ಕಾಣು ತ್ತಿರುವ ಅವನ ವರ್ತನೆಗೂ ಅಜಗಜಾಂತರದ ವ್ಯತ್ಯಾಸವಿತ್ತು. ಕೆಲಸದ ಒತ್ತಡವಿಲ್ಲದಿದ್ದಾಗ ಯಾದವ್ ಖುಷಿಯಿಂದ ನಗೆಚಟಾಕಿ ಹಾರಿಸಿ ಕೊಂಡು ಜಾಲಿಯಾಗಿರುತ್ತಿದ್ದ. ಆದರೆ ಅವನಿದ್ದ ಕೆಲಸವಲ್ಲಿ ಒತ್ತಡವಿಲ್ಲದ ಕ್ಷಣಗಳೇ ಕಡಿಮೆ. ಆದರೂ ಇಂಥ ರಾಕ್ಷಸ ಪ್ರವರ್ತನೆಯನ್ನ ವಿಶು, ಎಂದೂ ಕೃಷ್ಣಯಾದವ್‌ನಲ್ಲಿ ಕಂಡಿರಲಿಲ್ಲ.

ತಾನು ಪ್ರತಿ ಶನಿವಾರ ಠಾಣೆಗೆ ಬರ ಲಾರಂಭಿಸಿದ ಮೊದಲ ದಿನಗಳಲ್ಲಿ, ಠಾಣೆ ಯವರಿಗೆ ಇದು ವಿಚಿತ್ರ ಅನ್ನಿಸಿತ್ತು. ಯಾಕೆ ಈತ ಇಷ್ಟು ಬೇಗ! ಬೇಗ ಠಾಣೆಗೆ ಹಾಜರಿ ಹಾಕುತ್ತಿದ್ದಾನೆಂದು ಕೆಲವರು ಕಕ್ಕಾಬಿಕ್ಕಿಯಾಗಿ ದ್ದರು. ಆದರೆ ಒಂದೆರಡು ತಿಂಗಳುಗಳಲ್ಲಿ, ಎಲ್ಲರಿಗೂ ಇದು ಎಷ್ಟು ಅಭ್ಯಾಸವಾಗಿಬಿಟ್ಟಿ ತ್ತೆಂದರೆ, ವಿಶು ಅಕಸ್ಮಾತ್ ಬರದಿದ್ದರೆ ಯೋಚನೆ ಮಾಡುವ ಸ್ಥಿತಿಗೆ ತಲುಪಿಬಿಟ್ಟಿದ್ದರು. ಹೀಗೆ ಚೆನ್ನಾಗಿ ಅಭ್ಯಾಸವಾದ ಕೆಲ ದಿನಗಳ ನಂತರ ಕೃಷ್ಣಯಾದವ್, ವಿಶುವಿಗೆ ಹೇಳಿಯೂ ಇದ್ದ. ''ನಿಮ್ಮ ಕೇಸಿನಲ್ಲಿರುವ ತೊಂದರೆಯೆಂದರೆ, ನೀವು ಎಫ್‌ಐಆರ್‌ನಲ್ಲಿ, ಕಳಕೊಂಡ ವಸ್ತು ಗಳನ್ನು ವರ್ಣಿಸುವಾಗ ವಿಪರೀತ ವಿವರಗಳನ್ನು

ಕೊಟ್ಟುಬಿಟ್ಟಿದ್ದೀರಿ.'' ವಿಶುವಿಗೆ ಆಶ್ಚರ್ಯವಾಯಿತು! ''ಯಾಕೆ, ನನ್ನ ವಸ್ತುಗಳನ್ನ ಗುರುತಿಸೋಕ್ಕೆ ಅನುಕೂಲವಾಗಬಹುದೂಂತ ನಾನು...'' ಕೃಷ್ಣಯಾದವ್, ವಾಕ್ಯ ಮುಗಿಸಲು ಅವಕಾಶ ಕೊಡದೇ ಮಾತನಾಡಿದ: ''ನೀವು ಅಷ್ಟು ಸ್ಪಷ್ಟವಾಗಿ ಎಲ್ಲವನ್ನೂ ಬರೆಯದೇ ಇದ್ದಿದ್ದರೆ, ನಾವುಗಳು ಬೇರಾವುದಾದರೂ ಬ್ರಾಂಡಿನ ವಸ್ತುಗಳನ್ನು ಕೊಡುವ ಅವಕಾಶವಿತ್ತು. ನಮ್ಮ ಗೋದಾಮಿನಲ್ಲಿ ಎಷ್ಟೋ Unclaimed ವಸ್ತುಗಳು ಇದ್ದೇ ಇರ್ತಾವೆ, ಅವುಗಳಲ್ಲಿ ಯಾವುದಾದರೊಂದನ್ನು ಎತ್ತಿ ಕೊಟ್ಟುಬಿಡುತ್ತಿದ್ದೆವು, ಅಷ್ಟೇ. ಎಷ್ಟಾದರೂ ಮ್ಯೂಸಿಕ್ ಸಿಸ್ಟಂಗಳ ಕೇಸುಗಳನ್ನು ಪರಿಹರಿಸುವಷ್ಟು ಸರಳವೇನೂ ಆಗಿರಲಿಲ್ಲವಲ್ಲ. ಮಗುವಿನ ತಂದೆತಾಯಿಗಳನ್ನು ಹೇಗೇ ಗದರಿದರೂ, ಅವನು ಈಗ, ಈ ಮಗುವಿಗೊಂದು ದಾರಿಯನ್ನು ಕಾಣಿಸಬೇಕಿತ್ತು. ಆದರೆ ಈ ವಿಷಯದಲ್ಲಿ ಕೃಷ್ಣಯಾದವ್‌ಗೆ ಯಾವ ಯೋಚನೆಯೂ ಇದ್ದಂತಿರಲಿಲ್ಲ.

ಆ ಸಮಯಕ್ಕೆ ಸರಿಯಾಗಿ, ಮಗು, ಜೋರಾಗಿ ಗೋಳಾಡಲು ಪ್ರಾರಂಭಿಸಿತು.



ಪ್ರತಿನಿತ್ಯ, ಏನಾದರೊಂದನ್ನು ಜಪ್ತು ಮಾಡುತ್ತಲೇ ಇರುತ್ತೀವಲ್ಲಾ.''

ಮಗುವಿನ ಕೇಸಿನ ವಿಷಯದಲ್ಲಿ ಕೃಷ್ಣಯಾದವ್ ಯಾವ ರೀತಿ ಮುಂದುವರೆಯಬಹುದೆಂಬ ಕುತೂಹಲ ವಿಶುವಿಗಿತ್ತು. ಎಷ್ಟಾದರೂ, ಒಂದು ಪುಟ್ಟ ಕೂಸಿಗೆ ಸಂಬಂಧಿಸಿದ ಕೇಸು ಇದಾಗಿತ್ತು. ಇದನ್ನು ಬಗೆಹರಿಸುವುದು ಟಿವಿ, ಮಗುವಿನ ತಾಯಿ ಕೂಡಲೇ ಅಲ್ಲಿಂದ ಹಿಂದಕ್ಕೆ ಹೆಜ್ಜೆಹಾಕಿ, ಮಗುವನ್ನು ಎತ್ತಿಕೊಂಡಳು. ಒಂದು ಮೂಲೆಗೆ ಹೋಗಿ, ಏನೂ ನಡೆದೇಯಿಲ್ಲವೇನೋ ಎಂಬಂತೆ ಕೂತು, ಕೂಸಿಗೆ ಎದೆಹಾಲು ಕುಡಿಸಲು ಪ್ರಾರಂಭಿಸಿದಳು. ಕೃಷ್ಣಯಾದವ್ ಅವಳ ಗಂಡನನ್ನ ಕರೆದು, ಕೆನ್ನೆಗೆ ಮತ್ತೊಂದು ಬಾರಿಸಿ, ಕೂಡಲೇ ಮನೆಗೆ

ಹೋಗಲು ಹೇಳಿದ. ಆ ಗಂಡಸೂ ಸುಮ್ಮನೆ ಕಾಫಿ ಕುಡಿದು ಹೋಗಲು ಠಾಣೆಗೆ ಬಂದಿದ್ದವನ ಹಾಗೆ, ನಗುನಗುತ್ತಾ ಹೊರಟುಬಿಟ್ಟ. ಅದೇ ಉಸಿರಿನಲ್ಲಿ ಕೃಷ್ಣಯಾದವ್, ಆ ಹೆಂಗಸಿನ ಮೇಲೂ ಕೂಗಾಡಿ, ''ಆ ಮಗುವನ್ನ ಮತ್ತೆ ಎಲ್ಲಾದರೂ ಬಿಡೋ ಸುದ್ದಿ ಕೇಳಿದರೆ, ಕಂಬಿ ಎಣಿಸೋಹಾಗೆ ಮಾಡ್ತೀನಿ. ನೆಟ್ಟಗೆ ಮರ್ಯಾದೆಯಾಗಿದ್ದೆಯೋ ಸರಿ, ಇಲ್ಲದಿದ್ದರೆ ನಾನೇನು ಮಾಡ್ತೀನೋ ನನಗೇ ಗೊತ್ತಿಲ್ಲ.'' ಕೃಷ್ಣಯಾದವ್ ಹೊಡೆದುಕೊಳ್ಳುತ್ತಲೇ ಇದ್ದ. ಆದರೆ ಆ ಹೆಂಗುಸು, ಮಗುವಿಗೆ ಹಾಲುಣಿಸುವುದಕ್ಕೆ ಪ್ರಾರಂಭಿಸಿದ ಕೂಡಲೇ ಮೋಕ್ಷ ಪ್ರಾಪ್ತವಾದವಳಂತೆ, ಜಗತ್ತಿನರಿವೇ ಇಲ್ಲದೇ ಇದ್ದಳು.

ವಿಶುವಿಗೆ ಏನೊಂದೂ ಸ್ಪಷ್ಟವಾಗಿ ಅರ್ಥವಾಗಲಿಲ್ಲ. ಜತೆಗೆ ಕೃಷ್ಣಯಾದವ್ ಪ್ರವರ್ತನೆ ಅವನಿಗೆ ಸ್ವಲ್ಪವೂ ಹಿಡಿಸಲಿಲ್ಲ. ಈ ಜನರನ್ನು ಇನ್ನಷ್ಟು ಮಾನವೀಯವಾಗಿ ಕಾಣಬೇಕಿತ್ತು ಅಂತ ಅವನ ಅಭಿಪ್ರಾಯವಾಗಿತ್ತು. ವಿಶು, ತನ್ನ ತಳಮಳವನ್ನು ತಡೆಯಲಾಗದೇ ಎದ್ದುಹೋಗಿ, ಯಾದವ್‌ಗೆ ತನಗನ್ನಿಸಿದ್ದನ್ನ ಹೇಳಿಯೇ ಹೇಳಿದ, ''ಈ ಕಥೆಯ ಅಂತ್ಯ ಇಲ್ಲೇ ಆಗುತ್ತೇಂತ ನಿಮ್ಮ ಅಭಿಪ್ರಾಯ ಇದ್ದೀತು. ಆದರೆ ಆ ಮಗು ಸುರಕ್ಷಿತವಾಗಿದೇಂತ ನಿಮಗೆ ಯಾವ ಖಾತ್ರಿಯೂ ಇರಲಿಕ್ಕೆ ಸಾಧ್ಯವಿಲ್ಲ. ಇದಕ್ಕೆ ಬೇರೇನೂ ಮಾರ್ಗವಿಲ್ಲವೇ?''

ಕೃಷ್ಣಯಾದವ್, ಏನೂ ನಡೆದೇಯಿಲ್ಲವೆಂಬಂತೆ ಉತ್ತರಿಸಿದ. ''ನಿಮಗೆ ಈ ಜನ ಗೊತ್ತಿಲ್ಲ. ಆ ಹೆಂಗಸು, ಹೇಗೂ ಆ ಮಗುವಿನ ಪ್ರಾಣ ತೆಗೆಯುತ್ತಿದ್ದವಳಲ್ಲ. ಇದು ಅವರುಗಳು ಬದುಕುವ ರೀತಿ. ಇವೆಲ್ಲಾ ನನ್ನನ್ನ ವಿಚಲಿತಗೊಳಿಸಿದರೆ, ನಾನು ಪೋಲೀಸು ನೌಕರಿ ಮಾಡುವುದೇ ಸಾಧ್ಯವಿಲ್ಲ. ನಾನು ಇಂಥ ಕೇಸನ್ನ ವಾರಕ್ಕೊಮ್ಮೆ ನೋಡ್ತಾಯಿರ್ತೀನಿ-ಮಕ್ಕಳಿಗೆ ಕಿರುಕುಳ ಕೊಡೋದು, ಹೆಂಡತೀರನ್ನ ಬಡಿಯೋದು, ಕೈ ಮುರಿಯೋದು, ಏನೆಲ್ಲಾ... ಇವರುಗಳು ಈ ರೀತಿಯ ಬದುಕನ್ನ ಅಭ್ಯಾಸ ಬಲದಿಂದ ಬದುಕುತ್ತಾರೆ. ಆ ಹೆಂಗಸು, ಮಗುವನ್ನ ಯಾರಿಗಾದರೂ ಕೊಟ್ಟುಬಿಡುತ್ತಾಳೇಂತ ನಿಮಗನ್ನಿಸುತ್ತಾ? ಬೇಕಿದ್ದರೆ ಪ್ರಯತ್ನಿಸಿ ನೋಡಿ. ನನ್ನ ಉತ್ತರ-ಇಲ್ಲ-ಎಂದಿಗೂ ಆಕೆ ಆ ಮಗುವನ್ನ ಬಿಟ್ಟುಕೊಡುವುದಿಲ್ಲ.''

''ಆದರೆ ಈ ವಿಷಯದಲ್ಲಿ ನೀವಂದುಕೊಂಡದ್ದು ತಪ್ಪಾದರೆ?''

''ಸಾಧ್ಯತೆಗಳು ಕಡಿಮೆ. ನೀವೂ ನಮ್ಮ ವೃತ್ತಿಗೆ ಬಂದರೆ, ಶಿಲೆಯಾಗುತ್ತಾ ಹೋಗುತ್ತೀರಿ. ನಾವು ಬೆಳಗಿನ ಸುಪ್ರಭಾತ ಹೇಳೋದೇ 'ಅನುಮಾನ' ಅನ್ನೋ ಪದದಿಂದ. ಅಲ್ಲಿಂದ ಮುಂದಕ್ಕೆ ನಾವು ಅನುಮಾನದಲ್ಲೇ ದಿನಕಳೆಯುತ್ತೇವೆ. ಜನ ಸುಮ್ಮಸುಮ್ಮನೆ ನಮ್ಮ ಹತ್ತಿರ ಬರ್ತಾರೇಂತ ಅಂದುಕೊಂಡಿದ್ದೀರಾ? ಈಗ ನಿಮ್ಮ ಕೇಸೇ ತೆಗೊಳ್ಳಿ-ನೀವ್ಯಾಕೆ ಇಲ್ಲಿ ವಾರಾವಾರ ಬರ್ತೀರೀ



ಅನ್ನೋದನ್ನೂ ನಾವು ಅನುಮಾನದಿಂದ ನೋಡ ಬೇಕಾಗುತ್ತೆ. ಅಂದಹಾಗೆ, ನಿಮ್ಮ ಕೇಸನ್ನ ಸ್ವಲ್ಪ ದಿನಗಳಲ್ಲೇ ಮುಚ್ಚಿಹಾಕುತ್ತಿದ್ದೇವೆ. ನೀವು ಶನಿವಾರಗಳಂದು ಮಾಡಲು ಬೇರೇನಾದರೂ ನೋಡಿಕೊಳ್ಳೋದು ಒಳ್ಳೇದು.'' ಅಂದು ಕೃಷ್ಣಯಾದವ್ ಒಳ್ಳೆಯ ಮೂಡಿನಲ್ಲಿರಲಿಲ್ಲ ವೆಂಬುದಂತೂ ಸ್ಪಷ್ಟವಾಗಿತ್ತು. ಜತೆಗೆ ವಿಶುವಿಗೂ ಈ ಎಲ್ಲವನ್ನು ಕಂಡು ಸ್ವಲ್ಪ ಭಯವೇ ಆಯಿತು. ತನಗೆ, ತನ್ನ ಕಳೆದುಹೋದ ವಸ್ತುಗಳನ್ನ ಪಡೆಯೋದು ಮುಖ್ಯವಾಗಿರಲಿಲ್ಲವೆಂಬುದು ನಿಜವಾದರೂ, ಇದು ತನ್ನ ಜೀವನವಿಧಾನ ಆಗಿಬಿಟ್ಟತ್ತೆಂದು-ಇದಕ್ಕಿಂತ ಭಿನ್ನವಾದ ಅಜೆಂಡಾ ಬೇರೇನೂ ಇಲ್ಲವೆಂದು ನಂಬುವಂತೆ ಪ್ರವರ್ತಿ ಸುವುದು ಹೇಗೆ? ಈಗ, ಶನಿವಾರಗಳಂದು, ಮುಂಜಾನೆ ಸಮಯ ಕಳೆಯಲು ಬೇರೇ ನಾದರೂ ಕಾಯಕ ಹುಡುಕಬೇಕಿತ್ತು.

ಈ ಕಥೆ, ಇಲ್ಲಿಗೇ ಮುಗಿದಿಲ್ಲವೆಂಬ ಅನುಮಾನ ವಿಶುವನ್ನ ಕಾಡಿತು. ಆದರೆ ವಿಶುವಿಗೆ ಅರ್ಥವಾಗದ್ದೆಂದರೆ, ಕೃಷ್ಣಯಾದವ್, ಗಂಭೀರ ವಾದ ಅಧಿಕಾರಿಯಿಂದ ವಡ್ಡುತನದ ಠಾಣೆ ದಾರನಾಗಿ ಪರಿವರ್ತನೆಗೊಂಡು ಕೋಪ ಪ್ರದರ್ಶನ ಮಾಡುತ್ತಿರುವುದೇಕೆ ಎಂಬುದು. ಕೃಷ್ಣಯಾದವ್, ಇದರಿಂದ ತನ್ನ ಕೈ ತೊಳೆದು ಕೊಂಡು ಶುಭ್ರವಾಗಬೇಕೆಂಬ ಆತುರ ತೋರಿ ದರೂ, ಈ ಕೇಸಿನಲ್ಲಿ ಕಣ್ಣಿಗೆ ಕಾಣದ್ದು ಇನ್ನೂ ಏನೋ ಇದೆ ಅಂತ ವಿಶುವಿಗನ್ನಿಸಿತು. ಇದರ ಬಗ್ಗೆ ತಾನೇನಾದರೂ ಮಾಡಬಹುದೆಂದೂ ಅನ್ನಿಸಿತು. ತನ್ನ ಬೇರೊಂದು ಸಮಸ್ಯೆಗೆ ಇದು ಉತ್ತರವನ್ನ ಕೊಟ್ಟರೂ ಕೊಡಬಹುದು-ಮಗು. ಆದರೆ ಅದೆಲ್ಲಾ ಅಷ್ಟು ಸರಳವೇ? ನಯನಾ ಏನನ್ನಬಹುದು?

ವಿಶು, ಠಾಣೆಯಿಂದ ಆಚೆಗೆ ಹೆಜ್ಜೆಯಿಡು ತ್ತಿದ್ದಂತೆ, ಆ ಹೆಂಗಸೂ ಮಗುವನ್ನೆತ್ತಿಕೊಂಡು ಎದ್ದಳು. ''ಆ ಮಗುವಿನ ವಿಷಯದಲ್ಲಿ ಮತ್ತೇ ನಾದರೂ ಸುದ್ದಿ ಕೇಳಿ ಬಂದರೆ, ಆ ಮಗೂನ ಅನಾಥಾಶ್ರಮಕ್ಕೆ ಕಳಿಸಿ, ನಿನ್ನನ್ನು ಚೆನ್ನಾಗಿ ಒದ್ದು ಒಳಗೆ ಹಾಕ್ತೀನಿ ತಿಳೀತಾ? ಹಾಗೇನೇ ಆ ಕುಡುಕನ್ನೂ ಹದ್ದುಬಸ್ತಿನಲ್ಲಿಡು. ಇಲ್ದೇಯಿದ್ರೆ ಏನಾಗುತ್ತೊ ನನಗೇ ಗೊತ್ತಿಲ್ಲ.'', ಒಳಗಿನಿಂದ ಕೃಷ್ಣಯಾದವ್ ಕೂಗಿದ.

ಸ್ವಲ್ಪ ದೂರದಿಂದ ವಿಶು ಆ ಹೆಂಗಸನ್ನು ಹಿಂಬಾಲಿಸತೊಡಗಿದ. ಆಕೆಯ ಮನೆ ಎಲ್ಲಿ ಮತ್ತು ಆಕೆಯನ್ನ ಸಂಪರ್ಕಿಸಬೇಕಾದರೆ ಹೇಗೆ ಎಂಬುದನ್ನ ಅವನು ತಿಳಿದುಕೊಳ್ಳಬೇಕಾಗಿತ್ತು. ಆದರೆ ಆಕೆಯ ಬಳಿಗೆ ನೇರವಾಗಿ ಹೋಗಿ ಯಾವುದನ್ನೂ ಮಾತಾಡುವ ಧೈರ್ಯ ಮಾತ್ರ ಅವನಲ್ಲಿರಲಿಲ್ಲ. ಮುಂದಕ್ಕೆ ಹೆಜ್ಜೆ ಹಾಕುತ್ತಿದ್ದಂತೆ, ಜನ, ಸಮಾಜದ ಬೇರೆ ಬೇರೆ ಸ್ತರಗಳ ಜನತೆಯೊಂದಿಗೆ ವ್ಯವಹರಿಸುವಾಗ ಭಿನ್ನವಾಗಿ ಪ್ರವರ್ತಿಸುವುದು ಏಕೆಂದು ಯೋಚಿಸುತ್ತಿದ್ದ. ಒಂದು ಸ್ತರದಲ್ಲಿ, ಮಗುವನ್ನ, ಇಂಥ ಕಷ್ಟದ ಪರಿಸ್ಥಿತಿಯಲ್ಲಿ ಬೆಳಸಬೇಕಾದ ಆ ಹೆಣ್ಣಿನ ಬಗ್ಗೆ ಅವನಿಗೆ ಅನುಕಂಪವಿತ್ತು. ಅವಳಿಗೆ ತನ್ನಿಂದ ಏನೂ ಸಹಾಯವಾಗಲಾರದೆಂಬ ವಾಸ್ತವದ ವಿಷಾದವೂ ಅವನನ್ನು ಕಾಡುತ್ತಿತ್ತು. ಆದರೆ ಕೃಷ್ಣ ಯಾದವ್, ಅವಳಿಗೆ ಕಪಾಳಮೋಕ್ಷ ಮಾಡುವು ದನ್ನು ನೋಡುವುದನ್ನಾಗಲೀ, ಅವಳ ಮಗುವಿನ ಬಗ್ಗೆ ಯಾವುದಾದರೊಂದು ನಿಲುವನ್ನು ತೆಗೆದು ಕೊಳ್ಳುವುದಾಗಲೀ ಸಾಧ್ಯವಾಗದೇ, ಒದ್ದಾಡಿ ಹೋದ. ಕೆಲಕ್ಷಣಗಳ ಮಟ್ಟಿಗೆ, ಮಗುವನ್ನ ಮುಗಿಸಿಬಿಡುವ, ಆತ್ಮಹತ್ಯೆ ಮಾಡಿಕೊಳ್ಳುವ ಮಾತುಗಳೆಲ್ಲ, ದಿನನಿತ್ಯದ ಪೊಳ್ಳು ಮಾತುಗಳು ಎಂದ ಕೃಷ್ಣಯಾದವ್‌ನ ಅಭಿಪ್ರಾಯವನ್ನು ಕೂಡಾ ನಂಬಬಹುದೇನೋ ಅನ್ನಿಸಿತು.

ವಿಶು, ಅವಳನ್ನು ಹಿಂಬಾಲಿಸುತ್ತಾ ನಡೆದ. ಸ್ವಲ್ಪ ದೂರ ಹೋದ ನಂತರ ಆಕೆ, ಒಂದು ಸಣ್ಣ ಗಲ್ಲಿಯಲ್ಲಿ ನುಸುಳಿ, ತೆರೆದಿದ್ದ ಒಂದು ಬಾಗಿಲಲ್ಲಿ ಮಾಯವಾಗಿಬಿಟ್ಟಳು. ಅವನು ಮುಂದೆ ಹೋಗಿ ಬಾಗಿಲನ್ನು ತಟ್ಟಿದ. ಗಂಡ ಬಾಗಿಲು ತೆರೆದು

ಹುಬ್ಬುಹಾರಿಸಿದ. ಇನ್ನೇನು ಉಗುಳುನುಂಗಿ ಮಗುವಿನ ವಿಷಯ ಕೇಳಬೇಕೆಂದು ಬಾಯಿ ತೆರೆಯುವವನೇ ಇದ್ದ ವಿಶು, ಒಳಗಡೆ ಕಂಡ ಟಿವಿಯನ್ನು ನೋಡಿ ಅವಾಕ್ಕಾದ. ಇದು ತಮ್ಮ ಮನೆಯಿಂದ ನಾಪತ್ತೆಯಾಗಿದ್ದ ಟಿವಿ ಎಂಬು ದರಲ್ಲಿ ಸಂದೇಹವಿರಲಿಲ್ಲ. ತಮ್ಮ ಟಿವಿಗಿದ್ದ ಎಲ್ಲ ಗುರುತುಗಳೂ ಅದರ ಮೇಲಿದ್ದುವು-ಮುಖ್ಯ ವಾಗಿ ಬದಿಯಲ್ಲಿ ಅಂಟಿಸಿದ್ದ ಅಮುಲ್ ಬೆಣ್ಣೆಯ ಸ್ಟಿಕ್ಕರ್, ಷೋರೂಮಿನಿಂದ ಮನೆಗೆ ತರುವಾಗ ಆಗಿದ್ದ ದೊಡ್ಡ ಗುರುತು, ಎಲ್ಲವೂ ಅದರ ಮೇಲಿದ್ದದ್ದರಿಂದ ಅನುಮಾನಕ್ಕೆ ಆಸ್ಪದವೇ ಇರಲಿಲ್ಲ. ವಿಶು, ಸುತ್ತಮುತ್ತ ನೋಡಿದ. ಬೇರ್‍ಯಾವ ವಸ್ತುಗಳೂ ಕಾಣಸಲಿಲ್ಲ.

''ಏನು? ಏನು ಬೇಕಿತ್ತು?'', ಆತ ಗಟ್ಟಿಯಾಗಿ ಕೇಳಿದ. ವಿಶುವಿಗೆ ತಕ್ಷಣಕ್ಕೆ ಏನು ಮಾಡಬೇಕೋ ತಿಳಿಯಲಿಲ್ಲ. ಮಗುವಿನ ವಿಷಯ ಕೇಳಲು ಬಂದವನಿಗೆ, ಇದು ನಿರೀಕ್ಷಿತವಾಗಿರಲಿಲ್ಲ. ಬಾಯಿಂದ ಮಗುವಿನ ಮಾತು ಬರದೇ ಮನದಲ್ಲಿ ಬೃಹದಾಕಾರವಾಗಿ ನಿಂತಿದ್ದ ಟಿವಿಯ ವಿಷಯ ಹೊರಬಂದದ್ದು ಅವನಿಗೇ ಆಶ್ಚರ್ಯವಾಗಿತ್ತು. ಟಿವಿಯ ದಿಕ್ಕಿನಲ್ಲಿ ಬೆರಳುಮಾಡಿ, ''ಆ ಟಿವಿ....'' ಎಂದಷ್ಟೇ ಕಿರುಚಿದ.

''ಅದನ್ನ ಮಾರಾಟ ಮಾಡೋದಿಲ್ಲ. ಅದು ನಾವೇ ನೋಡೋಕ್ಕೆ ಇಟ್ಕಂಡಿರೋದು ಕಾಣಸೊಲ್ವ? ಆದರೆ, ಬೇಕಿದ್ರೆ ಅದ್ಭುತವಾದ ಒಂದು ಸಿ.ಡಿ.ಪ್ಲೇಯರ್ ಇದೆ. ಐದು ಸಾವಿರ. ಬೇಕಿದ್ದರೆ ಹೇಳಿ...'' ವಿಶು ಸರಿಯೆಂದು ತಲೆಯಾಡಿಸುತ್ತಿದ್ದಂತೆ ಆತ ಒಳಹೊಕ್ಕು ಸಿ.ಡಿ. ಸಿಸ್ಟಮನ್ನ ಎತ್ತಿಕೊಂಡು ಬಂದ. ಅದನ್ನು ನೋಡಿ ವಿಶು ಮತ್ತಷ್ಟು ಅವಾಕ್ಕಾದ-ಈಗಂತೂ ಅನುಮಾನವೇ ಇರಲಿಲ್ಲ. ಈ ಮಾಲು ತಮ್ಮದೇ ಆಗಿತ್ತು. ವಿಶು ತಡೆಯಲಾಗದೇ ಕೇಳಿಯೇಬಿಟ್ಟ, ''ಇವೆಲ್ಲಾ ನಿನಗೆ ಎಲ್ಲಿ ಸಿಕ್ಕಿತು?'' ''ನಿಮಗೆ ಆ ವಿವರಗಳೆಲ್ಲಾ ಯಾಕೆ? ಈ ಮಾಲು ಬೇಕಾದ್ರೆ ಹೇಳಿ. ಕಡೇದಾಗಿ ನಾಲ್ಕು ಸಾವಿರದ ಐದು ನೂರಕ್ಕೆ ಕೊಡ್ತೀನಿ. ಹೇಳಿ...''

ವಿಶು ಅವನತ್ತ ನೋಡಿ, ಸ್ವಲ್ಪ ಹೊತ್ತಿನ ನಂತರ ಬರುವುದಾಗಿ ಹೇಳಿದ. ಮನೆಗೆ ಹೋಗಬೇಕೋ ಅಥವಾ ಠಾಣೆಯ ಕಡೆಗೆ ಹೋಗ ಬೇಕೋ ತೋಚದೇ ಪಾದಗಳನ್ನ ಎಳೆದುಕೊಳ್ಳುತ್ತ ಆ ಕೊಳಗೇರಿಯಿಂದ ಹೊರಕ್ಕೆ ಬಂದ. ಅವನನ್ನು ಆ ಗಂಡು ಬೆನ್ನಟ್ಟಿ ಬಂದ ''ಸರ್ ನನ್ನ ಹತ್ತಿರ ಇಷ್ಟೇ ಅಲ್ಲ ಇನ್ನೂ ತುಂಬಾ ಮಾಲಿದೆ-ವಿ.ಸಿ.ಆರ್, ಸಿ.ಡಿಗಳು, ಬೇರೆ ಬೇರೆ ಎಲೆಕ್ಟ್ರಾನಿಕ್ ಸಾಮಾನುಗಳಿವೆ. ಒಂದ್ಸರ್ತಿ ಬಂದು ನೋಡಿ. ಖಂಡಿತವಾಗಿ ಒಳ್ಳೇ ಬೆಲೆಗೆ ಎಲ್ಲಾನೂ ಕೊಡ್ತೀನಿ...''





ಮಗ ಅರ್ಜುನ್ ಜೊತೆ ಶ್ರೀರಾಮ್

ನನ್ನ ಪಾಲಿಗೆ ಕಥೆ ಎಂದರೆ......
ಕಾದಂಬರಿ ಬರೆಯಲು ಕೈಲಾಗದೇ
ಸೋಮಾರಿಯಾಗಿ ಕೂತ ನನ್ನಂಥವರಿಗೆ
ಸಿಕ್ಕಿರುವ ಅದ್ಭುತ ಸಾಧ್ಯತೆ.




ಅವಳು, ಗಂಡನಿಂದ ದೂರ ಇರುವ ಎರಡು ಪುಟ್ಟ ಮಕ್ಕಳ ತಾಯಿ. ಅವನು, ಹೆಂಡತಿಯನ್ನ ಕಳೆದುಕೊಂಡಿರುವ ಒಂಟಿ ಆರ್ಕಿಟೆಕ್ಟ್. ಪರಿಚಯ ಸ್ನೇಹವಾಗಿ, ಪ್ರೀತಿಯ ಹದಕ್ಕೆ ತಿರುಗುತ್ತದೆ. ಅವಳೊಮ್ಮೆ ಸಣ್ಣ ಕಾರಣವೊಂದನ್ನು ದೊಡ್ಡದಾಗಿಸಿ ಅವನ ಮೇಲೆ ಉರಿದುಬೀಳುತ್ತಾಳೆ. ಆದರೆ ಅವನಿಗೆ ಅವಳಿಂದ ದೂರಾಗಲು ಸಾಧ್ಯವಾಗದೇ ಸಹಿಸಿಕೊಳ್ಳುತ್ತಾನೆ. ಅವನು ಸಂಯಮದಿಂದಿದ್ದರೂ ಅವಳೇ ಬಲವಂತವಾಗಿ ಅವನೊಡನೆ ಮಲಗುತ್ತಾಳೆ. ಮಿಲನದ ಮರುಕ್ಷಣವೇ ತನ್ನನ್ನು ಹಾಳು ಮಾಡಿದ ಎಂದು ಅವನನ್ನೇ ಆಪಾದಿಸುತ್ತಾಳೆ. ಅವನು ದೂರಾಗಲು ಸಾಧ್ಯವಾಗದೇ ಸಹಿಸಿಕೊಳ್ಳುತ್ತಾನೆ. 'ಆ' ಅಂದರೂ ತಪ್ಪು, 'ಊ' ಅಂದರೂ ತಪ್ಪು ಎಂಬಂತೆ ಸಿಕ್ಕಿಸಿ ಜಗಳ ಕಾಯುತ್ತಾಳೆ... ಆತ್ಮಹತ್ಯೆ ಮಾಡಿಕೋತೀನಿ ಅಂತಾಳೆ. ಇವನು ದೂರಾಗಲು ಸಾಧ್ಯವಾಗದೇ ಸಹಿಸಿಕೊಳ್ಳುತ್ತಾನೆ. ಜಗಳಾಡಿದ ನಂತರ, ಅವಳು ಮೆದುವಾದ ತಕ್ಷಣ, ಇವನು, ಅವಳನ್ನ ಕ್ಷಮಿಸಿಬಿಡುತ್ತಾನೆ. ಅವಳು ಒಮ್ಮೆ ಕೋಪದಿಂದ, ಎಂಜಲುಗೈಯಲ್ಲೇ ಅವನ ಕಪಾಳಕ್ಕೆ ಬಾರಿಸುತ್ತಾಳೆ. ಅವನು ಸುಮ್ಮನೇ ಕೂರುತ್ತಾನೆ. ವಾರದ ನಂತರ ಬಂದು, ಅವಳು ಕ್ಷಮಿಸೆಂದ ತಕ್ಷಣ ಕ್ಷಮಿಸಿಬಿಡುತ್ತಾನೆ. ಮತ್ತೊಮ್ಮೆ ಅವಳು, ಊಟ ಮಾಡುತ್ತಲೇ ಜಗಳ ಆರಂಭಿಸಿ, ಸಾರು, ಮಜ್ಜಿಗೆಗಳನ್ನೆಲ್ಲಾ ಅವನ ತಲೆಯ ಮೇಲೇ ಸುರೀತಾಳೆ... ಆದರೂ ಅವನು ಎದ್ದುಹೋಗಿ ಶವರ್ ಕೆಳಗೆ ನಿಲ್ಲುತ್ತಾನೆ ವಿನಃ ಅವಳನ್ನು ದಂಡಿಸುವುದಿಲ್ಲ. 'ಏನಾದರೂ ನೀನು ಆತ್ಮಹತ್ಯೆ ಮಾತ್ರ ಮಾಡಿಕಾಬಾರದು' ಅಂತ ಭಾಷೆ ಕೇಳುತ್ತಾನೆ. ಮತ್ತೊಮ್ಮೆ ಅವಳು ಮಿತಿಮೀರಿ ಚಪ್ಪಲಿಯಿಂದ ಕೆನ್ನೆಗೆ ಬಾರಿಸುತ್ತಾಳೆ... ಅವನು ಮಗುವಿನಂತೆ ಮನೆಗೆ ಹೋಗುತ್ತಾನೆ... ಇಷ್ಟಲ್ಲದೆ ಅವಳ ಮಾತುಗಳು ಇವೆಲ್ಲಕ್ಕಿಂತಲೂ ಹರಿತವಾಗಿ ಹಿಂಸಿಸುವಂತಹವು. ಅವನು ಅವನ್ನೂ ಸಹಿಸಿಕೋತಾನೆ..... ಯಾಕೆಂದರೆ ಅವನು ಅವಳನ್ನು ಪ್ರೀತಿಸುತ್ತಿರುತ್ತಾನೆ!

ಹಾಗೆಲ್ಲಾ ಮಾಡಲು ಅವಳಿಗೆ ಅವಳ ಕಾರಣಗಳು ಇರಬಹುದು... ಹಾಗೆ ನೋಡಿದರೆ, ಪ್ರತಿಯೊಬ್ಬರ ತಪ್ಪು ನಡವಳಿಕೆಗೂ ಕಾರಣಗಳಿರುತ್ತವೆ. ಆದರೆ ಅವನು ಅವಳಿಂದ ದೂರಾಗುವ ಸುಲಭದ ದಾರಿಯನ್ನು ಮುಚ್ಚಿ, ಎಲ್ಲವನ್ನೂ ಸಹಿಸಿಕೊಳ್ಳುತ್ತಾ, ಅವಳು ತಾನಾಗೇ ಶಾಂತಳಾಗುವುದಕ್ಕಾಗಿ ಸಂಯಮದಿಂದ ಕಾಯುತ್ತಾನೆ.

ಆತ, ಎಸ್.ಎಲ್. ಭೈರಪ್ಪನವರ 'ಅಂಚು' ಕಾದಂಬರಿಯ ಕಥಾನಾಯಕ ಸೋಮಶೇಖರ್... 'ಸೋಮು'. ಪ್ರೀತಿಸೋದು-ಇಡಿಯಾಗಿ ಪ್ರೀತಿಸೋದು, ನಿಜವಾಗಿ ಪ್ರೀತಿಸೋದು ಅಥವಾ ಬರೀ ಪ್ರೀತಿಸೋದು-ಅಂದಾಗೆಲ್ಲ ನನಗೆ ನೆನಪಾಗುವವನು ಸೋಮು; ರೋಮಿಯೋ-ಜೂಲಿಯೆಟ್, ಷೇಕ್ಸ್‌ಪಿಯರ್, ರವಿಚಂದ್ರನ್, ರಾಜ್ ಕಪೂರ್ ಅಲ್ಲ! ಪ್ರೀತಿಸುವುದಾದರೆ ಸೋಮುವಿನಂತೆ ಪ್ರೀತಿಸಬೇಕು!.... ಪ್ರೀತಿಸುವುದಾದರೆ ಸೋಮುವಿನಂಥ ಜೀವಿಯನ್ನು ಪ್ರೀತಿಸಬೇಕು! ದಿನಕ್ಕೆ ಹಲವು ಸಲ ಮುರಿದುಹೋಗುವ ನಮ್ಮ ಸುತ್ತಲಿನ ಸಂಬಂಧಗಳು, ಪ್ರತೀಸಲವೂ ಸೋಮುವನ್ನು ನೆನಪಿಸುತ್ತವೆ, ನನಗೆ. ಅಥವಾ ಪ್ರತೀಸಲ ಸಂಬಂಧವೊಂದನ್ನು ಮುರಿಯಲೇಬೇಕಾದ ತೀವ್ರಕ್ಷಣವೊಂದನ್ನು ಸ್ವಲ್ಪದರಲ್ಲೇ ತಪ್ಪಿಸಲೆಂಬಂತೆ ಸೋಮು ನೆನಪಾಗುತ್ತಾನೆ ಎನ್ನಲೇ?

**ಅಪಾರ,** ಹಿರಿಯೂರು



# ಬಿ. ಟಿ. ಜಾಹ್ನವಿ

# ಹುಡುಕಾಟ




ಅಪ್ಪ ಯಾಕ್ಹಿಂಗೆ? ಹೆಚ್ಚು ಮಾತಿಲ್ಲ ಕತೆಯಿಲ್ಲ. ನಗುವಂತು ಕಂಡೇ ಇಲ್ಲ. ಯಾರೊಂದಿಗೂ ಸಲಿಗೆಯಿಂದ ಇದ್ದಿದ್ದನ್ನ ನೋಡಿಲ್ಲ. ಗಂಭೀರ ಮುಖಭಾವ. ಯಾವೊಂದು ಭಾವನೆಗಳೂ ಸುಳಿವುದಿಲ್ಲ. ನೆಂಟರು, ಸ್ನೇಹಿತರು ಅಂತ ನಮ್ಮನೆಗೆ ಬಂದು ಹೋಗುವವರೂ ಒಬ್ಬರು ಇಬ್ಬರಷ್ಟೆ. ಬರುವುದಾದರೂ ಹೇಗೆ, ಮನ ಬಿಚ್ಚುವುದೇ ತಿಳಿಯದ ಶ್ರೀಮಂತಿಕೆಯ ಹಮ್ಮು ತುಳುಕುವ ಈ ಮನೆಗೆ?

ಅಪ್ಪನಿಗಿಂತಲೂ ಸೋಜಿಗ ಈ ಅಮ್ಮ. ಅವನಿಗೆ ತಕ್ಕ ಮಡದಿ. ಬಾಯಿಬಿಟ್ಟು ಅಪ್ಪ ನೆದುರು ಏನೂ ಕೇಳಿದವಳಲ್ಲ, ಹೇಳಿದವಳಲ್ಲ. ಆದರೂ ಅವನ ಊಟ, ರುಚಿ, ಹದ ಬಲ್ಲವಳು. ಬೇಕು, ಬೇಡ ತಿಳಿದವಳು. ಬೆರೆತು, ಕಲೆತು ಇರುವುದು ಆಕೆಗೂ ಬಂದಿಲ್ಲ. ಅದೇನು ಭಯವೋ, ಭಕ್ತಿಯೋ ಅರ್ಥವೇ ಆಗುವುದಿಲ್ಲ.

ನಮ್ಮ ಮನೆಯೋ ಘನಗಾಂಭೀರ್ಯದ ಬಂಗಲೆ. ಮೌನ, ನಿಶ್ಯಬ್ದ ಪ್ರಧಾನ. ನಗು,

ಮಾತು, ಆಸೆಗಳು ಪ್ರಕಟವೇ ಆಗದ ಹಾಗೆ ಅವುಗಳನ್ನ ಆವರಿಸಿ ಹೊಸಕಿತ್ತು ಗಾಂಭೀರ್ಯ. ಯಾರಾದರು ಜೋರಾಗಿ ನಕ್ಕಾಗ, ಸಂತಸದಿಂದ, ಸಲಿಗೆಯಿಂದ ಮಾತಾಡಿದಾಗ, ಮೃಷ್ಟಾನ್ನದ ಮುಂದೆ ನಿಂತ ಭಿಕಾರಿ ಮನಸ್ಥಿತಿ ನಮ್ಮದು. ಆವಾಗೆಲ್ಲ ನಮ್ಮ ಬಗ್ಗೆ, ಮನೆ ಬಗ್ಗೆ ಜಿಗುಪ್ಸೆ ಹುಟ್ಟುತ್ತಿತ್ತು. ಇದೂ ಒಂದು ಜೀವನವೆ ಎನಿಸುತ್ತಿತ್ತು.

ನಾನು ಪಿ.ಯು.ಸಿ. ಮುಗಿಸಿ, ಡಿಗ್ರಿ ಪ್ರವೇಶಿಸಿದಾಗ ಒಮ್ಮೆ ಅಮ್ಮನನ್ನು ಕೇಳುವ ಧೈರ್ಯ ಮಾಡಿದೆ. ''ಇದ್ಯಾಕೆ ಹೀಗೆ? ನಿನಗೂ ಏನೂ ಅನ್ನಿಸೋಲ್ವೆ? ಈ ಮನುಷ್ಯನ್ಯಾಕೆ ಹೀಗೆ? ಅದ್ಯಾಕೆ ಈತ ಎಲ್ಲರಂತಿಲ್ಲ...?''

''ಎಲ್ಲರೂ ಹಾಗಿದ್ದು ಬಿಟ್ಟರೆ, ಈ ಮನುಷ್ಯ ಈ ಮನುಷ್ಯನಾಗಿರೋಲ್ಲ. ತನ್ನ ವ್ಯಕ್ತಿತ್ವ ಮೀರಿ ನಡ್ಕೊಂಡ್ರೆ, ಅವರಲ್ಲಿ ಜೀವಂತಿಕೆ ಇರಲ್ಲ. ಯಾರು ಯಾರಾಗಿ ಇರ್ಬೇಕೋ ಹಾಗಿದ್ರೇನೆ ಸರಿ. ಇನ್ಯಾರೋ ಆಗುವ ಪ್ರಯತ್ನ ಸಲ್ಲ'' ಎಂದುಬಿಟ್ಟಳು. ಆಕೆ ಇಷ್ಟೊಂದು ಮಾತಾಡಬಲ್ಲಳು ಅಂತ ತಿಳಿದಿದ್ದೇ ಅಂದು. ''ಯಾರೊಡನೆಯೂ ಮಾತಾಡ್ದೆ, ನಗ್ದೆ ಕಲ್ಲಿನ ಹಾಗಿರೋದ್ರಲ್ಲಿ ಜೀವಂತಿಕೆ ಇದೆ ಅಂತೀಯಾ...?'', ನಾನು ಬಿಡಲಿಲ್ಲ. ''ಕಲ್ಲನ್ನ ಬರೀ ಕಲ್ಲು ಅಂತ ಭಾವಿಸಿದ್ರೆ ನಿನ್ನನಿಸಿಕೆ ಸರಿ. ನೋಡು, ಕಲ್ಲನ್ನ ಮುಟ್ಟಿದಾಕ್ಷಣ ಕರಗಿ ಹೋಗ್ಬಿಟ್ರೆ, ಇಲ್ಲ ಕೈಗೆಲ್ಲ ಮೆತ್ಕೊಂಡ್ರೆ ನೀನು ಅದನ್ನ ಏನಂತಿ?'', ಕೇಳಿದ್ಲು ಅಮ್ಮ.

''ಏನಂತೀವಿ, ಅದು ಕಲ್ಲಲ್ಲ ಬೇರೆ ಅಂತ'' ಅಂದೆ. ''ಯಾಕೆ?''

''ಅಲ್ಲಮ್ಮ, ಕಲ್ಲು ಕರಗೋದಾಗ್ಲಿ, ಮೆತ್ಕೊಳ್ಳೋದಾಗ್ಲಿ ಸಾಧ್ಯವೆ ಇಲ್ವಲ್ಲ. ತನ್ನ ಗುಣಾನ ಕಳ್ಕೊಂಡ್ಮೇಲೆ ಅದು ಕಲ್ಲಾಗಿ ಉಳಿಯೋದಿಲ್ಲ ಅಲ್ವಾ....?''

''ಯಾಕೆ? ಯಾಕಿಲ್ಲ...?'', ಅಮ್ಮನೂ ಬಿಡಲಿಲ್ಲ. ''ಯಾಕೆಂದ್ರೆ, ಅದು ತನ್ನ ನೈಜತೇನ ಕಳ್ಕೊಂಡ್ಬಿಡುತ್ತೆ. ಪ್ರತಿಯೊಂದು ವಸ್ತುಗೂ ಅದರದೇ ಆದ ಗುಣ, ಸ್ವರೂಪ, ಮೌಲ್ಯ ಇರುತ್ತೆ. ಅದನ್ನ ಹೊರತುಪಡಿಸಿದ್ರೆ ಜೀವಂತ ಅನ್ನಿಸೋಲ್ವೆ...''

''ಹಾಗೇನೇಮ್ಮ, ನನ್ನ ಗಂಡನ ನೈಜತೆ ಇರೋದು ಅವರ ಗಾಂಭೀರ್ಯದಲ್ಲಿ. ನೀವುಗಳೆಲ್ಲ ಇದೆ ಅಂತ ಭಾವಿಸಿರುವ ಆ ಅಹಂನಲ್ಲಿ...'' ನಾನು ಮುಖ ಸೊಟ್ಟಗೆ ಮಾಡಿದೆ. ನಿಮ್ಮಪ್ಪ ಅನ್ನಬಹುದಿತ್ತು, ಅಮ್ಮ. ನನ್ನ ಗಂಡ ಅಂತ ಒತ್ತಿ ಹೇಳಿದ್ದಳು. ಇನ್ನು ಈಕೆಯೊಡನೆ ಅಕ್ಕರಾಸ್ಥೆಯಿಂದ ಇದ್ದಿದ್ದರೆ ಹೇಗೋ... ಎನಿಸಿತು. ಆಕೆಗದು ತಿಳಿಯಿತೋ ಎಂಬಂತೆ ''ಕೆಲವು ಸಂಬಂಧಗಳೇ ಹಾಗೆ. ನೋಟಕ್ಕೆ ನಿಲುಕುವುದೇ ಬೇರೆ ನಿಲುಕದ್ದು ಬೇರೆ. ಸಂಬಂಧಿಸಿದವರಿಗೆ ಮಾತ್ರ ಅರ್ಥ ಆಗುವಂಥದ್ದು...'' ಅಂದು ಸುಮ್ಮನಾಗಿಬಿಟ್ಟಳು.

ಎಷ್ಟಾದರೂ ಗಂಡನನ್ನು ಬಿಟ್ಟುಕೊಡುವವಳಲ್ಲ. ಅವನ ಆಶ್ರಯವೇ ಗತಿ ಅಂದಮೇಲೆ, ಎದುರಿಸುವ ಶಕ್ತಿ ಎಲ್ಲಿಯದು? ಪಾಲಿಗೆ ಬಂದದ್ದು ಪಂಚಾಮೃತ ಎಂಬಂತೆ ಇನ್ನಿಲ್ಲದ ಗೌರವಾದರಗಳು. ಛೆ! ಈಕೆಗೆ ಸ್ವಂತಿಕೆಯೇ ಇಲ್ಲ, ವ್ಯಕ್ತಿತ್ವವೇ ಇಲ್ಲ ಎನಿಸಿ ಕೆಲವೊಮ್ಮೆ ಬೇಸರ ಉಂಟಾಗುತ್ತಿತ್ತು. ಆಕೆ ಸ್ವಲ್ಪ ಜೋರಿದ್ದಿದ್ದರೆ, ಮಾತನಾಡುತ್ತಿದ್ದರೆ ನಾವೂ ಹೀಗಿರುತ್ತಿರಲಿಲ್ಲ ಹೇಳಿದ್ದಕ್ಕೆಲ್ಲ ಗೋಣು ಹಾಕುವುದಕ್ಕಷ್ಟೆ ಸೀಮಿತರಾಗಿ. ಅಪ್ಪನೆದುರು ಮಾತೇ ಬಾರದು. ಧೈರ್ಯಕ್ಕೆ ಅವನೆದುರು ಜಾಗವೇ ಇಲ್ಲ. ಅದಕ್ಕೆಂದೆ ನನಗೂ ಸ್ನೇಹಿತರೇ ಇಲ್ಲ. ಆಸೆಯಿದ್ದೂ ಬೆರೆವುದಿಲ್ಲ. ನಾನಾಯ್ತು ಓದಾಯ್ತು. ಶ್ರೀಮಂತಿಕೆಯ ಸೊಕ್ಕೆಂದು ಎಲ್ಲರು ಮೂಗು ಮುರಿಯುತ್ತಿದ್ದರು. ಎಷ್ಟೇ ಪ್ರಯತ್ನಿಸಿದ್ರೂ, ನನ್ನ ಆಸೆಗಳು, ಭಾವನೆಗಳು ಅಪ್ಪನ ಗಾಂಭೀರ್ಯದ ಮುಷ್ಟಿಯಿಂದ ಈಚೆಗೆ ನುಸುಳಲಾರವು.

ನನ್ನ ಜೀವನಕ್ಕೆ ಹೊಸ ತಿರುವು ಬಂದಿದ್ದು, ನನ್ನ ಆಸೆಗಳೆಲ್ಲ ಗರಿಗೆದರಿದ್ದು, ಷಣ್ಮುಖಪ್ಪ ನಮ್ಮ

ಕಾಲೇಜಿಗೆ ಹೊಸ ಉಪನ್ಯಾಸಕನಾಗಿ ನೇಮಕಗೊಂಡಾಗ. ಅವನೊರ್ವ ಸಂಘಜೀವಿ, ಸ್ನೇಹಜೀವಿ. ಬರೀ ಪತ್ರಕ್ಕೆ ಪಾಠಕ್ಕಷ್ಟೆ ತನ್ನನ್ನ ಮಿತಿಗೊಳಿಸಲಿಲ್ಲ. ಎಲ್ಲರ ಸಮಸ್ಯೆಗಳನ್ನ, ಕಷ್ಟನಷ್ಟಗಳನ್ನ ಕೇಳಿಸಿಕೊಳ್ಳುವುದು, ವಿಚಾರಿಸುವುದು ತನ್ನ ಕೈಲಾದ ಉಪಶಮನ ನೀಡುವುದು ಇತ್ತು. ನನ್ನ ಸುತ್ತ, ನಾನೇ ಹೆಣೆದಿದ್ದ ಬಲೆಯಿಂದ ನನ್ನ ಬಿಡಿಸಿ, ಹೊರತಂದ. ನಾವಿಬ್ಬರು ಪರಸ್ಪರ ಆಕರ್ಷಿತರಾಗಿ, ನಮ್ಮ ವೈಯಕ್ತಿಕ ವಿಷಯಗಳನ್ನೆಲ್ಲ ಚರ್ಚಿಸುವಂತಾದಾಗ ಹೇಳಿದ್ದ.

''ನೋಡಮ್ಮ ಹಸಿವು ಅಂದ್ರೆ ನಿನ್ಗೆ ಗೊತ್ತಾ? ಕಷ್ಟ ಅಂದ್ರೆ ಗೊತ್ತಾ? ಕೂಲಿಯವರು ಬೇಯಿಸಿದ್ದನ್ನ ಹೊತ್ತೊತ್ತಿಗೆ ತಿನ್ನೋ ನಿಮ್ಗೆ ಅದರ ಕಲ್ಪನೆಯೂ ಇರಲಾರ್ದು. ಆದರೆ ನಾವು, ಹಸಿವಲ್ಲೆ ಹುಟ್ಟಿ, ಹಸಿವನ್ನೆ ಉಣ್ಣುತ್ತ ಬೆಳೆದವರು. ಎಂಟು ಮಕ್ಕಳನ್ನ ಹುಟ್ಟಿಸಿ ಅಷ್ಟಕ್ಕೇ ಸತ್ತ ಅಪ್ಪ, ಅಮ್ಮ ಜೀತ ಮಾಡಿದ್ಲು. ಹಸಿವು ತಾಳಲಾರದೆ ಕೆಲವೊಮ್ಮೆ ಕೂಸನ್ನೆತ್ಕೊಂಡು ಭಿಕ್ಷೆಗೆ ಹೋಗ್ತಿದ್ದೆ ನಾನು. ಸಿಕ್ಕಿದ್ದನ್ನು ಎಲ್ರೂ ಹಂಚಿ ತಿಂದರೆ ಅಷ್ಟೆ ಖುಷಿ. ಕೂಲಿ ಮಾಡೋದು, ಭಿಕ್ಷೆ ಎತ್ತೋದು, ತಮ್ಮ ತಂಗಿಯರನ್ನ ನೋಡುವುದು, ಹಸಿವಾದಾಗ ಅನ್ನ ಹೊಂಚುವುದು, ಇದೆಲ್ಲದರ ನಡುವೆಯೂ ಓದಬೇಕೆಂಬ ಅದಮ್ಯ ಆಸೆ. ಅಷ್ಟೆ. ನಮ್ಮೂರ ಮೇಷ್ಟ್ರು ಮನಸ್ಸು ಮಾಡಿ, ಅಕ್ಷರ ಕಲಿಯತೊಡಗಿದೆ. ಅದೂ ಎಲ್ಲಾ ಮುಗಿದು ವೇಳೆ, ಎನರ್ಜಿ ಮಿಕ್ಕಿದ್ದರೆ ಮಾತ್ರ. ಮೇಷ್ಟ್ರ ಸಹಾಯಕ್ಕೆ ಬದಲಾಗಿ ಅವರ ಮನೆಕೆಲಸ ಮಾಡಿಕೊಟ್ಟೆ. ನನ್ನ ಶ್ರದ್ಧೆ, ಸ್ವಾಭಿಮಾನ ಮೆಚ್ಚಿದ ಮೇಷ್ಟ್ರು ನನ್ನ ಕೈಬಿಡಲಿಲ್ಲ. ಈ ಜಂಜಾಟದ ನಡುವೆಯೂ ನಾನೊರ್ವ ಉಪನ್ಯಾಸಕನಾಗಿ ರೂಪುಗೊಂಡದ್ದು ರೋಚಕ ಅನುಭವ. ನನ್ನ ಕಾಲಮೇಲೆ ನಾನು ನಿಲ್ಲುವುದು, ನನ್ನ ಕುಟುಂಬಕ್ಕೆ ರಕ್ಷಣೆ ನೀಡುವುದು ಜೀವನದ ಮುಖ್ಯ ಉದ್ದೇಶ. ಹುಟ್ಟಿನಿಂದ ಇಂದಿನವರೆಗೂ ಬದುಕಿನೊಂದಿಗೆ ನನ್ನದು ನಿರಂತರ ಹೋರಾಟ...''

ನನ್ನ ಬದುಕಿಗೂ, ಅವನ ಬದುಕಿಗೂ ಹೋಲಿಸಲಾಗದ ಅಂತರ. ಆದರೂ ಇಬ್ಬರೂ ಒಂದಾಗಲು ತೀರ್ಮಾನಿಸಿದೆವು. ನನ್ನ ಈವರೆಗಿನ ಹುಡುಕಾಟಕ್ಕೆ ಅಂತ್ಯ, ಷಣ್ಮುಖಪ್ಪ. ಬದುಕಿನ ಎಲ್ಲ ಸ್ತರಗಳನ್ನು ಬಲ್ಲ ಅವನೇ ನನ್ನ ಬದುಕಿನ ಅರ್ಥ ಅನಿಸಿದಾಗ ಮದುವೆ ಬಗ್ಗೆ ಯೋಚಿಸಿದೆವು.

ಅಪ್ಪನಿಗೆ ನನ್ನ ನಿರ್ಧಾರ ಅನುಮಾನಿಸುತ್ತಲೇ ತಿಳಿಸಿದೆ. ಅನಾಹುತಗಳೇ ಜರುಗಬಹುದೆಂಬ ಆತಂಕವೂ ಇತ್ತು. ಆದರೆ ಅಪ್ಪ ತಣ್ಣಗೇ ಇದ್ದ. ''ನೋಡು, ಅತಿ ಬಡತನದಿಂದ ಮೇಲೆ ಬಂದ ಬಹಳ ಮಂದಿ, ಆ ಸ್ಥಿತಿಯಿಂದ ಹೊರಬಂದರೂ ಅವರೊಳಗೆ ಕಾಂಪ್ಲೆಕ್ಸ್ ಉಳ್ಕೊಂಡ್ಬಿಟ್ಟಿರುತ್ತೆ. ಅತಿಯಾದ ಇನ್‌ಫಿರಿಯಾರಿಟಿ ಅಥ್ವಾ ಸುಪೀರಿಯಾರಿಟಿ. ಇಲ್ಲಾ ಎರಡೂ ಇಟ್ಕೊಂಡು ಒದ್ದಾಡ್ತಿರ್ತಾರೆ. ಬಡತನ ಕಂಡು, ಉಂಡವರಿಗೆ ಹಣ, ಅಧಿಕಾರ ಬಂದರೆ ಬೇಗನೆ ಅದರ ಪ್ರಭಾವಕ್ಕೆ ಒಳಗಾಗ್ತಾರೆ. ಎಲ್ಲವನ್ನ ಮರ್ತುಬಿಡುವ ಅವಕಾಶಗಳೇ ಹೆಚ್ಚು. ಹಾಗಾಗದ ಹಾಗೆ ನೋಡ್ಕೋ. ಏನೋ ಆದರ್ಶ ಇಟ್ಕೊಂಡು ಮದ್ವೆ ಆಗ್ತಿದ್ರಿ, ಒಳ್ಳೇದಾಗ್ಲಿ...'' ಜ್ವಾಲಾಮುಖಿ ಬಾಯ್ತೆರ್ದು ಬರ್ಫ್‌ನ್ನ ಉಗುಳಿದಂತೆ ಪಿಚ್ಚೆನಿಸಿತ್ತು, ಒಂದು ಕ್ಷಣ. ನನ್ನೊಳಗಿನ ಕಹಿಯನ್ನೆಲ್ಲ ಕಾರಲು, ಪ್ರತಿಭಟಿಸಲು ಕಾತರಳಾಗಿ ಕಾದಿದ್ದೆ, ಅವನ ಪ್ರತಿರೋಧಕ್ಕೆ. ಸಂಬಂಧ ಪೂರ್ಣ ತೊರೆಯಬೇಕೆಂದಿದ್ದೆ. ಆದರೆ ತಕರಾರೇ ಮಾಡದೆ ಮತ್ತೆ ಅಪ್ಪ ತನ್ನ ಗೆಲುವು ಸಾಧಿಸಿದ್ದ. ವಿಷ್ಯ ಕೇಳಿ ಷಣ್ಮುಖಪ್ಪನೂ ಸಂಭ್ರಮಪಟ್ಟ.

ಆದರದು ಕ್ಷಣಿಕ. ಮದುವೆಯ ದಿನದಂದೆ ಶುರುವಾಯ್ತು ತಿಕ್ಕಾಟ. ಷಣ್ಮುಖಪ್ಪ ನಮ್ಮವರ ಪ್ರತಿಯೊಂದು ನಡೆ, ನುಡಿಯಲ್ಲೂ ತಪ್ಪೆಣಿಸತೊಡಗಿದ. ತನ್ನ ಬಳಗವನ್ನ ನಿರ್ಲಕ್ಷಿಸುತ್ತಿರುವ ಆರೋಪ ಹೊರಿಸಿದ. ಅಪ್ಪನ ಸ್ವಭಾವ ತಿಳಿದದ್ದೆ. ಆದರೆ ಅಮ್ಮ, ನನ್ನ ನಿರೀಕ್ಷೆಗೆ ಮೀರಿ ಅವರೊಡನೆ ನಕ್ಕು, ಮಾತಾಡಿ ಉಪಚರಿಸುತ್ತಿದ್ದಳು. ಅವನನ್ನು



ಸಮಾಧಾನಪಡಿಸುವಲ್ಲಿ ಸಾಕಾಗಿಹೋಯ್ತು. ಮದುವೆ ಮುಗಿಯುತ್ತಿದ್ದಂತೆ ಭಾ.ಆ.ಸೇ.ಯ ಪರೀಕ್ಷೆಗಳು ಪ್ರಕಟಗೊಂಡವು. ಅವನ ಓದಿಗೆ ಅಡ್ಡಿಯಾಗಬಾರದು, ಭಂಗಬರಬಾರದೆಂಬ ಉದ್ದೇಶಕ್ಕೆ ನಾನು ಅಪ್ಪನ ಮನೆಯಲ್ಲೆ ಉಳಿದೆ. ಮತ್ತೆ ತಿಕ್ಕಾಟ. ಅಪ್ಪ, ಷಣ್ಮುಖಪ್ಪನೊಡನೆಯೂ ಅದೇ ಬಿಗು. ಮಾತಿಲ್ಲ ಉಪಚಾರವಿಲ್ಲ. ನನಗದು ಅಭ್ಯಾಸ, ಆದರೆ ಇವನು ಅಸಹನೆಯಿಂದ ಕುದಿಯಹತ್ತಿದ. ''ನಾನು ಬಡವನೆಂದು ತಿರಸ್ಕಾರ ನಿಮ್ಮಪ್ಪನಿಗೆ...'' ಎನ್ನುತ್ತಿದ್ದ. ''ಅವನು ಹಾಗೇರಿ. ಅವನನ್ನ ಹಾಗೆ ಒಪ್ಕೊಂಡ್ಬಿಡಿ...'', ನನ್ನ ಗೋಗರೆತ. ''ಏನು ಒಪ್ಪಿಕೊಳ್ಳುವುದು, ಅವನೇನು ಪಾಳೇಗಾರ್ನೋ... ಹಣದ ಮದ. ಸೌಜನ್ಯ ಗೊತ್ತಿಲ್ಲದ ದುರಹಂಕಾರಿ. ಕಾರು, ಬಂಗಲೆ ಇರದೆ ಇರಬಹುದು, ಆದರೆ ನಮ್ಮಲ್ಲಿ ನೆಮ್ಮದಿ ಇದೆ. ಆತ್ಮಗೌರವ ಇದೆ. ಕಾಲ ಒಂದೇ ಸಮ ಇರೋಲ್ಲ. ನಿಮ್ಮಪ್ಪನಿಗೆ ಹೇಳು...'' ಇದು ದಿನನಿತ್ಯದ ಗೋಳಾಟವಾಯ್ತು.

ನನ್ನ ಒಂಟಿ ಜೀವನದ ಮುಂದುವರಿದ ಭಾಗ ವೈವಾಹಿಕ ಜೀವನ ಅಂತ ತಿಳಿದಾಗ ತಡವಾಗಿತ್ತು. ಷಣ್ಮುಖಪ್ಪ ಜಿಲ್ಲಾಧಿಕಾರಿಯಾಗಿದ್ದ. ಅಧಿಕಾರದ ದಾಹ, ಮದಕ್ಕೆ ಸಿಕ್ಕು ಮನುಷ್ಯತ್ವ ಕಳ್ಕೊಂಡಿದ್ದ. ಅಧಿಕಾರ ಅವನನ್ನ ಎಷ್ಟರಮಟ್ಟಿಗೆ ಆವರಿಸಿತ್ತೆಂದರೆ ನಗು ಮರೆತ. ಮಾತು ಮರೆತ. ನಾನು ನಗುವುದನ್ನ, ಮಾತಾಡುವುದನ್ನೂ ಸಹಿಸದಾದ. ಎಲ್ಲರೊಡನೆ ನಕ್ಕು ಬೆರೆಯುವುದು ತನ್ನ ಘನತೆಗೆ ಕುಂದೆಂದೆಣಿಸಿದ. ಸ್ನೇಹ ಸಂಪರ್ಕ ತನ್ನ ಸರಿಸಮಾನರೊಡನೆ ಮಾತ್ರ. ದುರಂತವೆಂದರೆ, ತನ್ನ ಮೂಲವನ್ನೆ ಮರೆತದ್ದು. ಯಾವ ಸ್ಥಿತಿಯಿಂದ ಮೇಲೆ ಬಂದಿದ್ದನೋ ಅದನ್ನು ಅವನೇ ಅವಮಾನಿಸಿದ್ದು. ತನ್ನ ಹುಟ್ಟಿನ ಬಗ್ಗೆ, ಹೋರಾಟದ ಬಗ್ಗೆ ಗೌರವ ಕಳೆದುಕೊಂಡದ್ದು.

ಒಂದು ಬೆಳಗು, ಎಂದಿನಂತೆ ಆಫೀಸಿಗೆ ಹೊರಟು ನಿಂತವನನ್ನು ಚಿಕ್ಕ ಕೂಸೊಂದನ್ನು ಎತ್ತಿಕೊಂಡು ಓಡಿಬಂದ ಬಾಲಕನೊಬ್ಬ ಅಡ್ಡಗಟ್ಟಿ, ಕಾಲ್ಹಿಡಿದು, ಹಣಕ್ಕೆ ಪೀಡಿಸಿದ. ''ಥೂ ದರಿದ್ರವೇ! ನನ್ನ ಮುಟ್ಟುವಷ್ಟು ಸೊಕ್ಕ ನಿಂಗೆ...? ಬಿಟ್ಟಿ ಸಿಗುತ್ತೇಂತ ಭಿಕ್ಷೆ ಬೇಡ್ತಿಯೇನ್ಲೆ? ಪೊಲೀಸ್ ಕರ್ಸಿ ಒಳಗಾಕಿಸ್ತಿನಿ, ದರಿದ್ರ ನನ್ಮಕ್ಳು'' ಎಂದವನೇ ಕಾಲಲ್ಲಿ ಅವರನ್ನ ಜಾಡಿಸಿಬಿಟ್ಟ. ಎರಡೂ ಮಕ್ಕಳು ಹಾರಿ ಬಿದ್ದು ಅಳತೊಡಗಿದವು. ಕಾರು ಮುಂದೆ ಹೋಯ್ತು. ಅಪ್ಪ ಮದುವೆಗು ಮುನ್ನ ಹೇಳಿದ ಮಾತು, ಸಾಕ್ಷಾತ್ಕರಿಸಿತ್ತು.

ನಾನು ಫೋನೆತ್ತಿಕೊಂಡೆ. ಅತ್ತಲಿಂದ ಜಿಲ್ಲಾಧಿಕಾರಿಗಳ ದನಿ ಕೇಳಿಸಿತು. "ಆಫೀಸಿಗೆ ಫೋನ್ ಮಾಡಿ ಮಾತಾಡುವ ಅಗತ್ಯ ವೇನಿತ್ತು?" ಎಂದವ ಸ್ವಲ್ಪ ಹೊತ್ತು ಹಾರಾಡಿದ. ನಾನು ತಣ್ಣಗೆ ಹೇಳಿದೆ. "ಸುಮ್ಮನೆ ಕೇಳಿಸಿಕೋ ನಾನು ಹೇಳುವುದನ್ನ. ಬೆಳಗಿನ ಘಟನೆ ನನ್ನ ನೋಯಿಸಿದೆ. ನನ್ನ ಕಣ್ತೆರೆಸಿದೆ. ಇಷ್ಟೆ ಅಲ್ಲ, ನನ್ನ ಬದುಕಿನ ಗತಿ ಈ ತಿರುವು ತಗೊಂಡಿದ್ದೆ ನನಗೆ ಆಘಾತ. ಸಹಿಸಿದ್ದೆ ಇಷ್ಟರವರೆಗೆ, ಏನೋ ನಿರೀಕ್ಷೆಯಿಂದ. ಆ ಮಕ್ಕಳು ಒಂದೇ ಒಂದು ಕ್ಷಣವಾದರೂ ನಿನ್ನ, ನಿನ್ನ ತಂಗಿಯ, ತಮ್ಮನ ಪ್ರತಿರೂಪವಾಗಿ ನಿನಗೆ ಕಾಡದೇ ಹೋದದ್ದು ವಿಪರ್ಯಾಸ. ಮೇಷ್ಟ್ರಾಗಿ ಸ್ನೇಹಜೀವಿ ಆದ ಷಣ್ಮುಖಪ್ಪ, ಎಲ್ಲಾ ನವುರು ಕಳಕೊಂಡು ಅಧಿಕಾರ ಗರ ಬಡಿದ ಜಿಲ್ಲಾಧಿಕಾರಿ ಷಣ್ಮುಖಪ್ಪ ಒಂದೇ ವ್ಯಕ್ತಿಯ ಎರಡು ವಿಭಿನ್ನ ವ್ಯಕ್ತಿತ್ವ. ಹೀಗೂ ಉಂಟೇ? ಯಾರು ನೀನು? ಯಾವುದು ಸತ್ಯ? ಇದರರ್ಥ ನೀನು ಸ್ಥಿರವಲ್ಲ.

ಷಣ್ಮುಖಪ್ಪ, ನಾನು ಹಣ ಕಾಣದವಳಲ್ಲ. ದರ್ಪ, ದಬ್ಬಾಳಿಕೆಯೂ ಬಲ್ಲೆ. ನನ್ನಪ್ಪನಲ್ಲಿ ಈ ಎಲ್ಲವೂ ಇವೆ. ಆದರವು ಹುಟ್ಟಿನಿಂದಲೇ ಬಂದಂಥವು. ಆದ್ದರಿಂದಲೇ ನಿನ್ನ ಹಾಗೆ ಅಪ್ಪ, ಢೋಂಗಿ ಎನಿಸುವುದಿಲ್ಲ. ಅವನನ್ನು ಹೆಜ್ಜೆಜ್ಜೆಗೂ ಟೀಕಿಸುತ್ತಿದ್ದ ನೀನು ಏನಾಗಿಹೋಗಿದ್ದಿ ಈಗ?... ಅಧಿಕಾರದ, ಐಶ್ವರ್ಯದ ಪೊರೆ ಬಂದು ನಿನ್ನತನ ಕಳ್ಕೊಂಡಿದ್ದಿ, ಅದು ನಿನ್ನ ಗೋರಿ ತಿಳ್ಕೊ. ಅದರಲ್ಲೆ ಕೊಳೆಯುತ್ತಿ ನೀನು. ಆದರೆ ನನಗೆ ಹಾಗಾಗಲು ಇಷ್ಟವಿಲ್ಲ.

ಹುಟ್ಟಂತು ನನ್ನ ಕೈಲಿ ಇರಲಿಲ್ಲ. ಆದರೆ ಬದುಕು ನನ್ನದು. ನನಗೆ ಬೇಕಾದ ಹಾಗೆ ರೂಪಿಸಿಕೊಳ್ಳುವ ಸ್ವಾತಂತ್ರ್ಯ, ಹಕ್ಕು ನನಗಿದೆ. ಹುಟ್ಟಿನಿಂದ ಕಂಡ ಬದುಕಿಗಿಂತ ಭಿನ್ನವಾದ ಬದುಕನ್ನ ಬಯಸಿ, ನಿನ್ನ ಸಂಗಾತಿಯಾದೆ. ಷಣ್ಮುಖಪ್ಪ, ನನಗೆ ಅನ್ನಿಸಿದಾಗ ಕೇಕೆ ಹಾಕಬೇಕು, ಅಳಬೇಕು, ನಿನ್ನೊಡನೆ ಪ್ರೀತಿಸಮರ ಬೇಕು, ಅನುಭವಗಳು ಬೇಕು. ಜಿಲ್ಲಾಧಿಕಾರಿಗಳಿಗೆ ಷಣ್ಮುಖಪ್ಪನನ್ನು ಜೀವಂತವಾಗಿಡಲು ಸಾಧ್ಯವಾಗಿದ್ದರೆ... ಷಣ್ಮುಖಪ್ಪ, ನಿನ್ನ ಬದುಕು ನಿರಂತರ ಹೋರಾಟವಾಗಿದ್ದರೆ ನನ್ನದು ಹುಡುಕಾಟ. ಇದೋ ಹೊರಟೆ..." ಫೋನ್ ಬಂದ್ ಮಾಡಿದೆ.



ಒಂದು ಚಿಕ್ಕ [illegible] [illegible] [illegible] [illegible] [illegible] [illegible] [illegible] ೭೮ ಬಂದ ಬಾಲಕನೊಬ್ಬ [illegible] [illegible] [illegible] [illegible].

ಬಿ.ಟಿ. ಜಾಹ್ನವಿ






# ಹನೇಹಳ್ಳಿ ಎಂಬ ಜಗತ್ತು

ಸುಮಾರು ಇಪ್ಪತ್ತು ವರ್ಷಗಳ ಹಿಂದೆ, ಯಶವಂತ ಚಿತ್ತಾಲರ ಪರಿಚಯವಾದ ಹೊಸತರಲ್ಲಿ, ಅವರ ಜೊತೆ ಹನೇಹಳ್ಳಿಗೆ ಹೋಗುವ ಅವಕಾಶ ನನಗೆ ದೊರಕಿತ್ತು. ಆಗತಾನೇ ಅವರ ಎಲ್ಲ ಕಥೆ ಕಾದಂಬರಿಗಳನ್ನು ಓದಿದ್ದೆ. ಅವರ ಕಥನಲೋಕದ ಕೇಂದ್ರಸ್ಥಳವಾದ ಹನೇಹಳ್ಳಿಯ ಬಗ್ಗೆ, ನನ್ನದೇ ಆದ ಚಿತ್ರವೊಂದು ಮನಸ್ಸಿನಲ್ಲಿ ರೂಪುಗೊಂಡಿತ್ತು. ಅವರ ಜೊತೆ ಹನೇಹಳ್ಳಿಯನ್ನು ನೋಡುವ ಕುತೂಹಲ ಮತ್ತು ಉತ್ಸಾಹದಲ್ಲಿದ್ದೆ. ನಾವು ಸುಮಾರು ಹನ್ನೊಂದರ ಹೊತ್ತಿಗೆ ಅಲ್ಲಿ ತಲುಪಿದೆವು. ಬೇಸಿಗೆಯ ಬಿಸಿಲು, ಬೆವರು, ಧೂಳು, ಕಡೆಗಣಿಸಿ ನಮ್ಮ ಯಾತ್ರೆ ಶುರುವಾಯಿತು.

ಹನೇಹಳ್ಳಿ ಅಲ್ಲಿ ನಿಜದಲ್ಲಿ ಇತ್ತು. ಚಿತ್ತಾಲರ ಕತೆಗಳಲ್ಲಿ, ಹಸಿರು ಹೊದ್ದು ಕಂಗೊಳಿಸುವ, ಸಂಜೆಯ ಚೆಂಬೆಳಕಲ್ಲಿ ಅಪೂರ್ವ ಕಾಂತಿಯಿಂದ ಹೊಳೆಯುವ ಬೇಲಿಗಳು, ಧೂಳು ತುಂಬಿಕೊಂಡ ಜಿಗ್ಗುಗಳಾಗಿದ್ದವು. ಆಬೋಲಿನಳ ಮುಗ್ಧತೆಯ ಶೋಷಣೆಗೆ ಸಾಕ್ಷಿಯಾದ ದೇವಸ್ಥಾನ, ಪಾಳುಗುಡಿಯಂತಿತ್ತು. ಭಾರವಾದ ಹೃದಯದಿಂದ ಕೈತಾನ ಹತ್ತಿ ಬಂದ ಇಗರ್ಜಿಯ ಮೆಟ್ಟಿಲುಗಳು, ಅವನು ದುಃಖತಪ್ತ ಹೃದಯದಿಂದ ಹತ್ತಿ ಬರುವಾಗ ಅಸಂಖ್ಯವೆನಿಸುವ ಮೆಟ್ಟಿಲುಗಳು, ನಾಲ್ಕಾರೇ ಇದ್ದವು. ಧಾರಾಕಾರ ಮಳೆ ಬಂದ ರಾತ್ರಿ, ಝುಲ್ಲನೆ ಹೊಳೆವ ಮಿಂಚಿನ ಬೆಳಕಲ್ಲಿ, ಬುಡಣಸಾಬರು ಊರಿನ ಆ ಕಡೆಯಿಂದ ಈ ಕಡೆಯವರೆಗೂ ನಡೆದ ದಾರಿಯನ್ನು ನಿಮಿಷಗಳಲ್ಲಿ ಕ್ರಮಿಸಿದೆವು. ಕಥೆ ಕಾದಂಬರಿಗಳಲ್ಲಿ ಮುಖ್ಯ ರೂಪಕವಾಗಿ ಬರುವ ನಿಗೂಢ ತಿರುವುಗಳು ಮತ್ತು ತಿರುವಿನಾಚೆ 'ಧುತ್ತನೆ' ಎದುರಾಗುವ ಬೆರಗುಗಳು- ಇಲ್ಲಿ ನಿಜದಲ್ಲಿ ಸಣ್ಣ ತಿರುವಿನ ಕಾಲುದಾರಿಗಳಾಗಿದ್ದವು. ಅಗಾಧ ಸೇತುವೆಯೇನೋ ಎಂಬಂತೆ ವರ್ಣಿತವಾಗಿರುವ ಸಂಕ, ಹತ್ತು ಅಡಿ ಉದ್ದವಿತ್ತು. ಇದು ಬೊಮ್ಮಿ




ವ್ಹೋಮೂ, ಪರಮೇಶ್ವರಿ, ಉತ್ತುಮಿ, ದೇವಿ, ಪಾರೂ, ಗಿರಿಯಣ್ಣ ಓಡಾಡಿದ ನೆಲ ಎಂದು ನನಗೆ ನಾನೇ ಭಾವುಕನಾಗಿ ಹೇಳಿಕೊಂಡು, ನನ್ನ ಉತ್ಸಾಹವನ್ನು ಹೆಚ್ಚಿಸಿಕೊಳ್ಳಲು ನೋಡಿದೆ. ಅಗಾಧವಾಗಿ ಹರಿಯುವ ನದಿಯ ಮೂಲವನ್ನು ಹುಡುಕಲು ಹೊರಟು, ಅದರ ಉಗಮ ಸ್ಥಾನವನ್ನು ನೋಡಿ, ಪೆಚ್ಚಾಗಿ ನಿಂತ ಹಾಗೆ ಆಯಿತು.

ಚಿತ್ತಾಲರು ಉತ್ಸಾಹದಿಂದಿದ್ದರು. ಇದೋ ಸಂಕ, ಇದೋ ಇಗರ್ಜಿ, ಇದೇ ಬುಡಣಸಾಬರು ನಡೆದ ದಾರಿ ಎಂದು ತೋರಿಸುವಾಗ ಅವರು, ತಮ್ಮ ಕಥಾಪ್ರಪಂಚದ ಹನೇಹಳ್ಳಿಯನ್ನು ತೋರಿಸುತ್ತಿದ್ದರೇ ವಿನಃ ಕಣ್ಣೆದುರಿಗಿನ ವಾಸ್ತವದ ಹನೇಹಳ್ಳಿಯನ್ನಲ್ಲ ಎಂದು ತಿಳಿಯಲು ನನಗೆ ಕೆಲವು ಗಳಿಗೆಗಳೇ ಬೇಕಾದವು. ಒಮ್ಮೆ ಇದನ್ನು ಒಪ್ಪಿಕೊಂಡಿದ್ದೇ, ನನಗೂ ಈ ಜಗತ್ತು ಕಾಣಿಸತೊಡಗಿತು. ಗೋಟಕೀ, ದಾಸಾಳ, ಕರವೀರ, ನಿತ್ಯಪುಷ್ಪ, ಮಲ್ಲಿಗೆ, ಆಬೋಲಿ-ಎಲ್ಲವೂ ನಳನಳಿಸತೊಡಗಿದವು. ಪಾಗಾರಗಳು, ದಣಪೆಗಳು, ಸೋಗೆಯ ಮನೆಗಳು, ಅಂಗಡಿಯ ಕಟ್ಟೆಗಳು, ಅಂಗಳ, ಹಿತ್ತಿಲು, ಚಪ್ಪರಗಳು, ಕೊಟ್ಟಿಗೆಗಳು, ಚಕ್ರಖಂಡೇಶ್ವರ- ಎಲ್ಲವೂ ಕಂಡವು. ಇಡೀ ಜೀವಮಾನವನ್ನೇ, ಆ ಸ್ವಲ್ಪ ಸಮಯದಲ್ಲಿ ಕ್ರಮಿಸಿದರೇನೋ ಅನ್ನುವ ಭಾವನೆ ಕೊಡುವಂಥ ಬುಡಣಸಾಬರು ನಡೆದ ಹಾದಿ, ನನಗೂ ಮುಗಿಯದ ನಿಗೂಢ ಹಾದಿಯಾಗಿ ಕಂಡಿತು. ಆಗ ತಾನೇ ನನ್ನ ಮೊದಲ ಕತೆಯನ್ನು ಬರೆದಿದ್ದ ನನಗೆ ಇದೊಂದು ಪಾಠವಾಯಿತು. ವಾಸ್ತವವೊಂದು ಕಥಾಜಗತ್ತಾಗಿ ರೂಪತಾಳುವ, ಕಥೆಗಾರನ ಗ್ರಹಿಕೆಯಲ್ಲಿ ರೂಪಾಂತರಗೊಳ್ಳುವ ಬಗ್ಗೆ ಈ ಅನುಭವ ಬಹಳಷ್ಟು ಕಲಿಸಿತು. ಸಾಹಿತ್ಯದ ಈ ರೂಪಕಜಗತ್ತಿನ ಸಂಕೀರ್ಣತೆ ಅರಿವಾಗತೊಡಗಿತು.

ನಿಜಕ್ಕೂ ಹನೇಹಳ್ಳಿಯೊಂದು ಜಗತ್ತು. ಇಲ್ಲಿ ಎಲ್ಲವೂ ಇದೆ. ಸಾಂಸ್ಕೃತಿಕ, ಸಾಮಾಜಿಕ ಪಲ್ಲಟಗಳು, ಆಧುನಿಕತೆಯನ್ನು ಎದುರಿಸುವ ಮತ್ತು ಅದರ ಜೊತೆ ಬಾಳುವ ಅನಿವಾರ್ಯತೆಗಳು, ತಲೆಮಾರಿನ ಸಂಘರ್ಷಗಳು, ಇಂದಿನ ಮನಸ್ಸಿನ ಕಳವಳಗಳು ಮತ್ತು ತೀರದ ಅರ್ಥ ಪಿಪಾಸೆಗಳು-ಹೀಗೆ ಈ ಕಾಲದ ಅತಿ ಮುಖ್ಯ ಕಾಳಜಿಗಳನ್ನು, ಇಲ್ಲಿಯ ಪಾತ್ರ ಮತ್ತು ಸನ್ನಿವೇಶಗಳ ಮೂಲಕ ಚಿತ್ತಾಲರು ನಿರ್ವಹಿಸಿದ್ದಾರೆ. ಕಳೆದ ಐವತ್ತು ವರ್ಷಗಳಲ್ಲಿ ಅವರು, ಹನೇಹಳ್ಳಿಯೆಂಬ ಈ ಜಗತ್ತನ್ನು, ಅತ್ಯಂತ ಪ್ರೀತಿಯಿಂದ, ಕಾಳಜಿಯಿಂದ ಕಟ್ಟಿ, ಕನ್ನಡಕ್ಕೆ ಕೊಟ್ಟಿದ್ದಾರೆ. ಮುಂಬೈಯಲ್ಲಿ ಜರುಗುವ ಕಥೆಗಳ

ನಾಯಕರಿಗೂ, ಸ್ಥಿರವಾಗಿ ನಿಲ್ಲಲು ಹನೇಹಳ್ಳಿಯ ಈ ಬೇರುಗಳು ಬೇಕು. ಇದೇ ಅವರ ಭಾವಜಗತ್ತಿನ ಕೇಂದ್ರ. ಒಡೆಯದ ಲಕೋಟೆಗಳು, ಓದದೇ ಉಳಿದ ಪತ್ರಗಳು, ನಸುಕಿನಲ್ಲಿ ಬಂದು ಬಾಗಿಲು ತಟ್ಟುವ ಪಾತ್ರಗಳು, ಸಂಜೆಯ ಬಂಗಾರದ ಬಣ್ಣದ ಸಂತ ಬಿಸಿಲಿನಲ್ಲಿ ಹೊಳೆಯುವ ಮೋರೆಗಳು, ಪೊತ್ತೆ ಮೀಸೆಯ ಯಮಕಿಂಕರರು, ದುಡ್ಡಿಗೆ ಬೇಡ ಅನ್ನುವವನೇ ಈ ಕಾಲದ ನಿಜವಾದ ಹೀರೋ ಎಂದು ಸಾರುವ ಪುರುಷೋತ್ತಮರು ತಮ್ಮ ಜೀವಸ್ರೋತವನ್ನು ಇಲ್ಲಿಂದಲೇ ಪಡೆದವರು. 'ಮೂರು ದಾರಿಗಳು' ಕಾದಂಬರಿಯ ಮುಗ್ಧ ನಿರ್ಮಲೆಯ ಹಟ, ಪದ್ದಕ್ಕನ ಛಲ, ವಲ್ಲೀಗದ್ದೆ ಸುಬ್ಬನ ಕುರೂಪದರ್ಶನ ಇಲ್ಲಿಯೇ ಹುಟ್ಟಿದ್ದು. ಬೊಮ್ಮಿಯ ಹುಲ್ಲು ಹೊರೆಯ ಚೌಕಾಶಿಯಿಂದ ಶುರುವಾದ ಈ ಪಯಣ ತನ್ನ ದಾರಿಗುಂಟ ಕನ್ನಡ ಸಾಹಿತ್ಯಕ್ಕೆ ಹಲವು ಮುಖ್ಯ ಕೃತಿಗಳನ್ನು ನೀಡುತ್ತ ಮುಂದುವರಿದಿದೆ.

ಚಿತ್ತಾಲರ ಕಥಾಪ್ರಪಂಚ, ಉತ್ತರ ಕನ್ನಡದ ಲೇಖಕರಿಗೆ ಒಂದು ಶಾಪವಿದ್ದಂತೆ ಎಂದು ಹೇಳುವವರಿದ್ದಾರೆ. ಅವರ ಸಾಹಿತ್ಯದಲ್ಲಿ ಪ್ರಕಟಗೊಂಡ, ಈ ಜಿಲ್ಲೆಯ ದಟ್ಟವಾದ ವಿವರಗಳ ಬಗ್ಗೆ ಇರುವ ಮೆಚ್ಚುಗೆಯ ಮಾತಿದು. ಹೊಸದಾಗಿ ಬರೆಯತೊಡಗುವ ಲೇಖಕನಿಗೆ, ಅವರ ಕಣ್ಣಿನಿಂದಲ್ಲದೇ ಉತ್ತರ ಕನ್ನಡವನ್ನು ಬೇರೆಯಾಗಿ ನೋಡುವುದು ಸುಲಭವಲ್ಲ. ಆದರೆ ಅನುಕರಣೆಯನ್ನು ಮೀರಬಲ್ಲ, ತನ್ನ ಒಳಗನ್ನು ಮುಟ್ಟಿ ಬರೆಯಬಲ್ಲ, ರೂಪಕಜಗತ್ತಿನ ಅರಿವಿರುವ ಲೇಖಕನಿಗೆ ಅವರು ಹೊರೆಯಲ್ಲ. ಈ ಜಿಲ್ಲೆಯ ಪ್ರತಿಯೊಬ್ಬ ಲೇಖಕನಿಗೂ, ಅವನದೇ ಆದ ವಿಶಿಷ್ಟವಾದ ಉತ್ತರ ಕನ್ನಡವಿರಲು ಸಾಧ್ಯವಿದೆ. ಮತ್ತು ಅದನ್ನು ಇಲ್ಲಿಯ ಅನೇಕ ಪ್ರತಿಭಾವಂತರು ತೋರಿಸಿದ್ದಾರೆ ಕೂಡ. ಚಿತ್ತಾಲರು ತಮ್ಮ ಸೃಜನ ಕ್ರಿಯೆಯ ಬಗ್ಗೆ ಬರೆಯುತ್ತ , 'ಉತ್ತರ ಕನ್ನಡ ಜಿಲ್ಲೆ, ಅದರಲ್ಲೂ ನನ್ನ ಹುಟ್ಟೂರಾದ ಹನೇಹಳ್ಳಿ-ಇವು ನನ್ನ ಮಟ್ಟಿಗೆ ಬರೇ ನೆಲದ ಹೆಸರುಗಳಲ್ಲ. ಬದಲಾಗಿ ನನ್ನ ಸಾಹಿತ್ಯದ ಹುಟ್ಟಿಗೆ ಕಾರಣವಾಗಿ, ಅದರ ಚೈತನ್ಯಕ್ಕೆ ನಿರಂತರವಾದ ಜೀವಸೆಲೆಯಾಗಿ ನಿಂತ ಪ್ರೇರಕ ಶಕ್ತಿಗಳೂ ಆಗಿದೆಯೆಂದು ನಾನು ನಂಬಿದ್ದೇನೆ' ಎಂದು ಹೇಳಿದ್ದಾರೆ. ಚಿತ್ತಾಲರ ಕತೆಗಳಲ್ಲಿ ಬರುವಂಥ ಹನೇಹಳ್ಳಿ, ವಾಸ್ತವದಲ್ಲಿ ಇತ್ತೋ ಎಂಬ ಪ್ರಶ್ನೆಯನ್ನು ಕೇಳಲು ಸಾಧ್ಯವಿಲ್ಲ. ಆದರೆ ಅವರ ಪ್ರತಿ ಓದುಗರ ಭಾವಜಗತ್ತಿನಲ್ಲಿ, ತನ್ನ ಸೌಂದರ್ಯ ಮತ್ತು ಸಂಕೀರ್ಣತೆಯನ್ನು ತುಂಬಿಕೊಂಡ ಹನೇಹಳ್ಳಿಯಿದೆ. ಅಲ್ಲಿಯ ಜನರಿದ್ದಾರೆ. ಛಲ, ಭೀತಿ, ಪ್ರೀತಿ ಬಂಡಾಯಗಳಿವೆ. ನಿಷ್ಪಾಪ ಜೀವಿಯ ಆಕ್ರಂದನಗಳಿವೆ.

'ಮೂರು ದಾರಿಗಳು' ಕಾದಂಬರಿ ಆರಂಭವಾಗುವುದು ಹೀಗೆ: ಶನಿವಾರ. ರಾತ್ರಿಯ ಸಮಯ. ಸಾಣೆಕಟ್ಟೆಯಿಂದ ಕುಮಟೆಗೆ ಹೊರಡುವ ದೋಣಿ, ಧಕ್ಕೆಯನ್ನು ಬಿಡುವ ಹೊತ್ತು. ಆಗ ಘಾಟಿಯ ಏರಿಯ ಆಚೆಯಿಂದ 'ಕೂಹೂ' ಎಂಬ ಕೂಗು ಕೇಳಿಸುತ್ತದೆ. ತಾನು ಅತಿ ಸಮೀಪ ಇದ್ದೇನೆ, ದೋಣಿ ಬಿಡಬೇಡಿ ಎಂಬುದರ ಸಂಕೇತವಾದ ಕೂಗದು. ಸ್ವಲ್ಪ ಸಮಯದಲ್ಲೇ, ದೋಣಿ ತಪ್ಪಿತೆಂಬ ಆತಂಕದಲ್ಲಿ, ಆ ಘಾಟಿಯನ್ನು ದಾಟಿ, ಓಡೋಡುತ್ತ, ಏದುಸಿರು ಬಿಡುತ್ತ ಬಂದ ಗೃಹಸ್ಥರೊಬ್ಬರು ದೋಣಿಯನ್ನು ಹತ್ತುತ್ತಾರೆ. ನಾವು ಹನೇಹಳ್ಳಿಯ ಭೇಟಿಯನ್ನು ಮುಗಿಸಿ, ಹಿಂತಿರುಗಿ ಬರುವಾಗ ಸಾಣೆಕಟ್ಟೆಯ ಧಕ್ಕೆಯನ್ನೂ ಹಾದುಬಂದೆವು. ಅದೇ ದಾರಿಯಲ್ಲಿ ಹೋಗುವಾಗ, ಧಕ್ಕೆಯ ಪಕ್ಕದ ಚಿಕ್ಕ ದಿಬ್ಬವಾಗಿ ಕಂಡದ್ದು ಮರಳಿ ಬರುವಾಗ ನನಗೆ ದೊಡ್ಡ ಘಾಟಿಯಂತೆ ತೋರಿತು. ನಾನು ಹನೇಹಳ್ಳಿಯೆಂಬ ರೂಪಕಜಗತ್ತಿನಲ್ಲಿದ್ದೆ. ಕತ್ತಲಿನ ರಾತ್ರಿ, ಧಕ್ಕೆಯಿಂದ ಈ ಘಾಟಿಯತ್ತ ಕತ್ತೆತ್ತಿ ನೋಡಿದ ಅಂಬಿಗನಿಗೆ, ಆ ಗೃಹಸ್ಥರ ಧಾವಂತ, ಅವರ ಕೈಯ ಕಂದೀಲಿನ ಕ್ಷೀಣ ಬೆಳಕಿನ ಓಲಾಟದ ಮೂಲಕ ಅರ್ಥವಾದ ಬಗೆಯನ್ನು ಕಾಣಬಲ್ಲವನಾಗಿದ್ದೆ. ■



ಕೆ. ವೆಂಕಟೇಶ್

# ನಗಲಾರೆಯಾ ನಿರಂತರ

ಶಾಲೆಯ ಊಟದ ಗಂಟೆ ಬಾರಿಸೋಕೆ ಇನ್ನೂ ಒಂದು ಪೀರಿಯಡ್ ಇತ್ತು. ಅವತ್ತು ಫಿಸಿಕ್ಸ್ ತೆಗೆದುಕೊಳ್ಳುತ್ತಿದ್ದ ಎಚ್. ಎಮ್. ಇನ್ನೂ ಬಂದಿರಲಿಲ್ಲ. ಹುಡುಗರು ಹುಡುಗಿಯರೆಲ್ಲಾ, ರಬ್ಬರ್ ಬ್ಯಾಂಡಿಗೆ ಪೇಪರ್ ತುಂಡು ಸಿಗಿಸಿ, ಒಬ್ಬರಿಗೊಬ್ಬರು ಬಡಿದಾಡುತ್ತಿದ್ದರು. ಮಾತು ಕಡಿಮೆ ಮಾಡಲಿ ಎನ್ನುವ ಕಾಳಜಿಯಲ್ಲಿ, ಒಂದು ಸಾಲು ಹುಡುಗರು, ಒಂದು ಸಾಲು ಹುಡುಗಿಯರು, ಹೀಗೆ ಕುಳ್ಳಿರಿಸಿದ್ದ ಅವರ ಯೋಜನೆ ಎಷ್ಟು ಕೆಲಸಕ್ಕೆ ಬರುತ್ತಿತ್ತು ಎನ್ನುವುದು ಅವರಿಗೂ ಗೊತ್ತು. ನಮಗೂ ಗೊತ್ತಿತ್ತು. ಅಂದು ತಾರೀಖು ಇಪ್ಪತ್ತಿರಬೇಕು. ಎಂಟನೆಯ ತಿಂಗಳು. ನಾನು, ನೀವು ಮೂರು-ನಾಲ್ಕು ಹುಡುಗಿಯರು ಕುಳಿತಿದ್ದ ಹಿಂದಿನ ಬೆಂಚಿನಲ್ಲೆ ಕುಳಿತಿದ್ದೆ. ನಿನಗೂ ನೆನಪಿರಬೇಕು, ಯಾಕಿಲ್ಲ? ನಿನ್ನ ಮನಸ್ಸಿನ ಹಸಿ ರೆಕ್ಕೆಯ ಹಕ್ಕಿಗಳ ಮೊದಲ ಬಾರಿಗೆ ಗಗನದ ಉತ್ತುಂಗಕ್ಕೆ ಹಾರಿಸಿದ ದಿನಗಳಲ್ಲವೇ ಅವು? ನೀನು ಇಡೀ ಕ್ಲಾಸ್, ಕ್ಲಾಸ್ ಯಾಕೆ ಇಡೀ ಶಾಲೆಯ ವಿದ್ಯುತ್. ಹಾಂ! ನನಗೆ ಮಾತ್ರ ಒಂದು ರೀತಿಯ ತರಂಗ. ನಾನು ಮೊದಲೇ ನೋಟ್‌ಬುಕ್ ತಂದಿಲ್ಲದಿದ್ದಕ್ಕೊ ಅಥವಾ ಬರೆದಿರದಿದ್ದಕ್ಕೊ ಗೂಡರಿಸಿಕೊಂಡು ಕೂತಿದ್ದೆ. ಎಚ್.ಎಮ್. ಒಳಕ್ಕೆ ಬರುತ್ತಿದ್ದಂತೆ ಮಾಂತ್ರಿಕವಾಗಿ ಎಲ್ಲರೂ ಎದ್ದು ನಿಂತೆವು, ಮತ್ತೆ ಕೈ ಸನ್ನೆ ಸ್ವೀಕರಿಸುತ್ತಲೇ ಎಲ್ಲರೂ ಕುಕ್ಕರಿಸಿದೆವು. ಕುಂತೂ, ಕುಂತು ಕಾಲು ಜುಮುಗುಟ್ಟುತ್ತಿದ್ದಕ್ಕಿರಬೇಕು, ನಾನು ಮುಂದಿನ ಬೆಂಚಿನ ಕೆಳಕ್ಕೆ ಕಾಲು ಚಾಚಿ ಕುಳಿತಿದ್ದೆ. ಎಲ್ಲ ಹುಡುಗರ ನೀಟ್ ಕಲೆಕ್ಟ್ ಮಾಡಿ, ಟೀಚರ್ ಟೇಬಲ್ ಮೇಲೆ ಇಟ್ಟು ಬಂದ ನೀನು, ದಿನನಿತ್ಯದಂತೆ ಕಾಲು ಮುಂದೆ ನೀಡದೆ, ಹಿಂದಕ್ಕೆ ಮಡಿಚಿ, ಬೆಂಚಿನ ಮರದ ಅಡ್ಡಪಟ್ಟಿಗೆ ಕಾಲು ಒತ್ತಿ ಕುಳಿತೆ. ಕನಿಷ್ಠ ಪಕ್ಷ ನೀನು ಹಾಗೆ ತಿಳಿದುಕೊಂಡೆ. ನೀನೇನೋ ಸಲೀಸಾಗಿ ಭಾರವೆಲ್ಲಾ ನನ್ನ ಕಾಲ ಮೇಲೆ ಬಿಟ್ಟು, ಹಿಮದ



ಬೊಂಬೆಯ ರೀತಿ ಕುಳಿತುಬಿಟ್ಟೆ. ಆದರೆ ನನ್ನ ಸ್ಥಿತಿ ಹೇಗಿತ್ತು ಯೋಚಿಸಿದೆಯಾ? ಎರಡು ನಿಮಿಷಕ್ಕೂ ಮೇಲೆ, ಕಾಲಲ್ಲಿ ರಕ್ತ ಸಂಚಾರವೇ ಸ್ಥಗಿತವಾಗಿ, ಗೆಜ್ಜೆ ಶಬ್ದ ಕೇಳಿಸುವ ತನಕ ಕಾಲನ್ನು ಒಂದು ಸೂಜಿ ಮೊನೆಯಷ್ಟೂ ಅಲುಗಿಸಿರಲಿಲ್ಲ.

ಏಕೆ ಇಬ್ಬರಿಗೂ ಏನೋ ಅನ್ನಿಸುತ್ತೆ?... ಆದರೆ ನಿನಗೂ ಅದನ್ನು ಹೇಳೋಕೆ ಬರೋಲ್ಲ, ನನಗೂ ಅದ ಹೇಳಲು ತಿಳಿಯೋಲ್ಲ. ಅಷ್ಟು ಹೊತ್ತು ಆದಮೇಲೆ, ತಾನೇ ತಾನಾಗಿ ಕಂಪಿಸಿದ ನನ್ನ ಕಾಲಕಂಪನ, ನಿನ್ನ ಕಾಲಿಗೂ, ಮೆದುಳಿಗೂ, ಹೇಗೆ ಏರಿದ್ದವು? ನಿನ್ನ ಪರಿಸ್ಥಿತಿಯ ಅರಿವು ನಿನಗೆ ಮೂಡುತ್ತಿದ್ದಂತೆ, ನಿನ್ನ ಇಡೀ ಇರುವಿಕೆಯೇ, ಕೆಲವೇ ನಿಮಿಷಗಳಲ್ಲಿ, ಕ್ಯಾನ್ವಾಸ್ ತೊಟ್ಟಿದ್ದ ನಿನ್ನ ಪುಟ್ಟ ಕಾಲುಗಳಿಗಿಳಿದು ಬಂದಿದ್ದವು. ಪಾದರಸದಂತೆ ಇರುತ್ತಿದ್ದ ನೀನು. ಟೀಚರ್ ಯಾವುದೋ ಪ್ರಶ್ನೆ ಕೇಳಿದಾಗ ಉತ್ತರಿಸಲಾಗದೆ ಒಣಗಿದ ಗಂಟಲಿಂದ ತೊದಲಿದ ಅವಸ್ಥೆ, ನಿನಗೇ ನೆನಪಿರಬೇಕು. ನಿಜ ಹೇಳಬೇಕೆಂದರೆ, ಆಗಲೂ ನೀನು ಹಾಗೆ ತೊದಲಿದ್ದು ನನಗೆ ಸಹಿಸಿರಲಿಲ್ಲ. ನರ ಜಿಗುಟಿದ ಹಾಗೆ ಅನಿಸಿತ್ತು. ನೀನು ಎಂದೂ ಕುಗ್ಗುವುದನ್ನು ಕಂಡರಿಯದ ನನಗೆ, ನನ್ನಿಂದ ನೀನು ಹಾಗೆ ನಿಂತದ್ದು, ಒಂದು ರೀತಿಯ ಮೋಹ ಒಡಲಾಳದಿಂದ ಉಕ್ಕಿ ಬರುವಂತೆ ಮಾಡಿತ್ತು.

ಅಂದು ನೀನು ಮಧ್ಯಾಹ್ನದ ಕ್ಲಾಸ್‌ಗಳಿಗೆ ಬರುವುದಿಲ್ಲ ಎಂದು ನನಗೆ ಗೊತ್ತಿರಲಿಲ್ಲ. ಅಲ್ಲೆಲ್ಲೋ ಮೋಡಗಳ ಮಧ್ಯೆ ನೇತುಬಿಟ್ಟಂತೆ ನನ್ನದೇ ಆದ ಲೋಕದಲ್ಲಿ ತೇಲಾಡುತ್ತಿದ್ದ ನಾನು, ನಿನ್ನನ್ನು ಹುಡುಕಿದಾಗ ಬರೀ ನಿರಾಶೆಯೇ ಕಾದಿತ್ತು. ಕ್ಲಾಸ್‌ರೂಂಗಳಲ್ಲಿ ನಾನಲ್ಲದೆ ಬೇರೆ ಜೀವಗಳೇ ನನಗೆ ಅಂದು ಗೋಚರಿಸಿರಲಿಲ್ಲ. ಮೂರು ದಿನಗಳ ನಿರಾಶೆಯ ನನಗೆ ಉಣಿಸಿದ ನಂತರ ಬಂದ ನೀನು, ಜ್ವರ ಬಂದಿತ್ತು ಎಂದು ಟೀಚರ್‌ಗೆ ಲೀವ್‌ಲೆಟರ್ ಕೊಟ್ಟೆ. ನಿನ್ನನ್ನೇ ಓರೆಗಣ್ಣಿಂದ ಗಮನಿಸುತ್ತಿದ್ದ ನನ್ನ ಕಡೆ,

ಒಂದೆರಡು ಬಾರಿ, ಶಾಖ ಕಳೆದುಕೊಂಡು ಬರೀ ಹೊಳೆಯುತ್ತಿರುವ ಸೂರ್ಯನಂತೆ ಮಿನುಗುತ್ತಿದ್ದ ನಿನ್ನ ಕಣ್ಣುಗಳನ್ನು ಫಳಾರೆನಿಸಿದೆ. 'ಅಬ್ಬ! ಇವಳು ನನ್ನವಳು' ಎನ್ನುವ ವ್ಯಾಕ್ತಿಯನ್ನು ನನಗೆ ತಂದು ಕೊಟ್ಟೆ. ಅಂದೆಲ್ಲ ಅನ್ನ, ನೀರು, ನಿದ್ರೆಗಳ ತ್ರಾಣ ವನ್ನು ನಿನ್ನ ನೆನಪುಗಳೇ ನನಗೆ ತುಂಬಿಕೊಟ್ಟಿದ್ದವು.

ನಿನಗೆ ಇನ್ನೊಂದು ನೆನಪಿರಬೇಕು. ಹೇಗೆ ತಾನೆ ಮರೆತೀಯ? ಕ್ರಿಸ್ಮಸ್ ಹಬ್ಬ. ಕ್ರಿಶ್ಚಿಯನ್ ಸ್ಕೂಲ್ ಆದ್ದರಿಂದ ಜೋರಾಗೇ ನಡೆಸುತ್ತಿದ್ದೆವು. ಹುಡುಗರೆಲ್ಲಾ ಸ್ಕೂಲ್ ಯೂನಿಫಾರಂ ಮರೆತು, ತಮಗೆ ಇಷ್ಟ ಬಂದ ಬಣ್ಣದ ಬಟ್ಟೆ ತೊಟ್ಟು ಬರುತ್ತಿದ್ದ ದಿನ ಅದು. ನೀನು ಒಂದು ನೀಲಿ ಅಂಚಿನ, ಕೆಂಪು ರೇಷ್ಮೆಯ ಲಂಗ ತೊಟ್ಟು, ಅದೇ ಬಣ್ಣದ ಕುಪ್ಪಸ ತೊಟ್ಟಿದ್ದೆ. ಎಲ್ಲರೂ ತಮಗೆ ಕೊಟ್ಟಿದ್ದ ಕೇಕನ್ನು ಅರ್ಧ ತಿಂದು ಮುಗಿಸಿದ್ದರೂ ನಾನು ಇನ್ನೂ ಹಾಗೇ ಕೈಯಲ್ಲಿ ಇಟ್ಟುಕೊಂಡಿದ್ದೆ. ನಾನು ಆಗಲೇ ನನ್ನದಾದ್ದಕ್ಕೆ, ನನ್ನ ಪಾಲಿಗೆ ಬಂದದ್ದಕ್ಕೆ ಸರ್ವಾಧಿಕಾರತ್ವ ಕಳೆದುಕೊಂಡು ಬಿಟ್ಟಿದ್ದೆ. ನಿನ್ನ ಹವಿಸ್ಸನ್ನು ಕೈಯಲ್ಲೆ ಇಟ್ಟುಕೊಂಡು, ಆತುರದಿಂದ ಇಣುಕುತ್ತಿದ್ದೆ. ನಿನ್ನ ಗೆಳತಿಯರೂ ಕೊಟ್ಟಿದ್ದ ತಿಂಡಿಯನ್ನು ಬಾಯಿ ತುಂಬಾ ತುಂಬಿ ಕೊಂಡು, ಕ್ಲಾಸಿನ ಇನ್ನೂ ಇತರೆ ಹುಡುಗರ ಅವ್ಯಕ್ತ ಭಾವನೆಗೆ ಬೆಂಕಿ ಹಚ್ಚುತ್ತಾ, ಕಿಲಕಿಲ ನಗುತ್ತಾ, ಗೆಳತಿಯರೊಡನೆ ಕಾರಿಡಾರಿನಲ್ಲಿ ಜಿಂಕೆಯಂತೆ ನಲಿಯುತ್ತಾ ಬಂದೆ. ಅಲ್ಲೆ ನಿಂತಿದ್ದ ನನ್ನನ್ನು ಕಂಡು 'ಏನು' ಎನ್ನುವಂತೆ ಒಂದು ಕ್ಷಣ ನೋಡಿದೆ. ಕೈಯಲ್ಲಿದ್ದ ಕೇಕನ್ನು ಬೆರಳು ಬಿಚ್ಚಿ ತೋರಿದೆ. ನಿನ್ನ ಕಣ್ಣು ಸೂರ್ಯನ ಸುತ್ತೂ ಸುತ್ತುವ ಬೆಂಕಿಯ ಬಳೆಯ ಹಾಗೆ ಸುತ್ತಿ ಮಿರುಗುತ್ತಿತ್ತು. ನಾ ತಿಂದೆ, ನೀನು ತಿನ್ನು ಎನ್ನು ವಂತೆ ಸೂಚಿಸಿತು, ನಿನ್ನ ಮುದ್ದು ಮುಖ. ನಾನು ಮುಖ ಗಂಟಿಕ್ಕುತ್ತಿದ್ದಂತೆ, ಹರಿಣಿಯಂತೆ ಜಿಗಿದು

## ಕೆ. ವೆಂಕಟೇಶ್ (1970-1992)

ಇಪ್ಪತ್ತೆರಡರ ವಯಸ್ಸಿಗೇ ಅಕಾಲ ಮರಣಕ್ಕೀಡಾದ ಅಸಾಮಾನ್ಯ ಪ್ರತಿಭಾವಂತ ಕೆ.ವೆಂಕಟೇಶ್‌ರ ಸಂವೇದನೆಗೆ ಎಟುಕದ ಸಂಗತಿಗಳೇ ಇಲ್ಲ. ಸಾಹಿತ್ಯ, ಮನೋವಿಜ್ಞಾನ, ವಾಸ್ತುಶಿಲ್ಪ, ಮಾನವಶಾಸ್ತ್ರ, ಚಿತ್ರಕಲೆ, ಚರಿತ್ರೆ, ಸಂಗೀತ, ಛಾಯಾಗ್ರಹಣ- ಹೀಗೆ ನೂರಾರು ಹವ್ಯಾಸಗಳನ್ನು ಮೈಗೂಡಿಸಿಕೊಂಡಿದ್ದ ಈ ತರುಣ, ತನ್ನ ಅಲ್ಪಾಯುಷ್ಯವನ್ನು ಮುಂಚಿತವಾಗೇ ಮನಗಂಡವನಂತೆ ಎಂದಿಲ್ಲದ ಧಾವಂತದಿಂದ ಓಡಾಡಿದವನು. ಪ್ರತಿಕ್ಷಣವನ್ನೂ ಆಸ್ವಾದಿಸಿದವನು. ಅವನ ಬುಲೆಟ್ ಮೋಟೈಕ್‌ನ ಗುಡು ಗುಡು ಸದ್ದು, ಅವನ ತುಂಟ ನಗುವಿನಂತೆ, ಅವನ ಅಭಿಮಾನಿಗಳ ಮನದಿಂದ ಎಂದಿಗೂ ಮಾಸುವುದಿಲ್ಲ.

ಎಂ.ಬಿ.ಬಿ.ಎಸ್ ಎರಡನೇ ವರುಷ ಕಲಿಯುತ್ತಿದ್ದಾಗಲೇ 'ಲ್ಯುಕೇಮಿಯಾ'ಕ್ಕೆ ಬಲಿಯಾದ ವೆಂಕಟೇಶ್ ಗೀಚಿ ಬಿಟ್ಟು ಹೋದ ಕಿರುಗತೆಗಳನ್ನು, ಕೈಸ್ಟ್ ಕಾಲೇಜ್ ಕನ್ನಡ ಸಂಘ 'ಇನ್ನು ಮುಂದೆ ಶಬ್ದವಿಲ್ಲ' ಎಂಬ ಶೀರ್ಷಿಕೆಯಲ್ಲಿ ಸಂಕಲಿಸಿದೆ. ಅದರಿಂದ ಆಯ್ದ ಕಥೆ ಇದು.



**ಚೀನಾದಲ್ಲಿ, ಕೆಂಪು ಹಕ್ಕಿಗಳೊಂದಿಗೆ.**

ಬಂದು, ನನ್ನ ಕೈಲಿದ್ದ ಕೇಕನ್ನು ಕಚ್ಚಿಕೊಂಡು, ಪುನಃ ನಿನ್ನ ಗೆಳತಿಯರ ಗುಂಪನ್ನು ಸೇರಿಬಿಟ್ಟಿದ್ದೆ. ನಾನೇ ನಿನ್ನ ಬಾಯಿಗೆ ಇಡಬೇಕೆಂದು ಕಾಯುತ್ತಿದ್ದ ನನ್ನ ಆಸೆಗೆ ಸೂಜಿ ಚುಚ್ಚಿದ್ದೆ. ಆದರೂ ಸಂಪೂರ್ಣ ಏನೂ ನಿರಾಶೆಗೊಳಿಸಿರಲಿಲ್ಲ.

ತಿಂಡಿ ತಿಂದು ಬಾಯಾರಿದವರೆಲ್ಲಾ, ಕಾರಿಡಾರಿನ ಒಂದು ಮೂಲೆಯಲ್ಲಿ ಇಟ್ಟಿದ್ದ ನೀರನ್ನು ಬಂದು ಕುಡಿದು, ಕೆಳಕ್ಕಷ್ಟು ಚೆಲ್ಲಿ ಹೋಗುತ್ತಿದ್ದರು. ಮನೆಗೆ ಹೋಗುವ ಮುನ್ನ ಇನ್ನೊಂದು ಬಾರಿ ನಿನ್ನನ್ನು ನೋಡುವ ಆತುರದಲ್ಲಿ ನಾನು, ನೀರನ್ನು ಲೋಟಕ್ಕೆ ಬಗ್ಗಿಸಿಕೊಂಡು, ಅರ್ಧ ಕುಡಿದಿದ್ದೆ ಅಷ್ಟೆ. 'ಹೋಗಿ ಬರ್ತೀನಿ' ಎಂದು ಹೇಳಿ ಹೋಗಲಿಕ್ಕಿರಬೇಕು, ಓಡಿ ಬಂದು ನನ್ನ ಮುಂದೆ ನಿಂತಿದ್ದೆ. ಪಕ್ಕದಲ್ಲೆ ಸುಳಿದು ಹೋದ ಆಯಾಳ ಗಮನಿಸಿ, "ನೀರು ಇದೆಯಾ?" ಎಂದೆ. ಪಾತ್ರೆಯಲ್ಲಿ ಇಲ್ಲದ್ದು ಗೊತ್ತಿದ್ದರೂ, ಒಂದು ಬಾರಿ ಇಣುಕಿ ನೋಡಿ, ಕುಡಿಯುತ್ತಿದ್ದವನು ಅಷ್ಟಕ್ಕೆ ನಿಲ್ಲಿಸಿ, ಕೈಲಿದ್ದ ಎಂಜಲು ನೀರನ್ನೇ 'ಬೇಕಾ' ಎಂದೆ. ಮೈಯ ರಕ್ತವೆಲ್ಲಾ ಕೆನ್ನೆಗೇರಿದಂತೆ ನೀನು ಕೆಂಡವಾಗಿ ನಿಂತೆ. ತುಟಿ, ಹೂ ಬಿರಿದಂತೆ ಬಿರಿಯಿತು. ಒಂದು ರೀತಿ, ಏನೂ ಅರ್ಥವಾಗದಿದ್ದವಳಂತೆ ಪಿಳಿಪಿಳಿ ನನ್ನನ್ನೇ ನೋಡುತ್ತಿದ್ದೆ. ಎದುರಿಗೆ ಇದ್ದ ಕ್ಲಾಸ್ ರೂಮಿನಿಂದ ಪಿ.ಟಿ. ಮಾಸ್ಟರ್ ಕೂಗಿದರು, ಮನಸ್ಸಿಲ್ಲದಿದ್ದರೂ ಅರ್ಧ ಕುಡಿದಿದ್ದ ನೀರನ್ನು ಅಲ್ಲೆ ಬಿಟ್ಟು, ಒಳ ಓಡಿದ್ದೆ ನಾನು. ಮಾಸ್ಟರ್ ಕೊಟ್ಟ ಪುಸ್ತಕಗಳನ್ನು ಸ್ಟಾಫ್ ರೂಮಿಗೆ ಇಟ್ಟು ಬಂದು, ನೀರಿನ ಲೋಟವನ್ನು ನೋಡಿದೆ. ಒಂದು ತೊಟ್ಟೂ ಉಳಿಸಿರಲಿಲ್ಲ ನೀನು? ಅದೇ ರಭಸದಲ್ಲಿ ಸ್ಕೂಲ್ ಗೇಟಿನ ತನಕ ಓಡಿ ಬಂದೆ. ನೀವು ಮೂವರು ಗೆಳತಿಯರು ಆಗಲೇ ರಸ್ತೆಯ ತಿರುವಿನಲ್ಲಿದ್ದಿರಿ. ನನ್ನನ್ನು ಗೇಟಿನ ಬಳಿ ನೋಡುತ್ತಿದ್ದಂತೆ, ನೀನು ಕೈಬೀಸಿ, ಮುಗುಳ್ನಕ್ಕು, ಗಾಳಿಗೆ ಬೆಂಕಿ ಹಚ್ಚಿದ್ದೆ. ನನ್ನ ಹೃದಯ ಕಿತ್ತು ಹಾಲಲ್ಲಿ ತೇಲಿಬಿಟ್ಟಿದ್ದೆ. ಯಾರಿಗೂ ಕಾಣದೆ, ಲೋಟಕ್ಕೆ ಒಂದು ಮುತ್ತಿಟ್ಟು, ನಾನು ಮನೆಗೆ ಹೋದೆ.

ನೆನಪಿದೆಯಾ? ಆ ಲೋಟ ಕಾಣದಾದಾಗ, ಪೀಟಿ ಮಾಸ್ಟರ್, ನಾನೇ ಕಳದ್ಹಾಕಿದ್ದೀನಿ ಅಂದ ಬೈದಾಗ, ನೀನು ನನ್ನನ್ನು ದೊಡ್ಡ ದೊಡ್ಡ ಕಣ್ಣುಗಳಿಂದ ನೋಡ್ತಿದ್ದೆ.

"ನೀನು ಅದನ್ನ ಯಾಕ್ ಮನೆಗೆ ತೆಗೆದುಕೊಂಡು ಹೋದಿ?", ಲಂಚ್ ಇಂಟರ್‌ವೆಲ್‌ನಲ್ಲಿ ನೀನು ಕೇಳಿದಾಗ ನಾನು ನಗುತ್ತಾ, ನಿನ್ನ ಕಡೆಗೆ ಒಂದು ಬಾರಿ ಬೆರಳು ತೋರಿಸಿ, ನನ್ನ ಕಡೆ ಒಂದು ಬಾರಿ ಬೆರಳು ತೋರಿಸಿ, ಕುಡಿಯುವ ಸನ್ನೆಯನ್ನು ಅಭಿನಯಿಸಿ, ಬಾವಿಗೆ ಎಸೆದೆ ಎಂದಿದ್ದೆ. ನೀನು, ಬೆನ್ನಮೇಲೆ ಒಂದು ಗುದ್ದಿ, ಮುಗುಳ್ನಕ್ಕು ಮಾಯವಾಗಿದ್ದೆ. ಗೆಳತಿ, ಇಂದೊಮ್ಮೆ ನಗಲಾರೆಯ ಆ ನಗುವನ್ನು?

ಹೂಮಾಲೆ ತೊಟ್ಟ ಗೋಡೆಯ ಮೇಲಿನ ನಿನ್ನ ಮುದ್ದು ಭಾವಚಿತ್ರದೊಳಗಿಂದ.





ಜನಪದ

ಗಣಪತಿ ಬೀರಪ್ಪ ಆಚಾರಿ
ಸಂಗ್ರಹ: ಎಲ್.ಆರ್. ಹೆಗಡೆ



# ಕಣಮಿಣಿ ಹುಳ

ಕಣಮಿಣಿ ಹುಳ ಸಂತೆಗೆ ಹೋಗಿ ಮೂರ್ ಬಾಳೆ ಹಣ್ಣು ತಕಂಡ್ ಬಂದ್ಲು. ಅದು ಒಂದು ಮರ್ನ ಒಟ್ಟಿಲ್ ಬಿತ್ತು. ಆಚಾರಿ ಮನಿಗೋಗಿ, 'ಬಾಳೆ ಹಣ್ ತಕ್ಕೊಡೂ' ಅಂತು. ಆಚಾರಿ 'ತೆಕ್ಕೊಡುದಿಲ್ಲ' ಅಂದ.

ಗೌಡನಿದ್ದಲ್ ಹೋಯ್ತು. 'ಗೌಡಾ, ಸಂತೆಗೋಗಿ ಬಾಳೆಹಣ್ ತಂದೆ. ಬಾಳೆಹಣ್ ಮರ್ನ ಒಟ್ಟಿಲ್ ಬಿತ್ತು. ಬಾಳೆಹಣ್ ತಕ್ಕೊಡ್ದಿದ್ ಆಚಾರಿ ಉಳಿ, ಬಾಚಿ ಕಸಿ' ಅಂತು. 'ಅಂವ ನಮ್ಮೂರ್ ಆಚಾರಿ, ಕಸ್ಯೂದಿಲ್ಲ' ಅಂದ, ಗೌಡ.

ಬಸವನ ಹತ್ರ ಹೋಯ್ತು. 'ಬಸವ, ಬಸವ, ಸಂತೆಗೋಗಿ ಬಾಳೆಹಣ್ ತಂದಿದ್ದೆ. ತಿನ್ನೂಕ್ ಹೋದಾಗ್ ಮರ್ನ ಒಟ್ಟೀಲ್ ಬಿತ್ತು, ಬಾಳೆಹಣ್ ತಕ್ಕೊಡ್ದಿದ್ದ ಆಚಾರಿ, ಆಚಾರಿ ಉಳಿ ಕಸೀದಿದ್ ಗೌಡ. ಗೌಡನ್ ಗದ್ದೆ ತಿನ್‌ವ್ಯೊ?' ಕೇಳ್ತು. ಬಸವ, 'ತಿನ್ನೂದಿಲ್ಲ ನಾನು. ಹೂಟಿ ಮಾಡಿ ಬಿತ್ತಿಕ್ ತಯಾರ್ ಮಾಡ್ಕೊಟ್ಟಿದ್ದೆ ನಾನು. ತಿನ್ನೂದಿಲ್ಲಾ' ಅಂತು. ಅಂಬಿಗರಣ್ಣನ ಹತ್ರ ಹೋಯ್ತು. 'ಅಂಬಿಗರಣ್ಣ, ಸಂತೆಗೋಗಿ ಮೂರ್ ಬಾಳೆಹಣ್ಣ ತಂದಿದ್ದೆ. ಮರನ್ ಒಟ್ಟಿಲ್ ಬಿತ್ತು. ಬಾಳೆಹಣ್ ತಕ್ಕೊಡ್ದಿದ್ ಆಚಾರಿ, ಗೌಡ, ಬಸವನ ಹೊಡೆವ್ಯೊ?' ಕೇಳಿತು. ಅವ 'ಹೊಡುದಿಲ್ಲ' ಅಂದ. ಇಲಿ ಹತ್ರ ಹೋಯ್ತು. ಹೀಗೀಂಗ್ ಆಯ್ತು ಹೇಳಿ ಅಂಬಿಗಣ್ಣನ ಬಲಿ ಕಡೀವ್ಯೊ ಕೇಳ್ತು. ಇಲಿ ತಾನು ಕಡೂದಿಲ್ಲ ಹೇಳ್ತು. ಬೆಕ್ಕಿನ ಹತ್ರೂ ಹಾಗೇ ಹೇಳ್ತದೆ. ಇಲಿ ಹಿಡಿವ್ಯೊ ಕೇಳ್ತದೆ. ಬೆಕ್ಕು 'ಹೊಟ್ಟೆ ತುಂಬದೆ, ಇಲಿ ಹಿಡೂದಿಲ್ಲ' ಹೇಳ್ತು.

ಕಣಮಿಣಿ, ಅಜ್ಜನ ಹತ್ರ ಹೋಯ್ತು. 'ಮರ್ನ ಒಟ್ಟಿಲಿದ್ದ ಬಾಳೆಹಣ್ಣ ತಕ್ಕೊಡ್ದಿದ್ದ ಆಚಾರಿ, ಆಚಾರಿ ಉಳಿ ಕಸೀದದ್ದ ಗೌಡ. ಗೌಡನ ಗದ್ದೆ ತಿನ್ನದಿದ್ದ ಬಸವ, ಬಸವನ ಹೊಡೆಯದಿದ್ದ ಅಂಬಿಗರಣ್ಣ, ಅಂಬಿಗರಣ್ಣನ ಬಲಿ ಕಡೀದಿದ್ದ ಇಲಿ, ಇಲಿ ಹಿಡೀದಿದ್ದ ಬೆಕ್ಕು. ಬೆಕ್ಕಿಗೆ ಗುದ್ ಹೊಡೆವ್ಯೊ?' ಕೇಳಿತು. 'ಸಾಕಿದ ಬೆಕ್ಕು. ಗುದ್ ಕೊಡುದಿಲ್ಲ' ಅಂದ ಅಜ್ಜ, ಆಗೆ ಅಜ್ಜಿ ಹತ್ರ ಹೋಯ್ತು. 'ಅಜ್ಜಂಗೆ ಗುದ್ ಕೊಡವ್ಯೊ?' ಕೇಳ್ತದೆ. 'ಅಂವ ನನ್ನ ಗಂಡ. ಆಗುದಿಲ್ಲಾ' ಅಂತು ಅಜ್ಜಿ.

ಆಕಳ ಹತ್ರ ಹೋಯ್ತು. 'ಅಜ್ಜಿ ದೂಡ್ ಹಾಕವ್ಯೊ' ಕೇಳ್ತದೆ. ಆಕಳು ದೂಡ್ ಹಾಕುದಿಲ್ಲ ಅಂತು. ಕರು ಕೈಲಿ ಆಕಳ ಮೊಲೆ ಕಡಿವ್ಯೊ ಕೇಳ್ತದೆ. ಅದು ತಾನು ಕಡಿಯೂದಿಲ್ಲಾ ಅಂತು.

ಆಗ ಕಟ್ಟೆಯೆರುನ್ನ ಕೇಳ್ತದೆ. 'ಕರು ಕಾಲ್ ಕಡಿವ್ಯೊ?'

ಕಟ್ಟೆಯೆರು ಕರು ಕಾಲ್ ಕಚ್ಚತದೆ. ಕರು ಆಕಳ ಮೊಲೆ ಕಡಿತು. ಆಕಳು ಅಜ್ಜಿ ದೂಡಾಕ್ತು. ಅಜ್ಜಿ ಅಜ್ಜಂಗೆ ಗುದ್ ಕೊಡ್ತು. ಅಜ್ಜ ಬೆಕ್ಕಿಗೆ ಗುದ್ ಕೊಟ್ಟ. ಬೆಕ್ಕು ಇಲಿ ಹಿಡುಕೋಯ್ತು. ಇಲಿ ತಪ್ಪಕಂಡಿ ಅಂಬಿಗರಣ್ಣನ ಬಲಿ ಕಡಿತು. ಅಂಬಿಗರಣ್ಣ ಬಸವನ ಹೊಡೆದ. ಬಸವ ಗೌಡನ ಗದ್ದೆ ತಿಂತು. ಗೌಡ ಆಚಾರಿ ಉಳಿ ಬಾಚಿ ಕಸೂಕ್ ಹೋದ. ಆಚಾರಿ, 'ನಾ ಬಾಳೆಹಣ್ಣ್ ತೆಕ್ಕೊಡ್ತೆ' ಹೇಳಿ ತೋಡಿ ತೆಗ್ದ.



ಕವಿ ಸಮಯ

## ಅಜ್ಞೇಯ

**(7-3-1911 – 4-4-1987)**

## ಒಮ್ಮೊಮ್ಮೆ

ದಿನ ಮುಳುಗುತ್ತವೆ ಪ್ರತಿ ದಿನ ಆದರೆ
ಕಳೆಯುತ್ತವೆ ಒಮ್ಮೊಮ್ಮೆ

ಕೊಡಗಳು ಸದ್ದು ಮಾಡುತ್ತ
ಖಾಲೀ ಆಗುತ್ತವೆ ಪ್ರತಿ ದಿನ ಆದರೆ
ತುಂಬಿ ತುಳುಕುತ್ತವೆ ಒಮ್ಮೊಮ್ಮೆ

ಭಾಗ್ಯ ತಡೆಯುತ್ತದೆ ನಮ್ಮನ್ನು
ಹಜಾರು ಸಲ ಹಜಾರು ಕ್ಷಣ ಆದರೆ
ನೀಡುತ್ತದೆ ಚಿಲ್ಲರೆ ಪೈಸೆ ದಾನ ಒಮ್ಮೊಮ್ಮೆ

ನನ್ನನ್ನು ತಿಳಿದುಕೊಂಡಿದ್ದೇನೆಂದು ಪ್ರತಿ ಸಲ
ಅಂದುಕೊಳ್ಳುತ್ತೇನೆ ಆದರೆ
ನನ್ನ ಗುರುತು ನನಗೇ ಸಿಗುತ್ತದೆ-ಒಮ್ಮೊಮ್ಮೆ

ಹೆಸರು: ಸಚ್ಚಿದಾನಂದ ಹೀರಾನಂದ ವಾತ್ಸಾಯನ.

ಕಾವ್ಯನಾಮ: ಅಜ್ಞೇಯ.

ಕನ್ನಡದ ಅಡಿಗ, ಮರಾಠಿಯ ಮರ್ಢೇಕರ್ ತರಹ ಹಿಂದಿ ನವ್ಯಕಾವ್ಯದ ಪ್ರವರ್ತಕರು. ಇಷ್ಟೇ ಅಲ್ಲ ಕಾದಂಬರಿ-ಕಥಾ ಸಾಹಿತ್ಯ- ನಿಬಂಧ ಸಾಹಿತ್ಯದಲ್ಲೂ ಕಾವ್ಯದಂತೆಯೇ ಅಗ್ರಪಂಕ್ತಿಗೆ ಸೇರಿದವರು. 1949ರಲ್ಲಿ ಅವರು ಬರೆದ 'ಶೇಖರ ಏಕಜೀವನಿ' ಹಾಗೂ 1951ರಲ್ಲಿ ಬರೆದ 'ನದೀ ಕೆ ದ್ವೀಪ್' ಇಂದಿಗೂ ಹಿಂದೀ ಕಾದಂಬರಿ ಸಾಹಿತ್ಯದಲ್ಲಿ ಮೈಲುಗಲ್ಲುಗಳು.
ಹಿಂದಿ ಭಾಷೆಗೆ ಇಷ್ಟೊಂದು ಮೆರುಗು, ವೈಭವ, ಪ್ರಗಲ್ಭತೆ ಇದೆ ಎಂದು ಅವರಿಗಿಂತ ಮೊದಲು ಮತ್ತು ಅವರ ನಂತರ ನಿರ್ಮಲ ವರ್ಮಾರನ್ನು ಬಿಟ್ಟರೆ ಯಾರೂ ತೋರಿಸಿಕೊಟ್ಟಿರಲಿಲ್ಲ. 17 ಕಾವ್ಯ ಸಂಕಲನ, 8 ಕಥಾ ಸಂಗ್ರಹ, ಮೂರು ಕಾದಂಬರಿಗಳು, 22 ನಿಬಂಧ ಸಂಗ್ರಹ, 5 ಡೈರಿ ಸಂಸ್ಮರಣ.... ಯಾತ್ರಾ ವಿವರ, ಒಂದು ನಾಟಕ, 8 ಅನುವಾದಿತ ಪುಸ್ತಕಗಳು. 17 ಸಂಪಾದಿತ ಗ್ರಂಥಗಳು. ಇತ್ಯಾದಿ 80ಕ್ಕೂ ಮೀರಿದ ಪುಸ್ತಕಗಳು.
ಉಜ್ವಲ ಪ್ರೇಮಲ ವ್ಯಕ್ತಿತ್ವ. ಋಷಿಯಂಥ ಮುಗುಳ್ನಗು. ಕಾಲೇಜು ದಿನಗಳಲ್ಲಿ ಬಾಂಬ್ ತಯಾರಿಸುವ ಕೆಲಸದಲ್ಲಿ ನಿರತ. ಇಂಗ್ಲಿಷ್‌ರ ಜೊತೆ ಬೇನಾಮೀ ಯುದ್ಧ. ಬಂಡಾಯ, ಬರೀ ಸಾಹಿತ್ಯದಲ್ಲಿ ಮಾತ್ರ ಅಲ್ಲ.... ಬದುಕಿನಲ್ಲೂ ಎಂದು ನಂಬಿ ಬದುಕಿದವರು. ಅವರಿರುವವರೆಗೆ ಅವರಿಗೆ ದೊರೆಯದ ಯಾವ ಪುರಸ್ಕಾರಗಳೂ ಇರಲಿಲ್ಲ.
ಇವರ ಕವಿತೆಗಳನ್ನು ಇಲ್ಲಿ ಕನ್ನಡಕ್ಕೆ ತಂದಿರುವ **ಮುಕುಂದ ಜೋಷಿ** ತಮ್ಮ 'ನಿರುತ್ತರ' ಕಾದಂಬರಿ ಮತ್ತು 'ಒಂದು ಸಂಜೆ ಬೆಳಗಾದಾಗ' ಕಥಾ ಸಂಗ್ರಹಗಳ ಮೂಲಕ ಕನ್ನಡ ಓದುಗರಿಗೆ ಪರಿಚಿತರು.



# ಚಹಾ ಕುಡಿಯುವಾಗ

ಚಹಾ ಕುಡಿಯುವಾಗ
ನಾನು ನನ್ನ ತಂದೆಯ ಬಗ್ಗೆ ಯೋಚಿಸುತ್ತಿದ್ದೇನೆ
ನೀವೆಂದಾದರೂ ಚಹಾ ಕುಡಿಯುವಾಗ
ತಂದೆಯ ಬಗ್ಗೆ ಯೋಚಿಸಿದ್ದೀರಾ?

ಒಳ್ಳೆಯದಲ್ಲ
ತಂದೆಯ ಬಗ್ಗೆ ಯೋಚಿಸುವದು

ನಮ್ಮ ಗುಟ್ಟುಗಳೆಲ್ಲ
ಬಯಲಾಗುತ್ತವೆ

ನಾವು ಇನ್ನೂ ಏನೋ ಆಗಬಹುದಿತ್ತು
ಆದರೆ
ಯೋಚನೆಯ ತೊಂದರೆ ಅಂದರೆ
ಅದು ಕಾಣಿಸಿಕೊಡುತ್ತದೆ:
ಒಂದು ವೇಳೆ
ನಾವು ಇನ್ನೂ ಏನೋ ಆಗಿದ್ದರೆ
ತಂದೆಗೆ ಹತ್ತಿರದವರಾಗುತ್ತಿದ್ದೆವು
ಅವರಂತೆಯೇ ಆಗುತ್ತಿದ್ದೆವು

ಎಷ್ಟೊಂದು ದೂರ ಹೋಗಬೇಕಾಗುತ್ತದೆ ಯಾಕೆ
ತಂದೆಯಿಂದ ತಂದೆಯಂತಾಗಲು

ತಂದೆ ಕೂಡ ಬೆಳಿಗ್ಗೆ
ಚಹಾ ಕುಡಿಯುತ್ತಿದ್ದರು




# ಪರದೇಶದಲ್ಲಿ

ಅಲ್ಲಿ
ಪರದೇಶದಲ್ಲಿ ಎಷ್ಟೊಂದು ಸಲ
ಎಷ್ಟೊಂದು ಖೋಲಿಗಳನ್ನು ಖಾಲೀ
ಮಾಡಿದ್ದೇನೆ
ಅವುಗಳನ್ನು ಖಾಲೀ ಮಾಡುವಾಗ
ಮರಳಿ ನೋಡಿದ್ದೇನೆ
ಎಲ್ಲಾ ಮೊದಲಿನಂತೆ ಇದೆಯಲ್ಲ-ಠೀಕ-ಠಾಕ
ಎಲ್ಲಿಯೂ ನನ್ನಾವ
ಗುರುತು ಉಳಿದಿಲ್ಲ ತಾನೆ?
ಮುಂಬರುವ ಬಾಡಿಗೆದಾರ
ಅದನ್ನು ತಪ್ಪು ತಿಳಿಯಲಾರ ತಾನೆ?
ಯಾವ ಖೋಲಿಯಲ್ಲೂ ನಾನು
ನನ್ನದೇನನ್ನೂ ಬಿಟ್ಟಿಲ್ಲ ಕಸದ ಹೊರತಾಗಿ
ಆ ಕಸವನ್ನೂ ಸಾಫು ಮಾಡಲಾಗುತ್ತದೆ
ಮುಂಬರುವ ಬಾಡಿಗೆದಾರನಿಗಾಗಿ



ಇಲ್ಲಿ
ನನ್ನ ದೇಶದಲ್ಲಿ
ರೇಲ್ವೆ ಹಳಿಗಳ ಬಳಿ ಕುಳಿತಿದ್ದೇವೆ
ಮತ್ತೆ ಮತ್ತೆ ಹೊರಳಿ ನೋಡುತ್ತೇನೆ
ಎಲ್ಲ ಇದೆಯಲ್ಲ ಮೊದಲಿನಂತೆ-ಠೀಕ-ಠಾಕ
ಅಂದರೆ ಪ್ರತಿ ವಸ್ತುಗಳ ಮೇಲೆ
ನನ್ನ ಗುರುತು ಉಳಿದಿದೆಯಲ್ಲ...
ಈ ನನ್ನ ಟ್ರಂಕು.... ನನ್ನ ಚೀಲ
ನನ್ನ ಗಾದಿ... ದಾಡಿ ಸಾಮಾನು
ಸೂಜಿದಾರ ಶರ್ಟಿನಿಂದ ಕಳಚಿದ ಬಟನ್
ಈ ನನ್ನ ನೋಟಬುಕ್ಕು
ಅದರಲ್ಲಿನ ನನ್ನ ಬರವಣಿಗೆ
ಮತ್ತೆ ಈ ನನ್ನ ಹೆಸರು



# ಅವರು ಮನೆ ಕಟ್ಟಿದರು

ಅವರು ಮನೆ ಕಟ್ಟಿದರು ಮತ್ತೆ ಮುಂದೆ ನಡೆದರು
ಮತ್ತೆ ಮನೆ ಕಟ್ಟುವದಕ್ಕಾಗಿ

ನಾವು ಆ ಮನೆಗಳನ್ನು ಕಂಡು....ಕೊಂಡು
ಅಲ್ಲೇ ಉಳಿದೆವು ಅಲ್ಲೇ ನಮ್ಮ ವಂಶ ಬೆಳೆಸುವೆವು
ಮತ್ತು ಅಲ್ಲೇ ಮಣ್ಣಾಗುವೆವು
ಇದರ ನಂತರ ಕಥೆ ಎಲ್ಲಿ ಮುಟ್ಟಬಹುದು?

ಅವರು ಸಿಮೆಂಟನ್ನು ಜಾಳಿಸಿ
ಹೊಸ ಇಟ್ಟಂಗಿಗಳನ್ನು ತಯಾರಿಸುವಾಗ ನಾವೆಲ್ಲಿ?

ಒಂದು ಬಿಂದುವಿನವರೆಗೆ
ನಾವು ಕಥೆಯನ್ನು ಕಟ್ಟುತ್ತೇವೆ
ನಂತರ ಕಥೆ ನಮ್ಮನ್ನು ಕಟ್ಟುತ್ತದೆ

ಆ ಬಿಂದುವಿನ ನಿಜವಾದ ಗುರುತು
ನಮಗೆ ಸಿಕ್ಕುವುದೆಂತು



# ಕೃಷ್ಣ ಪ್ರೀತಿಸಿದ

ಕೃಷ್ಣ ಪ್ರೀತಿಸಿದ ಎಷ್ಟೆಲ್ಲ ಗೋಪಿಯರನ್ನು
ಎಷ್ಟೊಂದು ಸಲ ಆದರೆ

ನಿವಾಳಿಸಿದ ತನ್ನೆಲ್ಲ ಅಕ್ಕರತೆಯನ್ನು
ಆ ಒಬ್ಬಳ ಮೇಲೇ
ಕೈಗೆ ಸಿಗದಿದ್ದವಳ ಮೇಲೇ
ಯಾವುದೇ ಪ್ರೇಯಸಿಯಲ್ಲಿ
ಆ ಅವಳನ್ನೇ ಕಂಡಿದ್ದರೆ
ಪಡೆದುಕೊಂಡಿದ್ದರೆ
ಪುನಃ ಬೇರೆಯವಳನ್ನು
ಯಾಕೆ ಪ್ರೀತಿಸುತ್ತಿದ್ದ?

ಕವಿ ಹೊಸ ಹೊಸ ಹಾಡುಗಳನ್ನ ಬರೆದ ಪ್ರತಿ
ಸಲ
ಆದರೆ
ಯಾವ ವಿಷಯಕ್ಕೆ ಕೊಡಲಿಲ್ಲವೋ ವಿಸ್ತಾರ
ಯಾವುದನ್ನು ಮುಟ್ಟಲಾಗಲಿಲ್ಲವೋ...
ತಟ್ಟಲಾಗಲಿಲ್ಲವೋ
ಅದನ್ನೇ ಬರೆದ
ಮತ್ತೆ-ಮತ್ತೆ.... ಪುನಃ ಪುನಃ
ಒಂದು ಹಾಡಿನಲ್ಲೇ
ಅದೆಲ್ಲ.... ಅವೆಲ್ಲ ತುಂಬಿ ತುಳುಕಿದ್ದರೆ
ಬರೆಯುತ್ತಿದ್ದನೇ
ಬೇರೆ ಹಾಡನ್ನ?

ಕನ್ನಡಕ್ಕೆ: **ಮುಕುಂದ ಜೋಷಿ**



ತುಳಸಿ ವೇಣುಗೋಪಾಲ್



## ನೀನು

ನೀನು,
ರೋಚಕ ಪುಸ್ತಕದ ಅಧ್ಯಾಯ ಆಗಿದ್ದಿದ್ದಾದರೆ
ಓದಿ, ಖುಷಿಪಟ್ಟು ಮರೆತು ಬಿಡಬಹುದಾಗಿತ್ತು
ಅಥವಾ ನೆನಪಿಗಾಗಿ
ಗೆರೆ ಎಳೆದಿಟ್ಟ ವಾಕ್ಯ ಆಗಿದ್ದಿದ್ದಾದರೆ
ಆಗೀಗ ಮೆಲುಕು ಹಾಕಿ
ಪರವಶಗೊಳ್ಳಬಹುದಿತ್ತು
ಆದರೆ ಕೈ ಹಿಡಿದು
ಸ್ಲೇಟು ತುಂಬಾ ತಿದ್ದಿದ ಅಕ್ಷರ
ಮನಸ್ಸಿನಿಂದ ಅಳಿಸುವುದಾದರೂ ಹೇಗೆ ಹೇಳು.



## ಪುಟಗಳ ಮಧ್ಯದಲ್ಲೊಂದು ನವಿಲುಗರಿ

ಪುಟಗಳನ್ನು ತೆರೆಯುತ್ತೀರಾ ಒಂದಿಷ್ಟು
ಸಾವಕಾಶ
ಇರಬಹುದು ಅಲ್ಲೊಂದು ನವಿಲುಗರಿ

ಬಿಸಿ ಜಳಕದ ಬಳಿಕ ಬಿಗಿದು
ಕಟ್ಟಿ ಜೋಗುಳ ತೂಗಿ ಎಂದೋ
ನಿದ್ದೆಗಿಳಿಸಿದ ಹಸುಗೂಸು ತುಟಿ ಅರಳಿಸಿ
ಮೈ ಪುಳಕ, ಮನ ಪುಳಕ

ಬಾಲ್ಯಕಾಲ ಸಖಿ ಅರಸಿ ನದಿತೀರ
ತಂದ ನವಿಲುಗರಿಗೆ ಸಣ್ಣಗೆ ನಡುಕ
ಮಿರಿ ಮಿರಿ ಬಣ್ಣಕ್ಕೆ ಬೈಗುಗಪ್ಪಿನ ತಿಲಕ
ಗರಿಯ ಕಣ್ಣಕಾಡಿಗೆ ಕಿರುಬೆರಳಿಗೆ ತೀಡಿ
ವಶೀಕರಣದ ರೇಖೆ ಕಣ್ಣಂಚಿಗೆ

ಜೋಪಾನ ಹುಡುಗ, ಜತೆಯಲ್ಲಿ ನಡೆದ ಹೆಜ್ಜೆ
ಆರಿಸಿ ಪೋಣಿಸಿದ ರೆಂಜೆ ಜಗಲಿ ತುಂಬಾ
ಹಚ್ಚಿಟ್ಟ ಹಣತೆ ಬೊಗಸೆಯಲ್ಲಿ ಮಿಣಿ ಮಿಣಿ
ಮಿಂಚುಹುಳ ಎಂದರೆ ಹಗೂರ ಗರಿ
ಪುಟದೊಳಗಿಳಿಸಿ ಕಾವು ಕೊಟ್ಟ ಜಾಣ

ಗರಿಗೆ ಮರಿ ಮೂಡಿ ಮರಿ ನವಿಲು
ಗರಿಗೆದರಿ ಮುಗಿಲು ನೋಡಿ
ಸಂದೇಶ ಹೊತ್ತ ಬೀಗಿಗೆ ಹನಿಯಲು
ಮರೆತು ಹೋದ ಸಾಲು ಮೋಡಗಳು
ಈಗ ನಿರೀಕ್ಷೆಯ ಮೆಟ್ಟಲಲ್ಲಿ ಹೆಜ್ಜೆಗಳ ಕಾಗುಣಿತ
ಮಧ್ಯಂತರದಲ್ಲಿ ಆಗೀಗ ಕಣ್ಣು ಹನಿಸುವ ನೆನಪು

ನವಿಲುಗರಿ ಹಾರಿ ಹೋಗುವುದಿಲ್ಲ ರೆಕ್ಕೆ ಹರಡಿ
ಲಯಬದ್ಧ ಕುಣಿಯುತ್ತದೆ ಎಲ್ಲೋ
ಹಾಳೆಗಳ ಮಧ್ಯೆ ಆವಿತು



## ರಂಗ ಪ್ರವೇಶ

ನಿನ್ನ ಪುಟ್ಟ ಕೈಗಳಿಗೆ ಬೆಳ್ಳಿ
ಪದಕ ಸಾಕೇನೊ
ಗಿಣಿ ಮಾತಿನ ಹುಡುಗಾ

ಮೇಕಪ್ಪು ಬೇಡ ರಂಗಸ್ಥಳ ಸಾಕು
ಮತ್ತೊಂದಿಷ್ಟು ಬೆಳಕು ಭಾವಕ್ಕೆ ನಿರ್ದೇಶಕ
ನೀನೇ ತುಂಟತನದ ಮಿಂಚಿಗೆ
ಸ್ನೇಹದ ಪುಳಕ ಚಪ್ಪಾಳೆ ಕೈಗಳಿಗೆ

ಮೋಟು ಚಡ್ಡಿಯ ಹುಡುಗನಿಗೆ
ಬಣ್ಣ ಬಣ್ಣದ ದಿರಸು, ಧನುಸ್ಸು ಭಜಕೀರ್ತಿ
ತಳದಲ್ಲಿ ಮುದ್ದು ಬಾಲಗೋಪಾಲನ
ಗರಿಯ ಮುಕುಟ ಜತೆಯಲ್ಲಿ ಪಿಳ್ಳಂಗೋವಿ

ಮಂದ ಬೆಳಕಿನಲ್ಲಿ ಕಂಠಪಾಠ, ತೂಕಡಿಕೆ
ಗಂಟೆ ಬಡಿದದ್ದೇ ರಂಗಪ್ರವೇಶ ಆವೇಶ
ಕುಣಿಯುವಾಗ ಕಿಸೆಯಲ್ಲಿ ಸಣ್ಣ ಆಸೆ ಭದ್ರ
ಮುಚ್ಚಿಟ್ಟುಕೊಳ್ಳಲು ನಿಬ್ಬು, ಹುರಿಗಾಳು, ಕರಪತ್ರ.....
ಬಿದ್ದ ತೆರೆ ಗೆದ್ದ ನಟ ಲೆಕ್ಕ
ಬೇಡ ಮುಗ್ಧ ಕನಸುಗಳಿಗೆ ಮುಖವರ್ಣಿಕೆ
ತಿಕ್ಕಿ ತೆಗೆದಷ್ಟೂ ಉಳಿಯುತ್ತವೆ ರಂಗು
ಹುಡುಗಾ, ಕಿವಿಯೊಳಗೆ ಹಲವೊಮ್ಮೆ ಮನದೊಳಗೆ

## ಗುಲಾಬಿ ಗೆಳತಿಯರು

ಬಾಗಿಲು ತೆರೆದರೆ ಕೈ ತುಂಬಾ
ಗುಲಾಬಿ ಗೊಂಚಲಿನ
ಗೆಳತಿಯರು

ಒಳಗೆ ಬಂದವರು ನೇರ ಹೂದಾನಿಗೆ
ಹುಡುಕಾಡಿ, ಇಲ್ಲಾ ಎಂದು ಮರುಗಲಿಲ್ಲ
ತಪ್ತ ಮಣ್ಣಿಗೆ ಮುಂಗಾರಿನ ಹನಿ
ಹಬ್ಬಿಸಿದ ಸುಗಂಧಕ್ಕೆ ಎಣೆಯಿಲ್ಲ

ಮೆತ್ತಗೆ ಪೊದೆ ನುಸುಳಿದ ಮಂಜು
ಹುಡುಗನ ಒದ್ದೆ ತುಟಿಗಳಂತೆ ತಂಪು
ಸ್ಪರ್ಶದ ಪುಳಕವಷ್ಟೂ ಹನಿ ಹನಿ
ಮುತ್ತು ಅರೆ ಬಿರಿದ ದಳಕ್ಕೆ

ಕೆಂಪು ಕೆನ್ನೆಯವಳಿಗೆ ಮಾತಿಗೊಂಡು ನಗು
ನಗುವಿಗೂ ಒಂದು ಮಾತು
ಹಾಯ್ದು ಮಂದಗಾಳಿಗೆ ಪಕಳೆಗಳು ಅರಳಿ
ಗುಣುಗುಣಿಸಿದ್ದು ಯಾವ ಹಾಡದು ಗೆಳತಿ?

ಮರೆತು ಬಂದ ಪುಟ್ಟ ತೋಟದ ಗುಲಾಬಿ
ಪಾತಿಯ ಮಣ್ಣು ಕೈಗೆ ಮದರಂಗಿ
ಈಗ ಬಣ್ಣ ಕಳೆದುಕೊಂಡ ಬೆರಳಿಗೆ
ಯಾವ ವಿನ್ಯಾಸ ಬರೆಯುತ್ತೀ ಗೆಳತಿ?

ವಿದಾಯ ಹೇಳಿದ ಬಳಿಕ
ಕೂಡಾ ಗೊಂಚಲಲ್ಲಿ ಅದೇ ರಾಗ
ಮೌನ ಸಂಜೆಯ ಏಕಾಕಿತನಕ್ಕೆ ಶ್ರುತಿ
ಹಿಡಿಯಲೆಂದೇ ನೋಡಿ, ಹೇಗೆ ಕಂಪಿಸುತ್ತಿವೆ.

(ಕವಯಿತ್ರಿಯ "ಪುಟಗಳ ಮಧ್ಯದಲ್ಲೊಂದು ನವಿಲುಗರಿ" - ಪ್ರಥಮ ಕವನ ಸಂಗ್ರಹ (1999) ದಿಂದ ಆಯ್ದ ಕವಿತೆಗಳು.)



ಕವಲೆತ್ತಿನ ಭೋಜಪ್ಪ ಮಲಗಿದಲ್ಲೆ ಹೊರಳಾಡುತ್ತ, ರೆಪ್ಪೆ ಬಡಿದು ಕತ್ತಲನ್ನು ಕಲೆಸುತ್ತ, ಗಾಳಿಪಟವಾದಂತಿದ್ದ ತನ್ನ ಮನಸನ್ನು ಎಳೆಯುತ್ತ ಚಾಪೆ ಮೇಲೆ ಎದ್ದುಕುಳಿತ. ಪಕ್ಕದ ಕಿಟಕಿಯಿಂದ ಜಾರಿದ ಚಂದ್ರನ ಕಸೂತಿ ಬೆಳಕನ್ನು ಹೊದ್ದು ನಿದ್ರೆಯ ಮಡಿಲಲ್ಲಿದ್ದ ಹೆಂಡತಿ ಮತ್ತು ಮಗಳನ್ನು ದಾಟಿ, ಬಾಗಿಲು ತೆರೆದು ಅಂಗಳಕ್ಕೆ ಬಂದು ತಂಗಾಳಿಯಲ್ಲಿ ನಿಂತ. ಗದ್ದೆಯ ಬಯಲು, ಬೊಗಸೆಯಲ್ಲಿ ಬೆಳದಿಂಗಳು ತುಳುಕುತ್ತಿತ್ತು. ಲಹರಿ ಬಂದು, ತಾನು ಪ್ರೀತಿಯಿಂದ ನುಡಿಸುವ 'ಅಮರಾ ಮಧುರಾ ಪ್ರೇಮ....', ನೆನಪಾಗಿ, ಒಳಗೆ ಹೋಗಿ ಕಂಬದ ಮೂಲೆಯಲ್ಲಿ, ಬಟ್ಟೆಯಲ್ಲಿ ಸುತ್ತಿಟ್ಟ ಶಹನಾಯಿ ಹಿಡಿದು ಹೊರಗೆ ಬಂದ. 'ಅಲಲಾ sss ಎಷ್ಟು ಚೆಂದದ ಪರಮಾತ್ಮ' ಎಂದು ಮೌನಾಕಾಶ ಮುಡಿದುಕೊಂಡ ನಡುರಾತ್ರಿಯ ಚಂದ್ರನನ್ನು ನೋಡಿ ಸಂಭ್ರ

ಮಿಸಿದ. ಮರುಕ್ಷಣ, ದೇವರ ಸುತ್ತ ಮಂಡಗೆ ಮಿನುಗುವ, ಮೋಡದಿಂದ ಮಾಡಿದಂಥ ಬಳೆ ನೋಡಿ ದಂಗಾದ. ದೇಶವನ್ನು ಆಳುವ ನಾಯಕರಿಗೋ, ಲೋಕದ ಜನರಿಗೋ ಒದಗುವ ಗಂಡಾಂತರವನ್ನು ಸೂಚಿಸುವ ಆಗಸದ ವಿಸ್ಮಯವನ್ನು, ತನ್ನ ಮುದಿ ತಾತ, 'ಚಂದ್ರನ ಕೊಡೆ' ಎಂದು ಕರೆದು, ಏನೇನೊ ಕಥೆಗಳನ್ನು ಹೇಳುತ್ತಿದ್ದದ್ದು ನೆನಪಾಗಿ ರೋಮಾಂಚನಗೊಂಡ. ಆವಾಗಿನಿಂದಲೂ ತಾನು ಅನುಭವಿಸುತ್ತಿರುವ ಅಲೌಕಿಕ ಸಂಕಟಕ್ಕೆ ಕಾರಣ ಹೊಳೆದಂತಾಗಿ ಕಂಪಿಸಿದ. ಚಂದ್ರನ ಸುತ್ತ ಕೊಡೆ ಕಟ್ಟಿದರೆ ಅದೊಂದು ಜಗತ್ತಿಗೊದಗುವ ಅನಿಷ್ಟದ ಸಂಕೇತ. ಕೊಡೆ ಕಟ್ಟುವುದು, ಅದನ್ನು ನರಮನುಷ್ಯರು ನೋಡುವುದು ಬಹಳ ಅಪರೂಪವಂತೆ. ಒಂದು ಜನಾಂಗದ ಮನೋಸ್ಥೈರ್ಯವನ್ನು ಕುಂದಿಸಿಬಿಡಬಹುದಾದ ಕಾಲದ ಗುಟ್ಟನ್ನು ತನ್ನ ಎದೆಯೊಳಗೆ ರಹಸ್ಯವಾಗಿಟ್ಟುಕೊಳ್ಳಬಲ್ಲವನು ಕಣಿ ಹೇಳಬಲ್ಲನು; ಅವನಾಡುವ ಮಾತು ಸತ್ಯವಾಗುತ್ತದೆ.... ಎಂದು ಶತಾಯುಷಿಯಾಗಿ ಬದುಕಿದ್ದ ತಾತ ಹೇಳುತ್ತಿದ್ದದ್ದು ನೆನಪಾಯಿತು. ಭವಿಷ್ಯದ ಆಗುಹೋಗುಗಳನ್ನು, ಮುಂದಾಗಿ ಗ್ರಹಿಸಿ ಹೇಳುವ ಅತೀಂದ್ರಿಯ ಕಣ್ಣನ್ನು ಪಡೆದ ಅನುಭೂತಿಯಿಂದ, ಭೋಜಪ್ಪ ಹೊಸ ಮನುಷ್ಯನಾದ. ಇಬ್ಬನಿಯ ಮಬ್ಬಿನಲ್ಲಿ ದೂರಸರಿದಂತೆ ಕಾಣುವ ರಾಮಲಿಂಗದೇವಸ್ಥಾನಕ್ಕೆ ಮುಖ ಹಾಕಿ, ಕೈ ಮುಗಿದು, 'ಶಿವನೆ ಈ ಜಗದ ವಿನಾಶವನ್ನು ತಪ್ಪಿಸೋ' ಎಂದು ಪ್ರಾರ್ಥಿಸಿದ. ಗುಡಿಸಲೊಳಗೆ ಬಂದು, ಶಹನಾಯಿಯನ್ನು ಮೂಲೆಗೆ ಆನಿಸಿಟ್ಟು, ಏನೇನೊ ಕಲ್ಪಿಸುತ್ತ ಜಾಗರಣೆ ಮಾಡಿದ.

ವಾರ್ಷಿಕ ವಾಡಿಕೆಯಂತೆ ಭೋಜಪ್ಪ, ಸಂಸಾರಸಮೇತ, ಸುಗ್ಗಿಯ ಮರುದಿನ, ಬಸವಣ್ಣನ ದಂಪತಿಗಳೊಂದಿಗೆ ಮನೆಮನೆಗೆ ಸವಾರಿ ಹೊರಟು, ವಾದ್ಯ ಊದಿ, ಆಟವಾಡಿಸಿ, ಪಡಿ ಬೇಡುವುದಕ್ಕಾಗಿ ಹೊರಡಬೇಕಾಗಿತ್ತು. ರಾತ್ರಿಯ ಸಾಕ್ಷಾತ್ಕಾರದಿಂದ ಭೋಜಪ್ಪ ತನ್ನ ಮೊದಲಿನ ನಿರ್ಧಾರವನ್ನು ಬದಲಾಯಿಸಿ, ''ಗದ್ದೆಯಲ್ಲಿ ನೆಲ್ಲು ಹೆಕ್ಕೋಕೆ ನಡೀರಿ'' ಎಂದು ಸಾರಿದ. ಗಂಡನ ಯೋಜನೆ ಹಠಾತ್ತನೆ ಬದಲಾದದ್ದು, ಹೆಂಡತಿ ಶಬರಿಗೆ ಅಚ್ಚರಿಯಾಯಿತು. ಅವನ ಕಣ್ಣೊಳಗಿನ ದಿಗಿಲಿನ ಬೆಳಕನ್ನು ನೋಡಿ, ''ಯಾಕೆ ಮಂಕಾಗಿದ್ದೀ? ರಾತ್ರಿ ಕೆಟ್ಟ ಕನಸು ಗಿನಸು ಬಿತ್ತಾ?'' ಎಂದಳು. ''ಅದನ್ನು ನೀನು ಕೇಳಬಾರದು, ನಾನು ಹೇಳಬಾರದು.'' ಭೋಜಪ್ಪನ ಒಗಟನಂಥ ಭಾಷೆಗೆ ಅವಳು ಬೆರಗಾದಳು.

ಬೆಳಗ್ಗೆ ಹೆಂಡತಿ ಮತ್ತು ಮಗಳೊಂದಿಗೆ ಭೋಜಪ್ಪ ಕೊಯ್ಲಾದ ಗದ್ದೆಗೆ ನಡೆದ. ಭತ್ತದ ಪಸಿಗಳ ಕಟಾವು ಆದ ಮೇಲೆ, ಕಣ್ತಪ್ಪಿ ಉಳಿಯುವ, ತೊನ್ನಿನಂಥ, ಗಟ್ಟಿಕಾಳಿನ ತೆನೆಗಳನ್ನು ಆಯುವ ಕೆಲಸವನ್ನು ಮಾಡಿಕೊಂಡಿದ್ದ. ಗದ್ದೆಯ ಬಯಲಲ್ಲಿ ದನಗಳ ಸಗಣಿ ಎತ್ತಿ, ಬೆರಣಿ ತಟ್ಟಿ, ಪೇಟೆಯಲ್ಲಿ ಮಾರಿ ಹೊಟ್ಟೆಹೊರೆಯುವ ಉಪಕಸುಬನ್ನೂ ಅವನು ರೂಢಿಸಿಕೊಂಡಿದ್ದ. ಮನೆಮನೆಗಳಲ್ಲಿ ಮಂಗಳವಾದ್ಯ ಊದುವ ಭೋಜಪ್ಪನ ಬಗ್ಗೆ ಎಲ್ಲರಿಗೂ ಅನುಕಂಪ. ಮೂವರೂ ತೆನೆಗಳನ್ನು ಅರೆಸುತ್ತ, ಬಯಲಲ್ಲಿ ಬೇರೆ ಬೇರೆ ದಿಕ್ಕು ಹಿಡಿದು ನಡೆದರು. ಅದೊಂದು ಬೃಹದಾಕಾರದ, ಇಡೀ ಊರಿಗೆ ಸೇರಿದ ಗದ್ದೆಬಯಲು, ಸುತ್ತಲೂ ತೆಂಗಿನ ಹಿತ್ತಲ ಸಾಲು. ಅದರಾಚೆ ಸಮುದ್ರ ಸೇರುವ ಮಲೆನಾಡ ಕಾಡಿನಿಂದ ಹರಿದು ಬಂದ ಹೊಳೆ. ಬಯಲಲ್ಲಿ ಅಲ್ಲಲ್ಲಿ ಬುಗುರಿಯಾಕಾರದ ಭತ್ತದ ಬಣವೆಗಳು. ಮಗಳು ಬೆಳ್ಳಕ್ಕಿಗಳನ್ನು ಹಾರಿಸುವ ಆಟವಾಡತೊಡಗಿದಳು. ಭೋಜಪ್ಪನ ಕವಲೆತ್ತಿನ ರಾಮ-ಸೀತೆ ಜೋಡಿ ಬಯಲಲ್ಲಿ ಸುಖವಾಗಿ ಅಡ್ಡಾಡಿಕೊಂಡು ಮೇಯುತ್ತಿದ್ದವು. ಕೌದಿ ಹೊದ್ದು, ವಾದ್ಯಕ್ಕೆ ತಲೆದೂಗುತ್ತ ಸವಾರಿಹೊರಡುವ ಜೋಡಿಯನ್ನು ಬಹಿಷ್ಕರಿಸುವಂತೆ, ಊರಿನ ದನಗಳು ದೂರದಲ್ಲಿ ನಿಂತು ನೋಡುತ್ತಿದ್ದವು. ಇಬ್ಬ

ನಿಯಿಂದ ಒದ್ದೆಯಾದ ಗದ್ದೆಯ ಮೃದು ಮಣ್ಣಿನಲ್ಲಿ ಪಾದಗಳು ಹುಗಿದುಹೋದವು. ಕಾಲಿಗಂಟಿದ ಮಣ್ಣನ್ನು, ಬೂಟು ಎಂದುಕೊಂಡು ಮಗಳು ನಡೆದಾಡಿದಳು. ನದಿಯ ಕಡೆಯಿಂದ ಬೀಸುವ ಗಾಳಿಯಲ್ಲಿ ಹೊಸಭತ್ತದ ಪರಿಮಳವಿತ್ತು. ದೇವರ ಸೇವೆಗೆ ಬಿಟ್ಟ ರಾಮ-ಸೀತೆ ಜೋಡಿ, ಗದ್ದೆಯಲ್ಲಿ ತಮ್ಮ ಪಾವನ ಪಾದ ಊರಿದರೆ, ಬಂಗಾರದಂಥ ಬೆಳೆ ಬರುತ್ತದೆಂದು ಊರವರು ನಂಬಿ, ಭೋಜಪ್ಪನಿಗೆ ಆಶ್ರಯ ನೀಡಿದ್ದಾರೆ. ಅಂತೆಯೆ ಭೋಜಪ್ಪನೂ ಕೂಡ ಊರನ್ನೂ, ರಾಮಲಿಂಗ ದೇವರನ್ನೂ ನಂಬಿದ್ದಾನೆ.

ಭೋಜಪ್ಪ, ಯಾಂತ್ರಿಕವಾಗಿ, ಬಗ್ಗಿ ಬಗ್ಗಿ ತೆನೆಗಳನ್ನು ಹೆಕ್ಕುತ್ತಿದ್ದರೂ ಅವನ ಮನಸ್ಸು ಹೊಯ್ದಾಡುತ್ತಲೇ ಇತ್ತು. ಚಂದ್ರನ ಕೊಡೆಯ ದರ್ಶನಭಾಗ್ಯ ತನಗೊಬ್ಬನಿಗೇ ಆಗಿರಬಹುದೆಂದು ಅವನಿಗೆ ಅನ್ನಿಸತೊಡಗಿತು. ಹೆಂಡತಿಗೆ ಹೇಳಿಬಿಡುವ ಮನಸ್ಸಾದರೂ ಹೇಗೊ ತಡೆದುಕೊಂಡ. ಪ್ರಕೃತಿಯ ಮೂಲಕ, ದೇವರು ತನ್ನ ಬಗೆಬಗೆಯ ಸಂಜ್ಞೆಗಳನ್ನು ಕಳುಹಿಸಬಹುದೆಂದು ಏನೇನೋ ಕಲ್ಪಿಸಿಕೊಳ್ಳತೊಡಗಿದ. ಹೊತ್ತೇರಿತು. ಸಂಗ್ರಹಿಸಿದ ತೆನೆಗಳನ್ನು ಚೀಲದಲ್ಲಿ ತುಂಬಿ, ಹೆಗಲಿಗೇರಿಸಿಕೊಂಡು ಗುಡಿಸಲಿಗೆ ನಡೆದರು.

ದೇವರಿಗೆ ವಾದ್ಯದ ಸೇವೆ ಸಲ್ಲಿಸುವ ಮನಸ್ಸಾಯಿತು. ಅಂಗಳದಲ್ಲಿ ಮಲಗಿದ ಎತ್ತು ಮತ್ತು ಆಕಳ ಜೋಡಿಯನ್ನು ಭೋಜಪ್ಪ ಎಬ್ಬಿಸಿದ. ಈ ಜೋಡಿಯನ್ನು ರಾಮ ಮತ್ತು ಸೀತೆ ಎಂಬ ಹೆಸರಿನಿಂದ ಕರೆಯುತ್ತಿದ್ದ. ಅವುಗಳ ನಾಮಾಂಕಿತದಲ್ಲಿ ಕಾಡು ಮತ್ತು ಅಲ್ಲಿ ರಾಮ ಸೀತೆ ಅನುಭವಿಸಿದ ಪಾಡಿನ ಸ್ಮರಣೆಯಿರುತ್ತಿತ್ತು. ಬಣ್ಣಬಣ್ಣದ ತೇಪೆಗಳಿರುವ ಚಿತ್ರದ ಕೌದಿಯನ್ನು ಅವುಗಳ ಬೆನ್ನಿಗೆ ಹೊದೆಸಿದ. ಹಳದಿ ಬಣ್ಣ ಹಚ್ಚಿದ ಕೋಡುಗಳಿಗೆ ಲೈನನ್ ರಿಬ್ಬನ್ನಿನ ಗೊಂಡೆ ಹೂವು ಮಾಡಿ ಕಟ್ಟಿದ. ಕೊರಳಿಗೆ ಗೆಜ್ಜೆ ಸರಪಳಿ ಕಟ್ಟಿ, ಹಣೆಯ ಮಧ್ಯ ಕುಂಕುಮವಿಟ್ಟು ಪೂಜಿಸಿದ. ಹಚ್ಚೆ ಚುಚ್ಚಿಸಿಕೊಂಡ ತನ್ನೆರಡು ಕೈಗಳಿಂದ ಶಬರಿ ಹಾಡುತ್ತ, ಆರತಿ ಎತ್ತಿದಳು. ಭೋಜಪ್ಪ ವಾದ್ಯವನ್ನು ಹೆಗಲಿಗೇರಿಸಿದ. ಶಬರಿ ಡೋಲು ಎತ್ತಿಕೊಂಡಳು. ರಾಮ-ಸೀತೆ ಜೋಡಿ, ಭೋಜಪ್ಪನ ಮಗಳನ್ನು ಹಿಂಬಾಲಿಸಿತು. ಸವಾರಿ ಹೊರಟಾಗ ಸೂರ್ಯ ಪಶ್ಚಿಮದ ದಿಗಂತದಲ್ಲಿದ್ದ.

ಕಾಶಿ ಮಾಸ್ತರು, ಆಗಷ್ಟೇ ದೇವಸ್ಥಾನದ ಬಾಗಿಲು ತೆರೆದು, ಕಟ್ಟೆಯ ಮೇಲೆ ಕುಳಿತಿದ್ದರು. ಸವಾರಿ ನೋಡಿದ ಮಾಸ್ತರು, ''ಈಗ್ಯಾಕೊ ಸೇವಾ!'' ಎಂದು ವಿಚಾರಿಸಿದರು. ''ಶಿವಪ್ಪನ ಇಚ್ಛಾ'' ಎನ್ನುತ್ತ ಭೋಜಪ್ಪ ನಂದಿಯ ವಿಗ್ರಹದ ಪಕ್ಕ ಕುಳಿತು ವಾದ್ಯ ಊದತೊಡಗಿದ. ಜತೆಯಲ್ಲಿ ಕುಳಿತ ಶಬರಿ ಡೋಲು ಹೊಡೆಯತೊಡಗಿದಳು. ಹಾಡು ಅಲೆಅಲೆಯಾಗಿ ಪ್ರತಿಧ್ವನಿಸುತ್ತ, ಇಡೀ ಬಯಲು ಚೈತನ್ಯದಿಂದ ತುಂಬಿತುಳುಕತೊಡಗಿತು. ಸಂಜೆಯ ವಾದ್ಯಕೇಳಿದ ಜನರು ದೇವಸ್ಥಾನದ ಅಂಗಳದಲ್ಲಿ ಜಮಾಯಿಸಿದರು. ''ಭೋಜಪ್ಪ ಮದುವೆ ಆಟ ತೋರಿಸೊ'', ಮಕ್ಕಳು ಹಟ ಹಿಡಿದು ಒತ್ತಾಯಿಸತೊಡಗಿದರು. ಚಿಣ್ಣರ ಪೀಡೆಗೆ ನಿರುಪಾಯನಾಗಿ ಭೋಜಪ್ಪ, ಮದುವೆ ಆಟ ತೋರಿಸಲು ತಯಾರಾದ. ರಾಮ ಸೀತೆಯರನ್ನು ಎದುರುಬದುರು ನಿಲ್ಲಿಸಿದ. ಶೃಂಗಾರಗೊಂಡ ಸೀತೆ, ಗಂಡನೆದುರು ನಾಚಿಕೊಂಡಂತೆ ತಲೆತಗ್ಗಿಸಿ ನಿಂತಿತು. ಶಬರಿ ಶೃತಿ ನುಡಿಸತೊಡಗಿದಳು. ಮಗಳು ಆಟಕ್ಕೆ ಉತ್ತೇಜನ ನೀಡುವಂತೆ ಆಗಾಗ ಡೋಲು ಬಾರಿಸತೊಡಗಿದಳು. ರಾಮನ ಕಿವಿಯ ಬಳಿಬಾಗಿ ಭೋಜಪ್ಪ, ''ಸೀತೆಯೆಂಬ ಕನ್ಯಾಮಣಿಯನ್ನು ಲಗ್ನಮಾಡಿಕೊಳ್ತೀಯಾ?'' ಎಂದು ಕನ್ಯಾಪಿತೃವಿನಂತೆ ಯಾಚಿಸಿದ. ಸೆಟೆದುಕೊಂಡ ರಾಮ ಕೋಡು ಕುಣಿಸುತ್ತ ಒಲ್ಲೆನೆಂದ. ಸೀತೆ ನಾಚಿ, ಮುಖ ಆಚೆ ಹಾಕಿದಳು. ''ನೀನು ಒಪ್ಪದಿದ್ದರೆ ನಾನಿಲ್ಲೇ ಉಪವಾಸ ಮಲಗ್ತೇನೆ,'' ಭೋಜಪ್ಪ ನೆಲದ ಮೇಲೆ ಅಂಗಾತ ಮಲಗಿದ. ರಾಮ ಮುಂದೆಬಂದು ಸರಪಳಿಯ ಕೊರಳನ್ನು

ತೂಗಿ, ಮೂಸಿ, ಹೆಣ್ಣನ್ನು ಒಪ್ಪಿತು. ವಾದ್ಯಸ್ವರ, ಡೋಲುಬಡಿತ ತೀವ್ರವಾಯಿತು. ರಾಮ ಸೀತೆ ಪರಸ್ಪರ ಪ್ರೀತಿಯಿಂದ ಮೈಸೆಕ್ಕತೊಡಗಿದವು. ''ಎಲ್ಲಿಗೆ, ವನವಾಸಕ್ಕೆ ಹೊರಟಿದ್ದೀಯಾ?'' ರಾಮ ಗೊಂಡೆಯ ಕೋಡನ್ನು ಕುಣಿಸಿ, ತನ್ನ ಮುಂಗಾಲನ್ನು ಮಡಚಿ ನಮಸ್ಕರಿಸಿ, ವನವಾಸಕ್ಕೆ ಸಿದ್ಧವಾದ. ಸೀತೆ ಕಣ್ಣೀರು ಹರಿಸಿದಳು. ಜನರೆಲ್ಲ ಚಪ್ಪಾಳೆ ತಟ್ಟಿದರು. ವಾದ್ಯ ನಿಂತಿತು. ಮಾಸ್ತರು ಮೊರದಲ್ಲಿ ಭತ್ತ ತಂದುಕೊಟ್ಟರು. ಭೋಜಪ್ಪನ ಸವಾರಿ ಗುಡಿಸಲಿಗೆ ಮರಳಿತು.

ಮತ್ತೆರಡು ದಿನಗಳವರೆಗೆ ಭೋಜಪ್ಪ, ಗದ್ದೆಯಲ್ಲಿ ತೆನೆಹೆಕ್ಕುವ ಕೆಲಸವನ್ನು ಮುಂದುವರಿಸಿದ.

ಯನ್ನು ಸುಲಿದು, ಕುಡುಗೋಲಿನಿಂದ ತೆನೆಗಳ ಕತ್ತರಿಸಿ, ಗೋಣಿ ಚೀಲ ತುಂಬುತ್ತಿದ್ದ ಭೋಜಪ್ಪನ ಎದೆಯ ದೀಪವೇ ಆರಿಹೋ ತಾಗಿತ್ತು. 'ಊರಿನ ದುರ್ದೆಶೆ ಸುರು ಆತು ಯಾರೋ ಆಡಿದಂತಿದ್ದ ಮಾತೊಂದು ಅ ಬಾಯಿಂದ ಉದುರಿತು. ಆ ದೃಶ್ಯವನ್ನು ಒಂ ಯಾಗಿ ನೋಡುವ ಧೈರ್ಯ ಸಾಲದೆ, ಒ ಓಡಿ, ಮಲಗಿದ್ದ ಹೆಂಡತಿಯ ಭುಜ ಅಲ್ಲಾಡಿ ಎಬ್ಬಿಸಲು ನೋಡಿದ. ಅವಳು ತಲೆಗೂದಲ ಕೆರೆದುಕೊಂಡು, ಕನವರಿಕೆಯಲ್ಲೇ ಶಪಿಸು ಮಗ್ಗಲು ಹೊರಳಿ ನಿದ್ದೆಹೋದಳು. ಸ್ವಲ್ಪ ಸ ಯದ ನಂತರ ಬೆಳದಿಂಗಳನ್ನೇ ಅಪಹರಿಸ



ದೇವರಿಗೆ ಸ್ವರಪೂಜೆ ನೀಡಿದಾಗ ಪ್ರಾಪ್ತವಾದ ನೆಮ್ಮದಿ, ಬಹಳ ಕಾಲ ಬಾಳಲಿಲ್ಲ. ರಾತ್ರಿ ನಿದ್ರೆ ಹತ್ತಿರ ಸುಳಿಯದಾಯಿತು. ಲೋಕ, ನಿದ್ರೆಯ ವಶವಾಗುತ್ತಲೇ ಭೋಜಪ್ಪ, ಅಂಗಳಕ್ಕೆ ಬಂದು ಬೆಳದಿಂಗಳ ಸ್ನಾನಕ್ಕೆ ತೊಡಗಿದ. ಅಂತರಂಗದ ಕಳವಳ ಅರ್ಥವಾಗದೆ ಪರಿತಪಿಸಿದ. ವಾದ್ಯ ಕೈಲಿ ಹಿಡಿದು, ಮಾಯೆ ತುಂಬಿದ ಎದುರಿನ ಬಯಲನ್ನು ನೋಡತೊಡಗಿದ. ಅವನ ದೃಷ್ಟಿಗೇ ಹುಟ್ಟಿದಂತೆ, ಮಾಸ್ತರರ ಬುಗುರಿ ಬಣವೆ ಕಣದಲ್ಲಿ, ಕೆಲವು ಮನುಷ್ಯಾಕೃತಿಗಳು ಚಲಿಸುವುದು ಕಂಡಿತು. ಆ ನಿಶಾಚರ ಮನುಷ್ಯರು, ಬಣವೆ

ಬಂದಂತಿದ್ದ ಅವರೆಲ್ಲ, ಭತ್ತದ ಮೂಟೆ ಹೊತ್ತು ಮಾವಿನ ತೋಪಿನ ದಾರಿ ಹಿಡಿದು ಮಾಯವಾ ದರು. ಬಹುದೂರದಲ್ಲಿ ಭಾರದ್ವಾಜ ಪಕ್ಷಿ ಕೂಗ ತ್ತಿತ್ತು. ಇಡೀ ಘಟನೆ ಒಂದು ಕನಸಿನಂತಿತ್ತು ಚಂದ್ರನಿನ್ನೂ ಕೊಡೆ ಹಿಡಿದು ನಿಂತಿದ್ದಾನೆಯ ಎಂದು ಭೋಜಪ್ಪ ಆಕಾಶ ನೋಡಿದ. ಆಳದ ಮೌನಚಂದ್ರ ಮಾತ್ರನಿದ್ದ. ಭೋಜಪ್ಪನಿಗೆ ಕಂ ದೃಶ್ಯ, ಕಾಲದ ರಹಸ್ಯವನ್ನು ಬೇಧಿಸಿ ಹೇಳು ಕಣಯ ರೂಪಕವಾಗಿ ಕಾಡತೊಡಗಿತು. ಏಕಾಂ ಯಾಗಿ ಇಂಥ ಅಮೂರ್ತ ಸಂಗತಿಗಳನ್ನು ಹೇ ನಿಭಾಯಿಸಲಿ ಎಂದು ಆತಂಕಗೊಂಡ.

ಮರುದಿನ ನಸುಕಿಗೇ ಸವಾರಿ ಹೊರಡಿಸಿದ. ಶಬರಿಯ ಯಾವ ಪ್ರಶ್ನೆಗೂ ಸಮಜಾಯಿಷಿ ನೀಡುವ ಗೋಜಿಗೆ ಹೋಗದೆ, ಮೌನವಾಗಿ ಗಂಟುಮೂಟೆ ಕಟ್ಟಿದ. ''ಈ ಊರಲ್ಲಿ ಸುಗ್ಗಿಯ ಪಡಿ ಬೇಡೋದು ಯಾವಾಗ?'', ಶಬರಿ ವಿಚಾರಿಸಿದಳು. ''ಸುಗ್ಗಿಯ ಹಾಡು ಬಂದಾಗ, ವಾದ್ಯ ಬೇಕೆಂದಾಗ'' ಎಂದ. ಅವನ ಅಸಂಬದ್ಧ ನುಡಿಗಳಿಗೆ ಅವಳಿಗೆ ರೇಗಿಹೋಯಿತು. ''ಸುಡುಗಾಡು ಸಿದ್ಧರಂಗೆ ಮಾತಾಡ್ತಿಯಲ್ಲ!'' ಎಂದಳು. ಕಟ್ಟಿಟ್ಟ ಭತ್ತದ ಮೂಟೆಗಳನ್ನು ಹೊರಗೆ ತಂದಿಟ್ಟ. ಅವನಿಗೊಂದು, ಮತ್ತೊಂದು ಶಬರಿಗೆ. ''ಈ ಗೂಡಿನಲ್ಲಿ ಇಡೋದು ಸರಿಯಲ್ಲ. ಬರೋದು ಯಾವಾಗ?'' ''ಸಮುದ್ರ ಆಕಾಶಕ್ಕೆ ಹಾರಿದಾಗ''. ಶತಾಯುಷಿ ತಾತನನ್ನು ಆವಾಹನೆ ಮಾಡಿಕೊಂಡು. ಮಾತಾಡತೊಡಗಿದ ಭೋಜಪ್ಪನ ನುಡಿಗಟ್ಟುಗಳಲ್ಲಿ ಇಣುಕತೊಡಗಿದ ಪ್ರವಾದಿಯ ಮುಖ ಮಾಸ್ತರಿಗೆ ಆ ಕ್ಷಣಕ್ಕಂತು ಕಾಣಲಿಲ್ಲ.



ತಲೆತಲಾಂತರದಿಂದ ಮನೆತನದ ವೈರಿಯಾಗಿರುವ ಹೊನ್ನಪ್ಪ, ಮಧ್ಯಾಹ್ನ ಮಾಸ್ತರ ಮನೆಗೆ ಬಂದು, ದೇವರ ಎದುರಿಗೆ ನಿಂತು, ''ನಿನ್ನೆ ರಾತ್ರಿ ನಿನ್ನ ಬಣವೆಯ ಭತ್ತ ತೆಗೆದುಕೊಂಡು ಹೋದವನು ನಾನೇ. ಇದು



ಮಾಸ್ತರ ತಾವ ಇಡೋಣ'' ಎಂದ. ಬಾಗಿಲೆಳೆದುಕೊಂಡು, ರಾಮ-ಸೀತೆ ಜೋಡಿ ನಡೆಸಿಕೊಂಡು, ದೇವಸ್ಥಾನಕ್ಕೆ ಹೊರಟ. ತಂಪಾದ ಬೆಳಗು ಹಸಿ ಮೊಗ್ಗಿನಂತಿತ್ತು. ಮಾಸ್ತರನ್ನು ಎಬ್ಬಿಸಿ, ಭತ್ತದ ಮೂಟೆ ಒಪ್ಪಿಸಿ ''ಕಷ್ಟಕಾಲದಲ್ಲಿ ಈ ಕಾಳು ನಿಮ್ಮ ಕೂಳಿಗಿರಲಿ, ಇದು ಭೋಜಪ್ಪಂದಲ್ಲ; ಊರ ಧಾನ್ಯ, ದೇವರ ಪಡಿ'' ಎಂದ. ತರಾತುರಿಯಲ್ಲಿ ಹೊರಟ ಭೋಜಪ್ಪನ ಸವಾರಿಯತ್ತ ಲಕ್ಷ್ಯಹರಿದು, ಮಾಸ್ತರಿಗೆ ಅವನ ವಿಚಿತ್ರ ಭಾಷಾ ಪ್ರಯೋಗ ಗಮನಕ್ಕೆ ಬಾರದೆ ಹೋಯಿತು. ''ಎಲ್ಲಿ ಘಟ್ಟದ ಮೇಲೋ ಸವಾರಿ. ಕಳು ಆಗಬಾರ್ದು ಅಂತ ನಾನೇ ಸ್ವತಃ ಹೇಳ್ತಿದ್ದೇನೆ. ಸತ್ಯವಾದದ್ದಕ್ಕೆ ದೇವರ ಮುಂದೆ ಹೇಳ್ತಿದ್ದೇನೆ. ಇದು ಊರ ಯಾವ ನರಪಿಳ್ಳೆಗೂ ಗೊತ್ತಿಲ್ಲ. ದೇವಸ್ಥಾನದ ಬಾಗಿಲು ಸಾರ್ವಜನಿಕರಿಗೆ ತೆರೆಯುವ ತನಕ ನನ್ನ ಶರ್ತಾ ಬಿಡೋದಿಲ್ಲ'' ಎಂದು ಹೇಳಿಹೋದ. ದಿಗಿಲಾದ ಮಾಸ್ತರು ಗದ್ದೆಗೆ ಓಡಿದರು. ಬಣವೆ ಚಲ್ಲಾಪಿಲ್ಲಿಯಾಗಿ ಬಿದ್ದಿತ್ತು. ತೆನೆಗಳಿಲ್ಲದ ಹುಲ್ಲನ್ನು ಬೀಡಾಡಿ ದನಗಳು ತಿನ್ನುತ್ತಿದ್ದವು. ಧೃತಿಗೆಡದೆ, ಆವೇಶಕ್ಕೆ ಕಿಂಚಿತ್ತೂ ಅವಕಾಶ ನೀಡದೆ, ಹೊನ್ನಪ್ಪ ಎಸೆದ ಸವಾಲನ್ನು ಒಂಟಿಯಾಗಿ ಇದಿರಿಸಲು ಮಾಸ್ತರು

ತೀರ್ಮಾನಿಸಿದರು. ಮೂಕಾಂಬೆ ಅಕ್ಕೋರು, ''ನಮಗೆ ಈ ಹೊನ್ನಪ್ಪ ಜೀವನ ಮಾಡೋದಕ್ಕೆ ಬಿಡೋದಿಲ್ಲ. ಊರಿಂದ ಓಡಿಸಬೇಕೆಂದೇ ಅವನ ಹಠ'' ಎಂದು ಅಳತೊಡಗಿದರು. ''ದೇವರ ಅನುಗ್ರಹವಿದ್ರೆ, ಒಂದು ಕೂದಲನ್ನೂ ಹಂದಾಡಿಸೋದಕ್ಕೆ ಆಗೋದಿಲ್ಲ'' ಎಂದವರೆ ರಾಮಲಿಂಗಕ್ಕೆ ಅಡ್ಡ ಬಿದ್ದು, ತಾಲ್ಲೂಕಿನ ಪೊಲೀಸ್ ಸ್ಟೇಷನ್ನಿಗೆ ನಡೆದುಬಿಟ್ಟರು.

ತಹಶೀಲ್ದಾರ ಕಚೇರಿ, ಶಿಕ್ಷಣ ಇಲಾಖೆ ಮತ್ತು ಪೊಲೀಸ್ ಸ್ಟೇಷನ್ - ಈ ಮೂರೂ ಒಟ್ಟಿಗೆ ಕೆಲಸ ಮಾಡುವ ಹಳೆಯ ಕಟ್ಟಡ ಅದು. ಈ ಮೂರೂ ವಿಭಾಗಗಳಲ್ಲಿನ ದೈನಂದಿನ ವ್ಯವಹಾರಗಳಲ್ಲಿ ತಾತ್ವಿಕವಾಗಿ ಏನೂ ವ್ಯತ್ಯಾಸವಿಲ್ಲವೆಂದು ಕಟ್ಟಡವೇ ಸಾರುವಂತಿತ್ತು. ಬ್ರಿಟಿಶ್ ಕಾಲದ ಕಟ್ಟಡವನ್ನು ಪ್ರವೇಶಿಸಿದ ಯಾರಿಗಾದರೂ, ಕಾರಾಗೃಹದಲ್ಲಿ ಕೊಳೆಯುತ್ತಿರುವ ಖೈದಿಯ ಅನುಭವ ಆಗದೆ ಇರುತ್ತಿರಲಿಲ್ಲ. ಮೆಟ್ಟಿಲುಗಳನ್ನು ಏರಿ, ಕಬ್ಬಿಣದ ಸರಳಿನ ಕೋಣೆಯೊಂದನ್ನು ಮಾಸ್ತರು ಹೊಕ್ಕರು. ಗಾಂಧಿ ಫೋಟೋದ ಅಡಿಯಲ್ಲಿ, ನುಣುಪು ಕುರ್ಚಿಯ ಮೇಲೆ ಮುದಿ ಹವಾಲ್ದಾರನೊಬ್ಬ ಕುಳಿತಿದ್ದ. ಅವನ ಸೇವಾ ಜೀವನದ ಅರ್ಧಾವಧಿಯನ್ನು ಇಲ್ಲೇ ಕಳೆದವನು. ಹಳೆಯ ಕೇಸುಗಳ ಇತಿಹಾಸ, ಆರೋಪಿಗಳ ಕತೆಗಳನ್ನು, ವರ್ಗವಾಗಿ ಬರುವ ಎಲ್ಲ ಹೊಸ ಅಧಿಕಾರಿಗಳಿಗೆ ವರದಿ ಒಪ್ಪಿಸುವ ಮಹಾಶಯನೇ ಹವಾಲ್ದಾರ. ದೊಡ್ಡ ಬಾಗಿಲಿನ ಲಾಕಪ್ಪಿನ ಪಕ್ಕ, ಖೂನಿ ಮಾಡಿ ಬಂದಂತೆ ಕಾಣುವ ಕಠ್ರನೆಯ ವ್ಯಕ್ತಿಗಳಿಬ್ಬರು, ಹರಿದ ಅಂಗಿಯನ್ನು ಮುದ್ದೆಗಟ್ಟಿ ಹಿಡಿದು, ಚಳಿಯಲ್ಲಿ ನಡುಗುವವರಂತೆ ಕೂತಿದ್ದರು. ಪೊಲೀಸ್, ಕಾನೂನು, ಜೈಲು ಎಲ್ಲವನ್ನು ಅವರು ಯಃಕಶ್ಚಿತವೆಂಬಂತೆ ಉದಾಸೀನದಿಂದಿದ್ದರು. ಮರದ ಮುಖದ ಹವಾಲ್ದಾರನನ್ನು ನೋಡಿ, ಮಾಸ್ತರರ ಗಂಟಲು ಒಣಗಿತು. ಬಾಯಲ್ಲಿ ಕಚ್ಚಿದ್ದ ಮೋಟು

ಬೀಡಿ ಎಸೆದು, ಕರಿಬೂಟಿನಿಂದ ಹೊಸ
'ಏನು' ಎಂಬಂತೆ ಪೊತ್ತೆ ಹುಬ್ಬುಗಳನ್ನು ಎತ್ತಿ
''ಸಾಹೇಬರು'', ಮಾಸ್ತರು ತೊದಲಿದರು. ಸು
ತುಟಿ ಮಡಚಿ, 'ಇಲ್ಲ' ಎಂಬಂತೆ ಸನ್ನೆ ಮಾಡಿ
ಕಟ್ಟಡದೊಳಗೆ ಚಪ್ಪಲಿ, ಮೇಜಿನ ಮೇಲಿ
ಬೆಲ್, ಸುತ್ತುವ ಫ್ಯಾನ್ ಇವುಗಳ ಸದ್ದು ಕೇ
ಅಸ್ವಸ್ಥರಾದರು. ಸಂಜ್ಞಾ ಜಗತ್ತಿನ ನಿಗೂ
ವಿದ್ಯಮಾನವೇ ಭೀಕರವೆನ್ನಿಸಿತು. ''ಮತ್ತೇನ
ಭಾನಗಡಿ ನಡೀತು?'', ಹವಾಲ್ದಾರನ ಮರಾ
ಸ್ವರ ಒತ್ತಿನ ಮಾತು ಹಿಂದಿ ವಾರ್ತೆ ಓದುವವ
ಗೊಗ್ಗರು ದನಿಯಂತಿತ್ತು. ''ನಿನ್ನೆ ರಾತ್ರಿ ಹೊನ್ನ
ನನ್ನ ಬಣವೆ ಭತ್ತ ಕದ್ದುಬಿಟ್ಟ ಸರ್''. ''ಹಾಗಂ
ಒಂದು ದೂರು ಕೊಟ್ಟು ಹೋಗ್ರಿ'' ಎಂದ
ಮೇಜಿನ ಖಾನೆ ಎಳೆದು, ಕಾಗದ, ಪೆನ್ನು ಕೊಟ
ಕಿಟಕಿಯಿಂದ ಕೆಳಗಿನ ರಸ್ತೆ ನೋಡತೊಡಗಿದ
ಯಾವ ಮಜಕೂರಿನಲ್ಲಿ, ಯಾವ ಒಕ್ಕಣಿಕೆಯ
ಅರ್ಜಿ ಬರೆಯಬೇಕೆಂದು ಮಾಸ್ತರಿ
ಹೊಳೆಯಲಿಲ್ಲ. ನಡುಗುವ ಕೈಯಿಂದ ಬರೆದರು
ಓದಲು ಕಷ್ಟಕರವಾದ ಅಕ್ಷರಗಳಲ್ಲಿ, ಮಾಸ್ತರ
ನೋವು-ಆಕ್ರೋಶಗಳ ಕಂಪನವಿತ್ತು. ಅರ್ಜಿ
ಯನ್ನು ಹಸ್ತಾಂತರಿಸಿ ಮಾಸ್ತರು, ''ಸಾಹೇಬ್ರ
ಸ್ವಲ್ಪ ವಿಷಯ ಹೇಳಬೇಕಿತ್ತು'' ಎಂದು ಅಳುಕು
ನಿಂತರು. ಹವಾಲ್ದಾರನಿಗೆ ಸಹನೆ ಮೀ
ಹೋಯಿತು. ''ನಿಮ್ಮ ಹಳೇ ಪುರಾಣ ಯಾರಿ
ಗೊತ್ತಿಲ್ರಿ? ಅನಾದಿ ಕಾಲ್ದಿಂದಲೂ ನೀ
ರಾಮಲಿಂಗ ದೇವರ ಪೂಜಾರಿಗಳು
ಮೂಲದಿಂದಲೂ ಅದು ನಿಮ್ಮ ಮನೆದೇವರು
ಇದೇ ಹೊನ್ನಪ್ಪನಿಗೆ, ಮಹಾರಸಿಕನಾದ ಅ
ನೊಬ್ಬನಿದ್ದ. ಅವನೆಂಥ ಭಂಡನೆಂದರೆ, ಮ
ಅಟ್ಟದ ಮೇಲೆ, ರಾಸೋರಾಸು ಒಬ್ಬ ಸೂ
ಯನ್ನಿಟ್ಟುಕೊಂಡಿದ್ದ. ಕೆಳಗೆ ಸಂಸಾರ. ಎಲಾ
ಯಾದರೂ ರಾಮಲಿಂಗನ ದೊಡ್ಡ ಭಕ್ತ. ಏನು
ಇರದ ನಿಮ್ಮ ದೇವರಿಗೆ ತನ್ನ ಗದ್ದೆಯನ್ನು ಉಂಬ
ಯಾಗಿ ಬರೆದುಕೊಟ್ಟವನು ಅವನೇ. ಇದಕ್ಕಾ

ಹೊನ್ನಪ್ಪನಿಗೆ ನಿಮ್ಮೇಲೆ ಹಗೆತನ. ಗಂಡ ಹೆಂಡ್ತಿ ಇಬ್ಬರೂ ಮಾಸ್ತರಿಕೆ ಮಾಡುವ ನಿಮಗೆ, ಗದ್ದೆ ಯಾಕೆ ಎಂದು. ದೇವರನ್ನು ನಿಮ್ಮ ಹಿಡತದಿಂದ ತಪ್ಪಿಸೋದಕ್ಕೆ ಅವನ ಹಾರಾಟ. ಗದ್ದೆ ಕೊಟ್ರೆ ಸುಮ್ಮನಾಗಭೌದು. ಇಷ್ಟೇ ಅಲಾ ನೀವು ಹೇಳೋದು.''

ಮಾಸ್ತರು, ಕಪಾಟಿನಿಂದ ತೆಗೆದುಕೊಂಡು ಹೋಗಿದ್ದ ಗದ್ದೆಯನ್ನು ಉಂಬಳಿಯಾಗಿ ಬರೆದು ಕೊಟ್ಟ ದಾಖಲೆಪತ್ರವನ್ನು ರುಜುವಾತಿಗಾಗಿ ಹವಾಲ್ದಾರನಿಗೆ ಕೊಟ್ಟು,

''ಊರವರ ದರ್ಶನಕ್ಕಾಗಿ ದೇವಸ್ಥಾನದ ಬಾಗಿಲನ್ನು ದಿನವಿಡೀ ತೆರೆದೇ ಇಡುತ್ತಿದ್ದೆ, ಮೊದಲು. ಒಂದಿನ ನೋಡ್ತೇನೆ, ಒಬ್ಬ ಹುಚ್ಚ ಬೆತ್ತಲೆ ಮಲಗಿದ್ದಾನೆ ಒಳಗೆ. ಮತ್ತೊಂದು ಸಲ ಕಡಬೆ ನಾಯಿ ಪಾಣಪೀಠದ ನೀರನ್ನು ನೆಕ್ಕು ತ್ತಿತ್ತು. ಮತ್ತೊಂದು ದಿನ ಮುಸ್ಸಂಜೆ ಹೊತ್ತಿಗೆ ಯಾರೋ ಸಂಭೋಗ ಮಾಡ್ತಿದ್ದಾರೆ'' ಎಂದರು.

ಹವಾಲ್ದಾರನಿಗೆ ಬೇಸರವಾಗಿತ್ತು. ಮಾಸ್ತರು ಹೇಳಿದ ರೋಚಕ ವಿಷಯ ಕೇಳಿ, ಆಸಕ್ತಿ ಉಂಟಾಯಿತು. ಮಾಸ್ತರು ಮುಂದುವರಿಸಿದರು:

''ಹೊನ್ನಪ್ಪ ದೇವರನ್ನು ಸಾರ್ವತ್ರಿಕ ಗೊಳಿಸಲು, ದೇವಸ್ಥಾನದ ಎದುರಿನಲ್ಲಿ ಸಾರ್ವಜ ನಿಕ ದಾರಿ ಮಾಡಿದ. ಹೆಣಹೊರೋದು, ದಿಬ್ಬಣ ಹೋಗೋದು ಅಲ್ಲಿಂದಲೇ ಆಯ್ತು. ಬೇರೆ ಪೂಜಾರಿ ಇಡ್ತಾನಂತೆ. ಇಡೀ ಊರಿಗೆ ತೀರ್ಥ ಹಂಚುವ ವ್ಯವಸ್ಥೆ ಮಾಡ್ತಾನಂತೆ. ಇದಕ್ಕಾಗಿ ನನ್ನ ಊರು ಬಿಡಿಸಲು ಸಂಚು ಹೂಡಿದ್ದಾನೆ. ಆ ಗದ್ದೆ ಯಲ್ಲಿ ಬೆಳೆದ ಭತ್ತದ ಅಕ್ಕಿಯಿಂದಲೇ, ದಿನನಿತ್ಯ ಚರುಬೇಯಿಸಿ, ನೈವೇದ್ಯ ಮಾಡೋದು ಸಂಪ್ರದಾಯ. ಅದೇ ಭತ್ತವನ್ನು ಕದ್ದಿದ್ದಾನೆ. ದೇವರು ಉಪವಾಸ ಬೀಳುವ ಹಾಗೆ ಮಾಡಿದ.''

ಹವಾಲ್ದಾರ ನಕ್ಕುಬಿಟ್ಟ ''ದೇವ್ರನ್ನೇ ಉಪವಾಸ ಬೀಳಿಸೋದು ಅಂದ್ರೆ, ಏನ್ರಿ ಅದು?''

''ಭತ್ತ ಕದ್ದವನು ತಾನೇ ಎಂದು ಖುದ್ದಾಗಿ ಬಂದು ಹೊನ್ನಪ್ಪ ಹೇಳಿದ್ದಾನೆ ಸರ್''

''ಅಪರಾಧಿ ಸ್ವತಃ ಒಪ್ಪಿಕೊಳ್ಳಲಿ ಅಥವಾ ನಿರಾಕರಿಸಲಿ, ನಮ್ಮ ಕಾಯ್ದೆಗೆ ಅದು ಮುಖ್ಯ ಅಲ್ಲ. ಸಾಕ್ಷಿ ಬೇಕ್ರಿ ಸಾಕ್ಷಿ''

ಇಡೀ ಪ್ರಕರಣವನ್ನು ಹವಾಲ್ದಾರ ತೀರಾ ಹಗುರಾಗಿ ಪರಿಗಣಿಸಿದ್ದು, ಮಾಸ್ತರಿಗೆ, ಹೊನ್ನಪ್ಪನ ಅದೃಶ್ಯ ಹಸ್ತದ ಬಗ್ಗೆ ಅನುಮಾನ ಉಂಟಾಗು ವಂತಾಯಿತು. ಆದರೂ ಹವಾಲ್ದಾರ ಕಠೋರ ಸತ್ಯವೊಂದನ್ನು ಹೇಳುತ್ತಿದ್ದಾನೆಂದು ಅನ್ನಿಸಿತು.

ಮಾಸ್ತರು ಮನೆಗೆ ಬರುವಷ್ಟರಲ್ಲಿ ಮುಸ್ಸಂಜೆ ಯಾಯಿತು. ಕೇರಿಯ ದಾರಿಯ ಮೇಲೆ ಭೇಟಿ ಯಾದ ಊರವರು, ರಾತ್ರಿಯ ಘಟನೆಯನ್ನು ಪ್ರಸ್ತಾಪಿಸುವುದು ಬಂದೀತೆಂದು ಮಾತಾಡದೆ ಹೊರಟುಹೋದರು. ಹೊನ್ನಪ್ಪನ ಹೆದರಿಕೆ ಯಿರಬೇಕು. ನಿಜವಾಗಿಯೂ ತಾನು ಒಂಟಿ, ಅಸಹಾಯಕ ಎಂದು ಖೇದವಾಯಿತು. ದೇವ ಸ್ಥಾನದ ಚಿಟ್ಟೆಯ ಮೇಲೆ ಕಾಯುತ್ತ ಕುಳಿತಿದ್ದ ಮೂಕಾಂಬೆ ಓಡೋಡಿ ಬಂದಳು. ''ನಮ್ಮ ಬಲಕ್ಕೆ ದೇವರಿದ್ದಾನೆ'' ಎಂದು ಹೇಳಿದವರೇ ಮಾಸ್ತರು ನಡೆದುಬಿಟ್ಟರು. ರಾತ್ರಿಯ ಪೂಜೆಗೆ ಹೂ ಕ್ಕೊಯ್ದು, ತಣ್ಣೀರು ಸ್ನಾನ ಮಾಡಿ, ಚರುಬೇಯಿಸಿ, ಪೂಜೆ ಮಾಡಿದರು. ವಿಗ್ರಹದ ಎದುರು ಕುಳಿತು ಧ್ಯಾನಿಸಿದರು. ಕೊನೆಯಲ್ಲಿ ಮೂಕಾಂಬೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಮಾಸ್ತರು ಅವಳ ನೆರೆತ ಕೂದಲಿನ ತಲೆಯನ್ನು ನೇವರಿಸುತ್ತ, ''ಹೆಣ್ಣಿನ ಕಣ್ಣೀರು ಬಿದ್ದ ಊರು ಉಳಿಯೋದಿಲ್ಲ'' ಎಂದರು. ಅವಳಿಗೆ ಅದೊಂದು ಶಾಪದಂತೆ ಕಂಡಿತು. ''ಈ ಊರಲ್ಲಿ ನಮ್ಮ ಪರವಾಗಿ ಸಾಕ್ಷಿ ಹೇಳಬಲ್ಲವನಾಗಿದ್ದ ಭೋಜಪ್ಪ ಹೊರಟುಹೋದ'', ದಂಪತಿಗಳು ದುಃಖಿಸಿದರು. ತಮ್ಮ ಪಾಡಿಗೆ ತಾವು, ಮೌನವಾಗಿ ರೋದಿಸುತ್ತಿದ್ದ ಅವರನ್ನು ಸಂತೈ ಸಲು, ಯಾರೂ ಬರಲಿಲ್ಲ. ಮಾಸ್ತರು ಸಲ್ಲಿಸಿದ್ದ

ದೂರುಅರ್ಜಿಯ ವಿಚಾರಣೆಯೂ ನಡೆಯಲಿಲ್ಲ.



ಇತ್ತ, ಭೋಜಪ್ಪನ ಸವಾರಿ ಮಲೆನಾಡ ಹಳ್ಳಿಯಲ್ಲಿ ಅಲೆಯತೊಡಗಿತು. ಹೋದಲ್ಲೆಲ್ಲ, ಶಹನಾಯಿಯಲ್ಲಿ ವಿವಿಧ ಹಾಡು ಊದುವುದು, ಜನರ ಆಗ್ರಹಕ್ಕೆ ಮಣಿದು ರಾಮ-ಸೀತೆಯರ ಆಟ ಆಡಿಸೋದು ಚೆಂದಾಗಿಯೇ ನಡೆಯಿತು. ಚಂದ್ರನ ಕೊಡೆಯ ನೋಡಿದ್ದರ ಪ್ರಭಾವವೆಂಬಂತೆ, ಎಲ್ಲೆಲ್ಲೂ ಭೋಜಪ್ಪನಿಗೆ ಸಾವು-ನೋವಿನ, ರೋಗ-ರುಜನೆಯ ಸುದ್ದಿಗಳೇ ಕೇಳತೊಡಗಿದವು. ಯೋಗಕ್ಷೇಮವನ್ನು ವಿಚಾರಿಸಿದಾಗ, ಹತಾಶೆಯಿಂದಲೇ ನುಡಿಯುತ್ತಿದ್ದ. ಹೊನ್ನಪ್ಪ ಮತ್ತು ಮಾಸ್ತರರ ನಡುವಿನ ಅಂತಃಕಲಹದ ಬಗ್ಗೆ, ಅವನಿಗೆ ಚಿಂತೆ ಕಾಡುತ್ತಲೇ ಇತ್ತು. ತನಗೆ ಬೀಳುತ್ತಿದ್ದ ಕನಸುಗಳು, ತೇಲಿ ಬರುವ ಕಲ್ಪನೆಗಳು, ಸತ್ಯವೆಂದೇ ಭ್ರಮಿಸುತ್ತಿದ್ದ. ಅದಾಗಲೇ ಅವನ ತಿರುಗಾಟಕ್ಕೆ ಮೂರು ತಿಂಗಳು ಆದವು. ಮಳೆಗಾಲ ಆರಂಭವಾಯಿತು. ದೇವಸ್ಥಾನದಲ್ಲಿ ನಡೆಯುವ ಹೂವಿನ ಹಬ್ಬದಲ್ಲಿ ಅವನು ವಾದ್ಯಸೇವೆ ಮಾಡಬೇಕಿತ್ತು. ಹಬ್ಬದ ಮರುದಿನ, ಕಡಿಮೆ ಮಳೆ ಬೀಳುವ ಬಯಲು ಸೀಮೆಯತ್ತ, ಅವನ ಸವಾರಿ ಹೊರಡುತ್ತಿತ್ತು. ಪಡಿಚೀಲ ಹೊತ್ತು ಅವನು ಊರ ದಾರಿ ಹಿಡಿದ.

ಮಲೆನಾಡ ಘಟ್ಟ ಇಳಿಯುತ್ತಲೇ, ಮಳೆಯ ತಾಂಡವ ನೃತ್ಯ ಗೋಚರಿಸಿತು. ಪರ್ವತದಂಥ ಕರಿಮೋಡಗಳು ಧಾವಿಸುತ್ತಿದ್ದವು. ಮಳೆ ಹನಿಗಳು ಬಾಣದಂತೆ ಎರಗುತ್ತಿದ್ದವು. ಗದ್ದೆ, ಬಯಲು ಎಲ್ಲ ಜಲಾವೃತವಾಗಿದ್ದವು. ಹೊಳೆಯ ಕೆಂಪು ನೀರು ಉಕ್ಕುತ್ತ, ದಂಡೆಯ ಅಕ್ಕಪಕ್ಕದವರನ್ನು ಹೆದರಿಸತೊಡಗಿತ್ತು. ಭೋಜಪ್ಪನ ಸವಾರಿ ಮಳೆಯಲ್ಲಿ ಪೂರ್ತಿ ಒದ್ದೆಯಾಗಿತ್ತು. ದಾರಿಯಲ್ಲಿ ಜಾರುತ್ತ ದೇವಸ್ಥಾನಕ್ಕೆ ನಡೆದರು. ಮಾಸ್ತರು,

ಅವನ ಪರಿವಾರವನ್ನು ತಮ್ಮ ಮನೆಗೇ ಬ
ಮಾಡಿಕೊಂಡರು. ಭೋಜಪ್ಪ ಒದ್ದೆ ಅಕ್ಕಿಯನ
ಹರವಿದ. ರಾಮ-ಸೀತೆಯರನ್ನು ಅವರ ಕೊಟ್ಟ
ಯಲ್ಲಿ ಕಟ್ಟಿದ. ''ಭೋಜಪ್ಪ, ನೀನು ಹೊರಡ
ವಾಗ ನುಡಿದ ಮಾತಿನ ಅರ್ಥ ಆಮೇ
ಆಯ್ತು'', ಮಾಸ್ತರು ಎಲ್ಲ ಸಂಕ್ಷಿಪ್ತವಾಗಿ ಹೇ
ದರು. ಮಳೆಯ ಅಬ್ಬರದಲ್ಲಿ ಘಟನೆ ನೆನ
ನಪ್ಪಳಿಯಲಿಲ್ಲ. ಮಾಸ್ತರ ದಂಪತಿಗಳು ಸೋತ
ಹೋದದ್ದು ಭೋಜಪ್ಪನ ಗಮನಕ್ಕೆ ಬಾರದ
ಇರಲಿಲ್ಲ. ''ನಾಳೆಯೇ ಹೂವಿನ ಹಬ್ಬ
ಮಾಸ್ತರು ಹೇಳಿದರು.

ಮಳೆಯ ಭೋರ್ಗರೆತಕ್ಕೆ ಸರ್ವವೂ ಜ
ಮಯವಾಗಿ ಹೋಯಿತು. ಶಾಲೆಗೆ ರ
ಸಾರಿದರು. ಜನರು ಮನೆಯಲ್ಲಿ ಉಳಿದು, ದ
ಗಳನ್ನು ಕೊಟ್ಟಿಗೆಯಲ್ಲಿ ನಿಲ್ಲಿಸಿದರು. ಎಲ್ಲರು
ದಿಗಿಲಿನಿಂದ ಮಳೆಯನ್ನು ನೋಡುವವರೇ
ಅಪಾಯದ ಅಂಚನ್ನು ಮೀರಿ, ಉಕ್ಕಿ ಹರಿಯು
ತ್ತಿರುವ ಹೊಳೆಯ ಕುರಿತು ಮಾತಾಡುವವರೇ
ಪ್ರಳಯದ ಮುನ್ಸೂಚನೆ ಆದಂತೆ, ಭೋಜಪ್
ಕೊಡೆ ಹಿಡಿದು ಮಳೆಯಲ್ಲಿ ನಡೆದುಬಿಟ್ಟ
ಬಯಲು ತುಂಬಿ ಬಸಿಯುತ್ತಿರುವ ಜಲರಾಶಿ
ಸಮುದ್ರದಂತೆ ಕಾಣುತ್ತಿತ್ತು. ಹೊಳೆಯ
ಆಸುಪಾಸಿನ ಮನೆಗಳಿಗೆ ಹೋಗಿ, ''ಮಳೆರಾಯ
ಮುನಿದಾನೆ, ಎಲ್ರೂ ಮನೆಬಿಟ್ಟು ಬರ್ರಿ'' ಎಂದ
ಕೂಗಿ ಕೂಗಿ ಹೇಳಿದ. ''ನೀನು ಸಾಯಬೇಡ
ಬೇಗ ಹೋಗು'' ಎಂದು ಯಾರೋ ಸನ
ಮಾಡಿದರು. ಮಳೆಯನ್ನು ಲೆಕ್ಕಿಸದೆ ಕೇರಿಯ
ಹೆಂಗಸರು, ಮಕ್ಕಳು ದೇವರ ಶೃಂಗಾರಕ್ಕಾಗಿ, ತಮ
ತಮ್ಮ ಅಂಗಳದಲ್ಲಿ ಹೂ ಕ್ಟೊಯತೊಡಗಿದ್ದರು
ಮುದುಕಿಯರು ಮಾಲೆ ಕಟ್ಟತೊಡಗಿದ್ದರು
ಭೋಜಪ್ಪ ಹೂ ಬೇಡುತ್ತ ಹೋದ. ಈಗ ಅವನ
ಬೊಗಸೆಯಲ್ಲಿ ಎಲ್ಲ ಬಣ್ಣದ ಹೂಗಳು.

ಮಳೆಯ ಅಬ್ಬರ ತೀವ್ರವಾಯಿತು. ''ನನ್
ಆಯುಷ್ಯದಲ್ಲೇ ಇಂಥ ಮಳೆ ನೋಡಲಿಲ್ಲ'



ಸ್ಥಿತ್ತ ಮಾಸ್ತರು ತಿರುಗಾಡಿದರು. ಈ ಕೋಲಾಹಲಕಲ್ಲೋಲವನ್ನು ಒಳಗಿನಿಂದಲೇ ತಿಳಿದವತೆ ಭೋಜಪ್ಪ, ಪ್ರಶಾಂತ ಚಿತ್ತನಾಗಿಯೇ ದ್ದ. ಮುಸ್ಸಂಜೆಯ ಹೊತ್ತಿನಲ್ಲಿ, ಹೊನ್ನಪ್ಪ, ವಾಹದಂತೆ ತನ್ನ ಬಂಟರೊಂದಿಗೆ ದೇವ ನಕ್ಕೆ ಬಂದ. ಅವನೊಂದಿಗೆ ಹವಾಲ್ದಾರನಿದ್ದ. ಮಾಸ್ತರನ್ನು ಕರೆಯಿಸಿದರು. ''ಹೂಪಿನ ಹಬ್ಬಕ್ಕೆ ದೇವರ ಉತ್ಸವ ಮೂರ್ತಿ ಹೊರತೆಗೆದು ನಮಗೆ ಕೊಡ್ಬೇಕು. ಇಲ್ಲದಿದ್ದರೆ ಮುಂದಿನ ಅನಾಹುತಕ್ಕೆ ನೀವೇ ಕಾರಣರಾಗ್ತೀರಿ'', ಹೊನ್ನಪ್ಪ ಉಗ್ರವಾಗಿ ನುಡಿದ. '' ಮೂರ್ತಿ ಕೊಡೋದಿಲ್ಲಾ'', ಮಾಸ್ತರು ಉಸುರಿದರು. ''ಪೂಜೆ ಮುಗಿದ ನಂತರ ಉತ್ಸವ ಮೂರ್ತಿ ನಿಮಗೆ ವಾಪಸ್ ಕೊಡಿಸುವ ಹೊಣೆ ನಂದು'', ಹವಾಲ್ದಾರ ರಾಜಿಗೆ ಮುಂದಾದ. ಮಾಸ್ತರು ಹಟಹಿಡಿದರು. ''ಕೊಡದಿದ್ರೆ ಊರಿನ ಶಾಂತಿ ಭಂಗಕ್ಕೆ ನೀವೇ ಕಾರಣ ಎಂದು ಕೇಸು ಹಾಕ್ತೇವೆ'', ಹವಾಲ್ದಾರ್ ಎಚ್ಚರಿಸಿದ. ''ನೀರು ಎಷ್ಟು ಏರ್ತಂತೆ'', ಯಾರೋ ಕೂಗಿದರು. ಕಂಗಾಲಾದ ಜನರ ಲಕ್ಷ್ಯ ಅತ್ತ ಹರಿಯಿತು.

ಗದ್ದೆಯ ಬಯಲ ಅಂಚಿನಲ್ಲಿ, ಹಿತ್ತಲಲ್ಲಿದ್ದ ಜನ, ಏರುತ್ತಿರುವ ನೀರು ಇಳಿಯಬಹುದೆಂದು ನಿರೀಕ್ಷಿಸುತ್ತ ಮನೆಯಲ್ಲಿಯೇ ಉಳಿದರು. ತೆಂಗಿನ ತೋಟಗಳು, ಪುಟ್ಟ ದ್ವೀಪಗಳಾಗಿ ಹೋದವು. ನಿಧಾನವಾಗಿ ಏರತೊಡಗಿದ ನೀರು, ಪಾಗಾರ ದಾಟಿ, ಅಂಗಳ ಹತ್ತಿ, ತುಳಸಿ ಪೀಠ ಮುಳುಗಿಸಿತು. ಜನರು ಮನೆಯ ಅಟ್ಟ ಏರಿ. ದೇವರನ್ನು ಜಪಿಸತೊಡಗಿದರು. ದನಗಳು ಈಜಿಕೊಂಡು ಗುಡ್ಡದತ್ತ ಸಾಗಿದವು. ದೀಪವಿಲ್ಲದ ರಾತ್ರಿಯ ಕತ್ತಲಲ್ಲಿ ಅವರಿಗೆ ಸಮುದ್ರದಲ್ಲಿ ತೇಲುವಂತೆ ಭಾಸವಾಯಿತು. ಅಟ್ಟದ ಮೇಲಿದ್ದವರನ್ನು, ದೋಣಿಗಳನ್ನು ಕಳುಹಿಸಿ ಗುಡ್ಡದ ಮೇಲಿನ ಶಾಲೆಗೆ ಕಳುಹಿಸಿದರು. ಉಳಿದ ಕೆಲವರು ದೇವಸ್ಥಾನಕ್ಕೆ ಬಂದರು. ಒದ್ದೆಯ ಚಳಿಯಲ್ಲಿ ನಡುಗುತ್ತ, ಅಳುತ್ತ, ಹಲವು ಕುಟುಂಬಗಳು ಮಾಸ್ತರ ಮನೆ ಅಟ್ಟ ಹತ್ತಿದವು. ಗಂಟು ಮೂಟೆ ಟ್ರಂಕ್ ಸಹಿತ ಬಂದವರು ಜಮಖಾನೆಯ ಮೇಲೆ ಬಿದ್ದುಕೊಂಡರು. ಗಂಜಿಕೇಂದ್ರದ ಅಧಿಕಾರಿಗಳು ಬಾರದೆ, ಜನರು ಹಸಿವಿನಿಂದ ಕಂಗಾಲಾದರು. ಮಾಸ್ತರು ಮತ್ತು ಮೂಕಾಂಬೆ ದಿಕ್ಕೆಟ್ಟು ನಿಂತಿದ್ದರು. ದೇವರ ಪಡಿಗಿಟ್ಟ ಅಕ್ಕಿಯೂ ಖರ್ಚಾಗಿತ್ತು. ''ನಾನು ತಂದ ಅಕ್ಕಿ ಬೇಯಿಸಿ ಹಾಕೋಣ'', ಭೋಜಪ್ಪ ದಾರಿ ತೋರಿಸಿದ. ನಿರಾಶ್ರಿತರಲ್ಲಿ ಕೆಲವರನ್ನು ಕರೆದುಕೊಂಡು ಅನ್ನ ಬೇಯಿಸಿದರು. ಹೆಂಗಸರು ಅಟ್ಟದಿಂದಿಳಿದು ಬಂದು, ಹೂ ತುಂಬಿದ ಕೈಚೀಲವನ್ನು ದೇವರೆದುರಿಗೆ ಸುರಿದರು. ಪರಿಮಳ ಹರಡಿತು. ಎಲೆ ಹಾಕಿ, ಅನ್ನ ಬಡಿಸಿದರು. ಮುಳುಗುತ್ತಿರುವ ತಮ್ಮ ತಮ್ಮ ಮನೆ-ಆಸ್ತಿಯ ಚಿಂತೆಯಲ್ಲಿರುವ ಅವರಿಗೆ,

ಪಂಕ್ತಿಯಲ್ಲಿ ಕುಳಿತು ಉಣ್ಣುವಾಗ, ತುತ್ತು ಗಂಟಲಲ್ಲಿಳಿಯಲಿಲ್ಲ. ಭೋಜಪ್ಪ, ದೇವರೆದು ರಲ್ಲಿ ವಾದ್ಯ ಊದುತ್ತ ಕುಳಿತುಬಿಟ್ಟ. ರಾತ್ರಿಯೆಲ್ಲ ಯಾರೋ ತೇಲಿಹೋದರಂತೆ, ಕಾಣೆಯಾದ ರಂತೆ ಇತ್ಯಾದಿ ಸುದ್ದಿಗಳು ದುಃಸ್ವಪ್ನದಂತೆ ಹಾದು ಹೋದವು.

ಮಾಸ್ತರು ಮತ್ತು ಮೂಕಾಂಬೆ ಒಲಿಯೆ ದುರು ಕುಳಿತೇ ಇದ್ದರು. ಬೆಂಕಿ ಎಂದೋ ನಂದಿ ಹೋಗಿತ್ತು. ಬೆಳಗಿನ ಜಾವ, ಮಳೆ ಹೊಳುವಾಗಿ, ಗದ್ದೆಯ ಬಯಲಲ್ಲಿ ನಿಂತ ನೀರು ಹರಿದು ಹೋಗಿತ್ತು. ತನ್ನ ವಾದ್ಯದಿಂದ ಭೋಜಪ್ಪ ಹೊಳೆ ಯನ್ನು ತಣಿಸಿದಂತೆ ಮಾಸ್ತರಿಗೆ ಕಂಡಿತು. ಬೆಳಗ್ಗೆ ಹೊನ್ನಪ್ಪ ಬರುತ್ತಾನೆ. ಉತ್ಸವಮೂರ್ತಿಯನ್ನು ಒಯ್ಯುತ್ತಾನೆ ಮಾಸ್ತರು ತಳಮಳಿಸಿದರು. ಸೇವೆ ಯಿಂದ ನಿವೃತ್ತರಾದ ನಿಮಗೆ ಊರ ರಾಜಕೀಯ ಯಾಕೆ? ಬೆಂಗಳೂರಿನ ನನ್ನ ಮನೆಗೆ ಬಂದು ಉಳಿದುಬಿಡಿ ಎಂದು ಮಗ ಕರೆದದ್ದು ನೆನಪಾಯಿತು.

''ಮೂಕಾಂಬು, ನಾವು ಊರುಬಿಟ್ಟು ಮಗ ಇದ್ದಲ್ಲಿಗೆ ಹೋಗೋಣ. ಈ ಭೂಮಿ, ದೇವರ ಋಣ ಇದ್ರೆ, ಅವನಲ್ಲಿಗೆ ಬರ್‍ತಾನೆ. ಆದ್ರೆ, ಮನೆತನದ ದೇವರನ್ನು ನನ್ನ ಕೈಯಾರೆ ಹೊನ್ನ ಪ್ಪನಿಗೆ ಕೊಡಲಾರೆ. ಉತ್ಸವ ಮೂರ್ತಿಯನ ಹೊಳೆಯಲ್ಲಿ ಮುಳುಗಿಸಿಬಿಡ್ತೇನೆ. ಇದ ಸರಿಯೋ ತಪ್ಪೋ ನನಗೆ ಗೊತ್ತಿಲ್ಲ. ನನ ಕಾಣುವ ದಾರಿ ಇದೊಂದೆ.''

ಅಟ್ಟದ ಮೇಲಿನ ಜನರು ಎಂದೋ ಹೊರಟುಹೋಗಿದ್ದರು. ಒಳಗೆ ಮಾಸ್ತರು ಮ ಮೂಕಾಂಬೆ ತೆಪ್ಪಗೆ ಗಂಟುಮೂಟೆ ಕಟ್ಟಿದರ ಬಯಲಲ್ಲಿ ಬೆಳಗು ಹಾಲು ಸುರಿಯುತ್ತಿತ್ತ ನಿಶ್ಶಬ್ದ ಗುಡಿಯಲ್ಲಿ ಭೋಜಪ್ಪನ ಸವಾ ವಿಶ್ರಮಿಸಿತ್ತು. ಪಂಚಲೋಹದ ಉತ್ಸವಮೂತಿ ಯನ್ನು ಮಾಸ್ತರು ಜೋಪಾನವಾಗಿ ಕೊಂಡರು. ಮನೆಯ ಬಾಗಿಲು ಹಾಕಿ ಹೊ ಟರು. ಭೋಜಪ್ಪನನ್ನು ಕರೆದು, ''ದೇವರು ಊರನ್ನು ನಿನ್ನ ಕೈಯಲ್ಲಿರಿಸಿದ್ದಾನೆ'' ಎಂದು ಹೇ ಗುಡಿಯ ಕೀಲಿ ಕೈಯನ್ನು ಕೊಟ್ಟು, ದೇವರಿ ನಮಸ್ಕರಿಸಿ, ಹೊಳೆಯ ದಾರಿ ಹಿಡಿ [illegible] ನಡೆದರು. ಭೋಜಪ್ಪ, ಶಬ್ದದಾಚೆಯ ಜಗತ್ತಿನ ನಿಂತಿದ್ದ. ಸ್ವಲ್ಪ ದೂರ ಚಲಿಸಿದ ನಂತ ಗುಡಿಯ ಕಡೆಯಿಂದ, ಹೂವಿನ ಹಬ್ಬದ ಮೊದ ಶಹನಾಯಿ ಹಾಡು ತೇಲಿಬರುತ್ತಿರುವು ಮಾಸ್ತರಿಗೆ ಕೇಳಿಸತೊಡಗಿತು.



ಶ್ರೀಧರ ಬಳಗಾರ



## ಭಾವ ಬಿಂದು

ಪ್ಯಾರೀಸಿಗೆ ಹೊಸಬಳೇ ನೀನು? ಬಹಳಷ್ಟು ಪೆಟ್ಟು ತಾಕಿಲ್ಲ ತಾನೆ? ಇನ್ನೇನೂ ಹೆದರಬೇಡ. ಅವರೆಲ್ಲ ಹೊರಟುಹೋದರು. ಒಳ್ಳೆಯದಾಯಿತು, ಈ ಹೊಟೆಲ್ಲಿಗೆ ಓಡಿಬಂದೆ. ಮಂಜಿನಲ್ಲಿ ಮಂಕಾಗಿ ಕಣ್ಣು ಮಿಟುಕಿಸುವ ಈ ಹೋಟೆಲ್ಲಿನ ನಿಯಾನ್ ಅಕ್ಷರಮಾಲೆ, ಬಹುಶಃ ನಿನ್ನನ್ನು ಆಕರ್ಷಿಸಿರಬೇಕು. ಧೃತಿಗೆಟ್ಟು ನೀನೇನಾದರೂ ತಪ್ಪಿ ನೈರುತ್ಯಕ್ಕೆ ತಿರುಗಿದ್ದರೆ, ದಾರಿ ನಿನ್ನನ್ನು ಸೀನ್ ನದಿಯ ಸೇತುವೆಗೆ ಎಳೆದೊಯ್ಯುತ್ತಿತ್ತು. ಅಪರಿಚಿತನೊಬ್ಬನ ಕಾಮದ ಭ್ರೂಣವು ಹೊಟ್ಟೆಯಲ್ಲಿ ಬೆಳೆಯುವದನ್ನರಿತ ಯಾವ ನಿರ್ಗತಿಕ ಹುಡುಗಿಗೂ, ಸೇತುವೆಯ ಕೆಳಗೆ ಥಳಥಳಿಸುವ ಸೀನ್ ನದಿಯ ನೀರಿನ ಆಕರ್ಷಣೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಇಷ್ಟಕ್ಕೂ ನಿನ್ನಿಂದ ಯಾವ ಅಂಥ ಮಹಾ ಅಪರಾಧವೂ ಆಗಿಲ್ಲ. ನಮ್ಮೆಲ್ಲರ ಕಣ್ಣಿನ ನಿರ್ಲಜ್ಜ ಸ್ವಚ್ಛಂದಕ್ಕೆ ಪಾಪವಿಲ್ಲ. ನಾಲಿಗೆಯ ಹೊಲಬುಗೆಟ್ಟ ದಾಹಕ್ಕೆ ಪಾಪವಿಲ್ಲ. ಅಂದಮೇಲೆ ದೇಹದ ಹಸಿವೆಗೆಲ್ಲಿಯ ಪಾಪ ಬಂತು, ಹೇಳು?

ಇನ್ನೂ ಹತ್ತಿರಕ್ಕೆ ಬಾ. ಛಳಿಯಿಂದ, ಹೆದರಿಕೆಯಿಂದ ನಡುಗುತ್ತಿದ್ದ ಮೈ ಛಳಿಬಿಟ್ಟು, ಗಟ್ಟಿಯಾಗಿ ನನ್ನನ್ನು ಅವಚಿಕೊಂಡಿರು. ಎಂಭತ್ತರ ಗಡಿದಾಟಿದ ಈ ಮುದುಕನ ಅಪ್ಪುಗೆಯಲ್ಲಿ ಮೈಕಾಸಿಕೊ. ಕನಸಿನ ದೋಣಿ ಏರಿ, ಕಾಲ ಪ್ರವಾಹದಲ್ಲಿ ಹುಟ್ಟು ಹಾಕುತ್ತ, ಗೊತ್ತಿರದ ಭವಿಷ್ಯದ ಗಾಳಿ ಗೋಪುರವನ್ನರಸುತ್ತ ಮುಂದೆ ಸಾಗು. ನಿನಗೆ ಬದುಕಲು ಭವಿಷ್ಯದ ಆಮಿಷವಿದೆ. ನನಗಿರುವದು ಭೂತಕಾಲದ ಕಹಿನೆನಹುಗಳ ಪಾಥೇಯ ಮಾತ್ರ. ಎಂಭತ್ತರ ಮುದುಕ, ಹಲ್ಲಿಲ್ಲದ ಒಸಡುಗಳಿಂದ ಋತುಮಾನಗಳನ್ನು ಜಗಿಯುತ್ತ, ಚಳಿಯಿಂದ ಹೆಪ್ಪುಗಟ್ಟಿದ ಈ ರಾತ್ರಿಯಲ್ಲಿ ಕಳೆಗುಂದಿದ ಲಕ್ಷೋಪಲಕ್ಷ ತಾರೆಗಳನ್ನು ಮಂಜುಗಣ್ಣಿನಿಂದ ಪಿಳಿಪಿಳಿ ನೋಡುತ್ತ, ಹುಟ್ಟು-ಬದುಕು-ಸಾವಿನ ಗತ ನೆನಪುಗಳನ್ನು ಮೆಲಕು ಹಾಕುತ್ತ, ಸಾಯಲು ಮರೆತು ಇನ್ನೂ ಇಲ್ಲಿಯೇ ತೂಕಡಿಸುತ್ತಿದ್ದೇನೆ.

ನಿನ್ನನ್ನು ಅಟ್ಟಿಸಿಕೊಂಡು ಬಂದವರಲ್ಲಿ ಒಬ್ಬಿಬ್ಬರನ್ನು ನಾನು ಬಲ್ಲೆ. ನಯವಾದ ರೇಷ್ಮೆ ಎಳೆಯಿಂದ ನೆಯ್ದು ಬಲೆಯನ್ನು ಬೀಸಿ, ಹಕ್ಕಿಗಳನ್ನು ಪ್ರಾಣಾಂತಕವಾಗಿ ಘಾಸಿಗೊಳಿಸುವ ಠಕ್ಕರು ಅವರು. ಅವರ ಬಲೆಯಲ್ಲಿ ನೀನು ಹೇಗೆ ಸಿಕ್ಕಿಬಿದ್ದೆ?... ಹೀಗೆ ಮಾತು ಮಾತಿಗೆ ನಿನ್ನ ಕಣ್ಣು ತುಂಬಿ ಬರುವಂತಿದ್ದರೆ, ಇನ್ನು ನಾನು, ನಿನಗೆ ಯಾವ ಪ್ರಶ್ನೆಯನ್ನೂ ಕೇಳುವದಿಲ್ಲ, ಆಯಿತೆ?... ನೆನಪುಗಳನ್ನು ಹರವಿಕೊಂಡು ಕೂಡಲು ನನಗೆ ಪುರುಸೊತ್ತಿದೆ. ಪ್ಯಾರೀಸಿಗೆ ಮಾತ್ರ ವ್ಯವಧಾನವಿಲ್ಲ; ಸೌರವ್ಯೂಹದಿಂದ ಸಿಡಿದೆದ್ದ ಉಲ್ಕೆಯಂತೆ, ಅದು ಸದಾ ಭವಿಷ್ಯತ್ತಿನ ಕಡೆಗೇ ನುಗ್ಗುತ್ತಿರುತ್ತದೆ.

ನಿನ್ನ ಹೆಸರೇನೆಂದೆ?... ನಾನು ನಿನ್ನನ್ನು ಒಮ್ಮೊಮ್ಮೆ 'ಮೋನಾಲಿಸಾ' ಎಂದೂ ಕರೆಯಬಹುದು.

ಮೋನಾಲಿಸಾಳ ಹೆಸರು ಕೇಳಿಲ್ಲವೆ ನೀನು? ಹಿಂದೊಮ್ಮೆ ಸುಮಾರು ನಾಲ್ಕುನೂರು ವರ್ಷಗಳ ಹಿಂದೆ ಸಶರೀರಿಯಾಗಿದ್ದ ಆ ರೂಪಸಿ, ಈಗ ತೈಲಚಿತ್ರವಾಗಿ, ಬರೀ ನೆನಪಾಗಿದ್ದಾಳೆ. ನೆನಪು ಹಾಗೂ ಕಲ್ಪನೆಗಳ ದಾರಿಗಳು ಭಿನ್ನವಾಗಿದ್ದರೂ ಒಮ್ಮೊಮ್ಮೆ, ಅವುಗಳ ಉಗಮ ಹಿಂದೊಮ್ಮೆ ನಡೆದು ಹೋಗಿರಬಹುದಾದ ಘಟನೆಗಳಿಂದ ಪ್ರೇರಿತವಾಗಿರಬಹುದು. ಅವ್ಯಾಹತವಾಗಿ ಹರಿಯುತ್ತಿರುವ ಈ ಕಾಲಪ್ರವಾಹದಲ್ಲಿ ಹುಟ್ಟಿ-ಸಾಯುವ ನಮ್ಮ ಬದುಕುಗಳಿಗೆ ಒಂದು ನಿರ್ದಿಷ್ಟ ಪರಿಮಿತಿ ಇದೆಯೆ?

**(ರಾಘವೇಂದ್ರ ಖಾಸನೀಸರ 'ಮೋನಾಲಿಸಾ' ಕತೆಯಿಂದ)** ☐ ಸಂಘಮಿತ್ರ

# ಸೌಂದರ್ಯ ಸಮೀಕ್ಷೆ



**ಬದುಕಿನಲ್ಲಿ 'ಅಪ್ರತಿಮ ಸೌಂದರ್ಯ'ವನ್ನು ಮನಗಂಡ ಗಳಿಗೆ ಯಾವುದು? ಎಂತು?**

'ಸೌಂದರ್ಯ' ಅಂದರೆ ಏನು? ಅದು ಸಹಜತೆಯೆ? ಅನುಭೂತಿಯೆ? ಪ್ರಮಾಣಬದ್ಧ ಸಂಯೋಜನೆಯೆ? ಮನಸ್ಥಿತಿಯೆ?
ಅತ್ತ, ಭಾರತೀಯ ತರುಣಿಯೊಬ್ಬಳು 'ಅನುಪಮ ಸುಂದರಿ' ಕಿರೀಟ ತೊಟ್ಟು 'ಬೆಕ್ಕಿನ ಹೆಜ್ಜೆ' ಹಾಕುತ್ತಿರುವಾಗಲೇ - ಇತ್ತ, ನಮ್ಮ ಕೆಲವು ಸೂಕ್ಷ್ಮ ಸಂವೇದಿಗಳನ್ನು "ನೀವು, ನಿಮ್ಮ ಬದುಕಿನಲ್ಲಿ 'ಅಪ್ರತಿಮ ಸೌಂದರ್ಯ' ಮನಗಂಡ ಗಳಿಗೆ ಯಾವುದು? ಎಂತು?" ಎಂದು ಕೇಳಿದೆವು. ಉತ್ಸಾಹದಿಂದ ಪ್ರತಿಸ್ಪಂದಿಸಿದವರು ಇಲ್ಲಿದ್ದಾರೆ.



ನಾನು ಹೆತ್ತಮಗು, ಮೊದಲ ಬಾರಿ ನಿದ್ದೆಯಲ್ಲಿ ಮುಗುಳ್ನಕ್ಕ 'ಗಳಿಗೆ', ನನಗೆ ಬದುಕಿನಲ್ಲಿ 'ಅಪ್ರತಿಮ ಸೌಂದರ್ಯ'ವನ್ನು ಮನಗಂಡ 'ಗಳಿಗೆ.' ಮಗುವಿನ ಅಳು, ನಗು, ಕೇಕೆ, ಕೋಪ, ಬೆರಗು ಎಲ್ಲ ಭಾವಗಳೂ ಒಂದೊಂದು ರೀತಿಯಲ್ಲಿ ಸುಂದರ. ಹವಳದ ತುಟಿ, ಹೊಳೆವ ಕಣ್ಣು, ಹಾಲುಗಲ್ಲಗಳಿಂದ ಹೊಮ್ಮುವ ಒಂದೊಂದು ಭಾವವೂ ಬೆರಗುಗೊಳಿಸುತ್ತದೆ, ಮುಗ್ಧಗೊಳಿಸುತ್ತದೆ. ಯಾವುದೇ ಮಗು ಕೈಗೆ ಸಿಕ್ಕರೆ ಸಾಕು, ಅಳಿಸಿ, ನಗಿಸಿ, ಕುಣಿಸಿ, ಕೋಪತರಿಸಿ, ಬೆರಗುಗೊಳಿಸಿ ನೋಡಬೇಕೆನ್ನಿಸುತ್ತದೆ. 'ಮಗು' ಎಂಬ ಶಬ್ದವೇ ಮನಸ್ಸನ್ನು ಅರಳಿಸುತ್ತದೆ. ಅಂಥ ಸ್ನಿಗ್ಧ ಆನಂದ ನನಗೆ ಬೇರೆಲ್ಲೂ ಕಂಡಿಲ್ಲ.

**ಧಾರವಾಡ**

**ಸುಕನ್ಯಾ ಮಾರುತಿ**



ಪೆನಿಕನಾಗದೆ ನಿಮ್ಮ ಪ್ರಶ್ನೆಗೆ ಉತ್ತರಿಸಲು ಯತ್ನಿಸುತ್ತೇನೆ. ಯಾಕೆಂದರೆ, ನನ್ನ ಬದುಕಿನಲ್ಲಿ ಅಂತಹ ವಿಶೇಷವಾದ ಗಳಿಗೆ ಯಾವುದೂ ಇಲ್ಲ ಎನ್ನುವುದು ನನಗೆ ತಕ್ಷಣ ಹೊಳೆಯುವ ಮಾತು. ನಾನು ಸೌಂದರ್ಯವನ್ನು ಹುಡುಕಿಕೊಂಡು ಹೋಗಿ ಅಸ್ವಾದಿಸುವ ಸೈಕಿಯವನಲ್ಲ. ನನಗೆ ದಿನನಿತ್ಯದ ಬದುಕೇ ಸುಂದರವಾಗಿ ಕಾಣುತ್ತದೆ; ಅದರ ಕುರೂಪ ಕೂಡ. ಉರಿಬಿಸಿಲಿನಲ್ಲೂ ಒಣಗಿಕೊಂಡು ಬಣ್ಣಗೇಡಿಯಾದ ಮರಗಳು, ಲಟಾರಿ ಸೈಕಲ್ಲಿನಲ್ಲಿ ಹಳೆಯ ಪೇಪರು ಹೇರಿಕೊಂಡು ಹೋಗುವ ರದ್ದಿಯವ, ತನಗೆ ಸಿಗುವ ದಿನಗೂಲಿಯಲ್ಲೇ ಸ್ವಲ್ಪವನ್ನು ಕುಡಿತಕ್ಕೆ ತೆಗೆದಿಡುವ ಕೂಲಿಯವ, ದಿನದ ಕೆಲಸ ಮುಗಿಸಿ, ಸಿನಿಮಾದ ಕಡೆಯ ಶೋಗೆ ಓಡುತ್ತ ಹೋಗುವ ಹೋಟಲ್ಲಿನ ಕೆಲಸದ ಹುಡುಗರು, ಅಂಡು ಸವೆದ ಪ್ಯಾಂಟಿನ ಡ್ರೈವರುಗಳು, ಹೊತ್ತಲ್ಲದ ಹೊತ್ತಿನಲ್ಲಿ ಡ್ಯೂಟಿ ಮಾಡುತ್ತ, ಮೇಲಿನವರನ್ನು ಶಪಿಸುವ ಪೀಸಿಗಳು... ನನಗೆ ಇವರಲ್ಲೂ ಸೌಂದರ್ಯ ಕಾಣುತ್ತದೆ. 'ಅಪ್ರತಿಮ' ಅಲ್ಲದೆ ಇರಬಹುದು. ಆದರೆ ಈ 'ಅಪ್ರತಿಮ ಸೌಂದರ್ಯ' ಎನ್ನುವುದು ಸ್ವಲ್ಪ ಬೋರು; ತಾಜ್‌ಮಹಲ್‌ನ ಹಾಗೆ. ಅದು ಸ್ವಲ್ಪ ಸಮಸ್ಯಾತ್ಮಕ ಕೂಡ. ಆದರೆ ಯಾವುದು ಸೌಂದರ್ಯ ಅಲ್ಲ ಎಂದು ಸುಲಭವಾಗಿ ಹೇಳಬಹುದು. ಗ್ರೀಟಿಂಗ್‌ಕಾರ್ಡುಗಳು, ಸುಗಮ ಸಂಗೀತ ಮತ್ತು ಟೀವಿ ಸೀರಿಯಲ್ಲುಗಳ ಕುಟುಂಬಗಳು ಖಂಡಿತ ಸುಂದರವಲ್ಲ.



ಉಡುಪಿ **ಜಿ. ರಾಜಶೇಖರ**



ನಾ ಕಂಡ 'ಅಪ್ರತಿಮ ಸೌಂದರ್ಯದ ಗಳಿಗೆ' ಯಾವುದು ಅಂತ ಮನಸ್ಸಿನಲ್ಲೇ ಫ್ಲಾಶ್‌ಬ್ಯಾಕ್‌ಗೆ ಹೋದಾಗ, ಆ ಗಳಿಗೆಯನ್ನು ಮೊದಲು ಹುಡುಕಲು ಪ್ರಯತ್ನಿಸಿದ್ದು ಮನುಷ್ಯರನ್ನು ಕುರಿತ ಸಮಯ, ಸಂಗತಿಗಳಲ್ಲಿ. ಆದರೆ ಅಂತಹವುಗಳ ನೆನಪುಗಳನ್ನು ಕೆದಕಿದಾಗ ವಿಪರ್ಯಾಸವಾಯಿತು. ಏಕೆಂದರೆ ಮನುಷ್ಯನಲ್ಲಿ ಪ್ರೀತಿ, ಸ್ನೇಹ, ಕರುಣೆಯಂತಹ ಇತರ ಶ್ರೇಷ್ಠ ಗುಣಗಳು ಇದ್ದರೂ, ಆ ಸಂಗತಿಗಳೆಲ್ಲಾ ಬರೀ ವಿಕೃತವಾದ ಗುಣಗಳಾದ ದುಃಖ, ಹಿಂಸೆ, ಕ್ರೌರ್ಯಗಳಿಂದ ತುಂಬಿಹೋಗಿದ್ದವು. ಹೀಗೆ ಕಳಂಕ ತಾಗದೇ ಶುದ್ಧವಾಗಿರುವುದು ಯಾವುದು ಎಂದು ಯೋಚಿಸುತ್ತಿದ್ದಾಗ ನೆನಪಿಗೆ ಬಂದದ್ದು ನಿಸರ್ಗ.

ಅದನ್ನು ನಾನು ಕಂಡದ್ದು ಒಂದು ವಿಮಾನದ ಕಿಟಕಿಯಿಂದ.

ಎಚ್ಚರವಾದಾಗ ಬೆಳಿಗ್ಗೆ 4.30 ಆಗಿತ್ತು, ಸೂರ್ಯೋದಯಕ್ಕೆ ಇನ್ನೂ ಸಮಯವಿತ್ತು. ಆ ಗಳಿಗೆ, ಕಿಟಕಿಯಿಂದ ಕಂಡ ದೃಶ್ಯ ಇವತ್ತಿಗೂ ನನ್ನನ್ನು ಚಕಿತಗೊಳಿಸುತ್ತದೆ. ಆ ದೃಶ್ಯವನ್ನು ವರ್ಣಿಸಲು ನನ್ನಲ್ಲಿ ಪದಗಳ ಶಕ್ತಿ ಇಲ್ಲದಿದ್ದರೂ ಪ್ರಯತ್ನಿಸುತ್ತೇನೆ; ಮೇಲೆ ಆಕಾಶ, ಕೆಳಗೆ ಸಾಗರ, ಅವೆರಡಕ್ಕೂ ಹೋಲುವಂಥ ಗಾಢ ನೀಲಿ ಬಣ್ಣ. ಆದರೆ ಆಕಾಶವನ್ನು ಸಾಗರದಿಂದ ಬೇರ್ಪಡಿಸುವಂತೆ, ದಿಗಂತದಲ್ಲಿ ಒಂದು ಸರಳ ರೇಖೆಯ ಕಾಮನ ಬಿಲ್ಲು. ಸಾಗರದ ಕಡೆಯಿಂದ ಕೆಂಪು ಬಣ್ಣದ ಸಾಲು ಶುರುವಾಗಿ, ಮಿಕ್ಕ ಐದು ಬಣ್ಣಗಳು ಸಾಲು ಸಾಲಾಗಿ ಹೊಳೆಯುತ್ತಾ, ಕೊನೆಗೆ ಆಕಾಶದತ್ತ ಸೇರಳೆ ಬಣ್ಣವಾಗಿ, ಮತ್ತೆ ಗಾಢವಾದ ನೀಲಿ ಬಣ್ಣದಲ್ಲಿ ಹರಡಿ ಹೋಗಿದ್ದವು.

ಯಾವಾಗಲಾದರೂ ಬೇಜಾರಾದರೆ ಆ ದೃಶ್ಯವನ್ನು ನನ್ನ ನೆನಪಿನಿಂದ ಹೊರಗೆಳೆಯುತ್ತೇನೆ. ಅದು ಮತ್ತೆ ನನ್ನ ಅಂತರಂಗದ ಕಣ್ಣನ್ನು ಆವರಿಸುತ್ತದೆ. ಒಂದು ರೀತಿಯ ನೆಮ್ಮದಿ, ಸಂತಸ ತರುತ್ತದೆ. ಈ ದೃಶ್ಯ, ನಾನು ಕಾಣುವ ಮನುಷ್ಯನ ವಿಕೃತಗಳನ್ನು ನೆನೆದು ಸಿನಿಕಳಾಗದಂತೆ ಕಾಪಾಡುತ್ತದೆ.

**ಬೆಂಗಳೂರು** **ಗೌರಿ ಲಂಕೇಶ್**



ಮೂವತ್ತು-ನಲವತ್ತು ವರ್ಷಗಳ ಹಿಂದೆಯೇ ಇರಬೇಕು. ಕಿಕ್ಕಿರಿದು ತುಂಬಿದ ಒಂದು ಬಸ್ಸು. ಏನೇನೋ ಗುದಮುರಗಿ ಹಾಕಿ ನಾನು ಬಸ್ಸು ಹತ್ತಿದ್ದೆ... ಬಸ್ಸಿನ ಕಡ್ಲೊಯ ಸೀಟಿನಲ್ಲಿ ಎಳೆ ವಯಸ್ಸಿನ ಒಬ್ಬ ತಾಯಿ. ತೊಡೆಯ ಮೇಲೊಂದು ಹಸುಗೂಸು. ತಾಯಿ ಸೆರಗು ಮರೆಮಾಡಿ, ಕೂಸಿಗೆ ಮೊಲೆ ಕುಡಿಸತೊಡಗಿದಳು. ಅವಳ ಕಣ್ಣೆಲ್ಲ ಕೂಸಿನ ಮುಖದ ಮೇಲೆ. ಅದೂ ಮೊಲೆ ಹೀರುತ್ತ ತಾಯಿಯನ್ನೇ ನೋಡುತ್ತಿತ್ತು... ಆ ತಾಯಿಯ ಮುಖದ ಮೇಲಿನ ಕಳೆ... ಅನೇಕ ವರ್ಷಗಳ ಮಂಜು ಮುಸುಕಿನಲ್ಲಿಯೂ ಅಂಥ ಅಪ್ರತಿಮ ಸೌಂದರ್ಯವನ್ನು ನಾನು ಮತ್ತೆ ಕಂಡಿಲ್ಲ.

**ಬೆಂಗಳೂರು** **ಚಂದ್ರಶೇಖರ ಪಾಟೀಲ**



ನಿನ್ನೆಗಿಂತ, ಇಂದಿನ ಬೆಳಗಿನ ಮುಖ ನೋಡಿದ್ದು, ನಾನು ಅಪ್ರತಿಮ ಸೌಂದರ್ಯವನ್ನು ಮನಗಂಡ ಗಳಿಗೆ. ನಾಳೆಯದನ್ನು ಕಂಡರೆ ಅದು ಇನ್ನೂ ಅಪ್ರತಿಮವಾಗಿರುತ್ತದೆ.

**ಧಾರವಾಡ** **ಸಿದ್ಧಲಿಂಗ ಪಟ್ಟಣಶೆಟ್ಟಿ**

□



ಒಂದಾಣೆ ಮಾಲೆ

# ಕಿಸಾನನ ಅದ್ಭುತ ತ್ಯಾಗ

ಎಂ.ಆರ್. ಭಟ್

ತ್ಯಾಗದ ವಿಷಯವಾಗಿ ಲೋಕದಲ್ಲಿ ನೂರಾರು, ಸಾವಿರಾರು ಕಥೆಗಳಿವೆ. ಎಲ್ಲ ದೇಶಗಳು, ಅಲ್ಲಿಯ ಕೆಲವು ಅಸಾಧಾರಣ ಮನುಷ್ಯರ, ಅದ್ಭುತ ತ್ಯಾಗಗಳ ಕಥೆಗಳನ್ನು ಗೌರವದಿಂದ ಹೇಳಬಲ್ಲುವು. ಜಪಾನಿನಲ್ಲಿ ಒಮ್ಮೆ ಭಯಾನಕ ಕ್ಷಾಮವು ತಲೆದೋರಿತು. ಬಲು ವಿಸ್ತಾರವಾದ ಪ್ರದೇಶದಲ್ಲಿ, ಈ ದುಷ್ಕಾಲದ ಸಂಕಷ್ಟವು ಹರಡಿತು. ಜನರು ಸಾವಿರಗಟ್ಟಲೆಯಲ್ಲಿ ನಿತ್ಯವೂ, ಹೊಟ್ಟೆಗಿಲ್ಲದೆ ಸತ್ತುಬೀಳುತ್ತಿದ್ದರು.

ಅಲ್ಲಿಯ ಒಂದು ಊರಿನಲ್ಲಿ, ಒಬ್ಬ ಕಿಸಾನನ ಬಳಿ ಒಂದು ದೊಡ್ಡ ಚೀಲದ ತುಂಬ ಭತ್ತವಿತ್ತು. ಆ ಊರಿನಲ್ಲಿ ಯಾರೊಡನೆಯೂ ಅಷ್ಟು ಭತ್ತವಿರಲಿಲ್ಲ. ಅಕ್ಕಿ ಜಪಾನಿನ ಮುಖ್ಯ ಆಹಾರಧಾನ್ಯ. ಆ ಕಿಸಾನನು, ಇಚ್ಛೆಸಿದ್ದರೆ, ತನ್ನೊಡನಿದ್ದ ಆ ಭತ್ತದಿಂದ, ದಿನನಿತ್ಯಕ್ಕೆ ತನಗೆ ಬೇಕಾಗುವಷ್ಟು ಅಕ್ಕಿಯನ್ನು ತಯಾರಿಸಿಕೊಂಡು, ಊಟಮಾಡಿ, ಬಹುದಿನಗಳ ತನಕ ಜೀವನ ನಿರ್ವಹಣೆ ಮಾಡಿಕೊಂಡು ಇರಬಹುದಿತ್ತು. ಆದರೆ, ಅವನು ಈ ಭತ್ತವನ್ನು ಮುಟ್ಟಲಿಲ್ಲ. ಬಹು 'ಕೃಪಣ'ನಾಗಿ, ಅದನ್ನು ಬಂಗಾರಕ್ಕಿಂತಲೂ ಅಧಿಕ ಮೌಲ್ಯದ ವಸ್ತುವಾಗಿ ಪರಿಗಣಿಸಿ, ಜೋಪಾನವಾಗಿಟ್ಟನು.

ದುಷ್ಕಾಲಕ್ಕೂ ಒಂದು ಮಿತಿಯಿದೆ; ಒಂದು ಅವಧಿಯಿದೆ. ಸಾವಿರಾರು ಜನರ ಆಹುತಿಪಡೆದ ನಂತರ ಕ್ಷಾಮವು ನಿಂತಿತು. ಅಳಿದುಳಿದವರು ಪುನಃ ಸಂತೋಷದ, ಸಮೃದ್ಧಿಯ ದಿನಗಳನ್ನು ಎದುರುನೋಡುವ ಆಸೆ ಹಿಡಿದುಕೊಂಡರು.

ದೊಡ್ಡ ಗೋಣಿ ತುಂಬ ಭತ್ತವಿದ್ದ ಕಿಸಾನನು ಒಂದೆರಡು ದಿನ ಯಾರ ಕಣ್ಣಿಗೂ ಬೀಳಲಿಲ್ಲ. ಅವನನ್ನು ಬಲ್ಲ ಕೆಲವರು, ಅವನನ್ನು ಹುಡುಕಿ ಬರುತ್ತ, ಅವನ ಮನೆಯನ್ನು ಪ್ರವೇಶಿಸಿದರು. ಸದ್ದೇ ಇರಲಿಲ್ಲ. ಕೊನೆಗೆ, ಒಂದು ಕೋಣೆಯಲ್ಲಿ, ಒಂದು ದೊಡ್ಡ ಚೀಲದ ಮುಂದೆ, ಬಿದ್ದಿರುವ ಅವನ ಮೃತಶರೀರವನ್ನು ಕಂಡರು. ಚೀಲವನ್ನು ಪರೀಕ್ಷಿಸಲಾಗಿ, ಅದರಲ್ಲಿ ಭತ್ತವಿದ್ದುದು ಕಂಡುಬಂತು.

''ಎಂಥ ಕೃಪಣ! ತಾನೂ ತಿಂದು ಬದುಕಲೆತ್ನಿಸಲಿಲ್ಲ, ಇತರರಿಗೂ ಕೊಡದೆ ಹೋದ! ಇವನಿಗಿಂತಲೂ ದೊಡ್ಡ ನೀಚರಿರಬಹುದೇ?'' ಎಂದು ಅಲ್ಲಿ ನೆರೆದವರು ಉದ್ಗಾರ ತೆಗೆದರು.

ಅಷ್ಟರೊಳಗೆ, ಅವನ ಶವದ ಬಳಿ ಒಂದು ಪತ್ರ ಬಿದ್ದಿದ್ದನ್ನು ಯಾರೋ ಕಂಡರು. ಕುತೂಹಲದಿಂದ ಪತ್ರ ಒಡೆದು ಓದಿದರು. ಅದರಲ್ಲಿ ಹೀಗೆ ಬರೆದಿತ್ತು:

''ನಾನು ಈ ಧಾನ್ಯವನ್ನು ತಿಂದರೆ ಅಥವಾ ಒಂದೆರಡು ಪ್ರಾಣಗಳನ್ನು ಉಳಿಸಲು ಇತರರಿಗೆ ಕೊಟ್ಟರೆ, ಬಹುಬೇಗ ಮುಗಿದುಹೋಗುವುದು. ಕ್ಷಾಮವಂತೂ ಒಂದಲ್ಲ ಒಂದು ದಿನ ಕೊನೆಗೊಳ್ಳಲೇಬೇಕು. ಆಗ ಮುಂದಿನ ವರ್ಷದ ಬೆಳೆಗೆ ಬೀಜವೇ ಇಲ್ಲದೆ, ತಿರುಗಿ ಸಾವಿರಾರು ಮಂದಿ ಉಪವಾಸ ಬಿದ್ದು ಸಾಯುವ ಅಪಾಯವು ಖಂಡಿತ. ಊರಿನಲ್ಲಿ ಯಾರೊಡನೆಯೂ ಬೀಜವಿರಲಾರದು. ಆದುದರಿಂದ ಈ ಊರಿನ ಜನರು ಬೀಜಕ್ಕಾಗಿ ಇದನ್ನುಪಯೋಗಿಸಲಿ ಎಂದು ಅವರಿಗೆ ಬಿಟ್ಟುಬಿಟ್ಟಿದ್ದೇನೆ! ನಾನು ಅನಶನವ್ರತ ಕೈಕೊಂಡಿದ್ದೇನೆ!''





## ಚಂದ್ರಕಾಂತ ಪೋಕಳೆ

# ಚೂರಿ

ಅವನು ಇಪ್ಪತ್ತೈದರ ತರುಣ. ಆಕರ್ಷಕ ರೂಪ. ಮೋಹಕವಾದ ಮುಖ. ಚೆಲುವಾದ ಕಂಗಳು. ಎತ್ತರವಾದ ನಿಲುವು. ಮಾರ್ದವ ನಡಿಗೆ. ರಸ್ತೆಯಲ್ಲಿ ಹೊರಟರೆ ಅವನನ್ನು ನೋಡಿದ ಎಂಥ ಹೆಣ್ಣಿನ ಎದೆಯೂ 'ಧಸಕ್' ಎನ್ನಬೇಕು. ಹಾದುಹೋದರೆ, ಮತ್ತೆ ಮತ್ತೆ ಹೊರಳಿ ನೋಡಬೇಕೆನ್ನುವಂಥ ಸ್ಫುರದ್ರೂಪಿ ವ್ಯಕ್ತಿತ್ವ.

ಹೊಲದ ಮನೆಯಲ್ಲಿ ಅವನು ಒಂಟಿಯಾಗಿ ವಾಸಿಸುತ್ತಿದ್ದ. ಎರಡೆಕರೆ ಹೊಲದಲ್ಲಿ ಕಬ್ಬು ಬೆಳೆಯುತ್ತಿದ್ದ. ಬಾವಿಗೆ ಹತ್ತು ಎಚ್.ಪಿ. ಮೋಟಾರು ಕೂಡ್ರಿಸಿದ್ದ. ಒಮ್ಮೆ ಕಬ್ಬಿನ ಬೀಜ ನೆಡೆಸಿ, ಆಗಾಗ ನೀರು ಹನಿಸಿ, ಗೊಬ್ಬರ ಹಾಕುವದು ಬಿಟ್ಟರೆ ಹೆಚ್ಚಿನ ಕೆಲಸವಿರಲಿಲ್ಲ. ಹೀಗಾಗಿ, ಕೆಲವು ಹಣ್ಣಿನ ಗಿಡಗಳನ್ನೂ, ತೆಂಗನ್ನೂ ನೆಟ್ಟು ಬೆಳೆಸಿದ್ದ. ಸಿಂಗಾಪುರ ತೆಂಗು ಐದಾರು ವರ್ಷದೊಳಗೇ ಬರುವ ಉತ್ತಮ ತಳಿ. ಈಗ ಗೊನೆಗಳಿಂದ ತುಂಬಿ ತೊನೆದಾಡುತ್ತಿತ್ತು. ಹಸಿರಾದ ಎಳೆ ತೆಂಗುಗಳನ್ನು ನೋಡಿ ಅದರ ಎಳನೀರು ಕುಡಿಯಬೇಕೆಂಬ ಆಸೆ ಅವನಿಗಾಯಿತು.

ಅವನು ತಕ್ಷಣ ಮನೆಯೊಳಗೆ ಹೋಗಿ ಕತ್ತಿಯನ್ನು ತಂದ. ಅದು ಅಷ್ಟೊಂದು ಹರಿತವಾಗಿರಲಿಲ್ಲ. ಆದರಿಂದಲೇ ತೆಂಗು ಉರುಳಿಸಿದ. ಮಂಡಗತ್ತಿಯಿಂದಲೇ ಅದರ ಮೇಲು ಚಿಪ್ಪನ್ನು ಸವರಿ ತೆಗೆಯಲು ಪ್ರಯತ್ನಿಸಿದ. ಆದರೆ ಗಟ್ಟಿ ಚಿಪ್ಪು ಸುಲಿಯುವುದು ಸಾಧ್ಯವಾಗದೇ, ಕೈ ಮಾತ್ರ ಕೆಂಪಾಯಿತು.


ಬಾಗೂರು ಮಾರ್ಕಂಡೇಯ

ಅದು ಮಧ್ಯಾಹ್ನದ ಹೊತ್ತು. ಕಮ್ಮಾರ ಸಾಲೆಗಾದರೂ ಹೋಗಿ ಕತ್ತಿಯನ್ನು ಹರಿತಗೊಳಿಸಿಕೊಂಡು ಬರೋಣವೆಂದು ಹೊರಬಿದ್ದ. ಕಮ್ಮಾರಸಾಲೆಯ ಸಮೀಪಕ್ಕೆ ಬಂದ. ಯಾರೂ ಕಾಣಲಿಲ್ಲ. ಒಲೆಯೂ ತಣ್ಣಗಿತ್ತು. ''ಮಾರ, ಮಾರ'' ಎಂದು ಕೂಗಿದ. ಕಂಬಳಿ ಹೊದ್ದು ಮಲಗಿದ್ದ ಮಾರ, ತಡವರಿಸಿ ಹೊರಬಂದು, ''ಏನಣ್ಣಾವರೇ?'' ಎಂದ. ''ಕತ್ತಿ ಸ್ವಲ್ಪ ಚೂಪು ಮಾಡಬೇಕಿತ್ತಲ್ಲ?''

''ಇವತ್ತು ಅಮಾಸಿ, ಕೆಲ್ಸ ಮಾಡೋ ಹಾಂಗಿಲ್ಲ'', ಎಂದು ಅಸಹಾಯಕತೆ ತೋಡಿಕೊಂಡ, ಮಾರ.

ಒಂದು ಚೂರಿಯಾದರೂ ಇದ್ದಿದ್ದರೆ ಎಳನೀರು ಕುಡಿಯಬಹುದಾಗಿತ್ತು. ಪೇಟೆಯಲ್ಲಾದರೂ ಚೂರಿ ಸಿಗಬಹುದೇನೋ ನೋಡೋಣ ಎಂದೆನಿಸಿತು. ಪೇಟೆಯ ಕಡೆಗೆ ಹೊರಟ. ಮಧ್ಯಾಹ್ನವಾಗಿದ್ದರಿಂದ ಕೆಲವು ಅಂಗಡಿಗಳು ಮುಚ್ಚಿದ್ದವು. ಜನರ ಓಡಾಟವೂ ವಿರಳವಾಗಿತ್ತು. ಆ ಕಡೆ, ಈ ಕಡೆ ನೋಡುತ್ತ ಹೊರಟ. ಒಂದು ಕಡೆ, ರಸ್ತೆಯ ಮಗ್ಗಲಲ್ಲಿ, ಓರ್ವ ಹೆಂಗಸು ಕೆಲವು ಕಬ್ಬಿಣದ ಸಾಮಾನು ಮಾರುತ್ತ ಕೂತಿದ್ದಳು. ಅಲ್ಲೇನಾದರೂ ಚೂರಿ ಸಿಗಬಹುದೇ ಎಂದುಕೊಂಡು ಸಮೀಪಿಸಿದ. ನೋಡಲು ಇರಾಣಿಯಂತೆ ಕಾಣುತ್ತಿದ್ದ ಆ ಹೆಂಗಸು ಕಬ್ಬಿಣದ ಕೆಲವು ಆಯುಧಗಳನ್ನು ಮಾರುತ್ತ ಕೂತಿದ್ದಳು. ಅದರಲ್ಲಿ ಕೆಲವು ಚಾಕು-ಚೂರಿಗಳೂ ಇದ್ದವು. ಆಕೆಯ ವಯಸ್ಸು ಇಪ್ಪತ್ತು-ಇಪ್ಪತ್ತೆರಡಿರಬೇಕು. ತುಂಬು ತಾರುಣ್ಯದ ತರುಣಿ. ಚಂಚಲ ಕಣ್ಣುಗಳು, ಮಾದಕವಾದ ನಗು, ಎಂಥವರನ್ನೂ ದಂಗುಬಡಿಸುವ ಮೋಹಕ ರೂಪ. ಅವನು ಅವಳ ಎದುರು ನಿಂತ. ''ಏನ್ ಬೇಕ್ ಸ್ವಾಮಿ?'' ಎಂದಾಕೆ ಪ್ರಶ್ನಿಸಿದಳು.

''ಚೂರಿ!'' ಎಂದು ತಡವರಿಸುತ್ತ ಉತ್ತರಿಸಿದ.

''ಇದರಾಗೆ ಯಾವ್ದು ಬೇಕು ನೋಡಿ'', ಆಕೆ ನಾಲ್ಕೈದು ವಿವಿಧ ಬಗೆಯ ಚೂರಿಗಳನ್ನೆತ್ತಿ ತೋರಿಸಿದಳು. ಅವನು ಒಂದೊಂದಾಗಿ ಪರಿಶೀಲಿಸಿದ. ಆದರೆ ಯಾವುದೂ ಹಿಡಿಸಲಿಲ್ಲ.

''ಬೇಡ, ಒಂದೂ ಚೆನ್ನಾಗಿಲ್ಲ'' ಎಂದು ಅಸಮಾಧಾನ ವ್ಯಕ್ತಪಡಿಸಿದ.

''ಮತ್ತೆಂಥ ಚೂರಿ ಬೇಕು?'' ಎಂದು ಕಣ್ಣಗಲಿಸಿ, ತುಟಿ ಕೊಂಕಿಸಿ ಕೇಳಿದಳು.

''ಮಜಭೂತಾಗಿರಬೇಕು!''

''ಮಜಭೂತೇ? ಅಲ್ಲಿ ಜೋಪಡ್ಯಾಗೈತಿ. ಅಲ್ಲಿಗ್ ಬರ್ತಿರಾ, ತೋರಿಸ್ತೇನಿ'' ಎಂದು ಆಹ್ವಾನಿಸಿದಳು.

ಒಂದು ಒಳ್ಳೆ ಮಜಭೂತಾದ ಚೂರಿಸಿಕ್ಕರೆ ಯಾಕೆ ಬಿಡಬೇಕು, ನೋಡೋಣ ಎಂದುಕೊಂಡು 'ಹೂಂ' ಎಂದ.

ಆಕೆ ಉತ್ಸಾಹದಿಂದ ಮೇಲಕ್ಕೆದ್ದಳು. ತನ್ನ ಕಬ್ಬಿಣದ ಸಾಮಾನುಗಳನ್ನೆಲ್ಲ ಗಂಟುಮೂಟೆ ಕಟ್ಟಿ, ಅಲ್ಲೇ ಮರದ ಬುಡದಲ್ಲಿಟ್ಟಳು. ಬಳಿಕ ಅವನೊಂದಿಗೆ ಹೊರಟಳು.



ಆಕೆ, ನಡೆಯುವಾಗ, ಕುದುರೆಯಂತೆ ನೆಗೆನೆಗೆದು ನಡೆಯುತ್ತಿದ್ದಳು. ಅವನ ಪಕ್ಕದಲ್ಲೇ ಹೆಜ್ಜೆ ಹಾಕುವಾಗ, ಅವನ ಮೈಗೆ ಮೈ ತಾಗಿಸುವ ಪ್ರಯತ್ನ ಮಾಡುತ್ತಿದ್ದಳು. ಆಗಾಗ ಆಸೆಗಣ್ಣಿನ ನೋಟದಿಂದ ಅವನನ್ನು ನೋಡುತ್ತಿದ್ದಳು. ಇಬ್ಬರೂ ಊರ ಹೊರಗಿನ ನಿರ್ಜನ ಪ್ರದೇಶಕ್ಕೆ ಬಂದರು. ಅಲ್ಲಿ ಇರಾನಿಯರ ಕೆಲ ಟೆಂಟಿನಂತಹ ಜೋಪಡಿಗಳಿದ್ದವು. ಬಾಗಿಲಿಗೆ ಪರದೆ ಬಿಡಲಾಗಿತ್ತು. ಆಕೆ ಪರದೆ ಸರಿಸಿ, ಒಳಗೆ ನುಸುಳಿ, ''ಬನ್ನಿ, ಸ್ವಾಮಿ'' ಎಂದು ಕರೆದಳು. ಹಿಂಬಾಲಿಸಿದ. ಆಕೆ ಒಳಗೆ ಬಂದವಳೇ, ಮೂಲೆಯಲ್ಲಿ ಮಡಚಿಟ್ಟಿದ್ದ ಹಾಸಿಗೆಯನ್ನು ಬಿಡಿಸಿದಳು. ತಲೆದಿಂಬು ಎತ್ತಿ ಬದಿಗೆ ಸರಿಸಿದಳು. ಅದರ ಕೆಳಗೆ ಒಂದೆರಡು ಚೂರಿಗಳಿದ್ದವು. ಅದರಲ್ಲಿ ಒಂದನ್ನೆತ್ತಿ



ಅವನಿಗೆ ನೀಡಿ, ''ನೋಡಿ, ಇದು ಹ್ಯಾಗಿದ್ಯೋ'' ಎಂದು ತೋರಿಸಿದಳು. ನಿಜಕ್ಕೂ ಚೂರಿಗೆ ಸುಂದರವಾದ ಹಿಡಿಕೆಯಿತ್ತು. ಸಾಕಷ್ಟು ಹರಿತವೂ ಆಗಿತ್ತು. ಅವನ ಕಣ್ಣು ಹಾಸಿಗೆ ಮೇಲಿದ್ದ ಇನ್ನೊಂದು ಚೂರಿಯ ಕಡೆಗೆ ಹೋಯಿತು. ಇದಕ್ಕಿಂತಲೂ ಅದು ಮತ್ತೂ ಸುಂದರವಾಗಿತ್ತು. ಅದರ ವಿನ್ಯಾಸವೂ ಸೊಗಸಾಗಿತ್ತು. ಅವನು ತಕ್ಷಣ ಅದನ್ನೆತ್ತಿಕೊಳ್ಳಲು ಬಗ್ಗಿದ. ಆಗ ಆ ಹೆಂಗಸು ಅವನ ಹಿಂದಿನಿಂದ ನುಗ್ಗಿ, ಅವನ ಮೇಲೆ ಎಗರಿದಳು. ಆ ರಭಸಕ್ಕೆ ಅವನು ಮುಗ್ಗರಿಸಿ, ಹಾಸಿಗೆ ಮೇಲೆ ಬಿದ್ದ. ಕೈಲಿ ಹಿಡಿದಿದ್ದ ಚೂರಿಯೂ ಕೆಳಗೆ ಬಿತ್ತು. ಅವಳು ತಟ್ಟನೆ ಅವನ ಮೈಮೇಲೆ ಬಿದ್ದು, ಅವನನ್ನು ತಬ್ಬಿಕೊಳ್ಳಲು ಪ್ರಯತ್ನಿಸಿದಳು. ಅವಳ ಕಂಗಳಲ್ಲಿ ಎಂಥದೋ ಉನ್ಮಾದಕ ದಾಹ. ಕಾಮಜ್ವರದಿಂದ ಕಂಪಿಸುತ್ತಿರುವಂತೆ ಕಾಣುತ್ತಿದ್ದಳು. ಆಕೆ ಅವನನ್ನು ಆಹ್ವಾನಿಸುತ್ತಿದ್ದಳು. ಪಕ್ಕದಲ್ಲಿ ಉರುಳಿ ತನ್ನ ಮೇಲೆ ಅವನನ್ನು ಎಳೆದುಕೊಳ್ಳಲು ಪ್ರಯತ್ನಿಸುತ್ತಿದ್ದಳು. ಹೆಣ್ಣಿನ ಆಕಸ್ಮಿಕ ಸ್ಪರ್ಶದಿಂದ ಅವನು ರೋಮಾಂಚನಗೊಂಡ. ಆದರೆ ಎಂಥದೋ ಭೀತಿ-ಮಾನ-ಮರ್ಯಾದೆಯ ಅಂಜಿಕೆ. ಸಾವರಿಸಿ ಕೇಳಿದ,

''ಏ, ಏನಿದು? ಏನ್ ಮಾಡಲು ಹತ್ತಿದ್ದಿ?''

ಅವನು ಗಾಬರಿಯಾದ. ಆಕೆಯ ಬಿಗಿಯಾದ ಹಿಡಿತದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ ಆಕೆಯ ಉನ್ಮತ್ತ ಸ್ಥಿತಿ ನೋಡಿ, ಅವನು ನಿಜಕ್ಕೂ ಕಂಗಾಲಾಗಿ, ಬೆವರಿದ. ಕೊನೆಗೆ ತನ್ನೆಲ್ಲ ಶಕ್ತಿಯನ್ನು ಒಗ್ಗೂಡಿಸಿ ಆಕೆಯನ್ನು ಜಾಡಿಸಿ ಒದ್ದು ಎದ್ದುನಿಂತು ಬೈದ.

ಆಕೆಗೆ ಸಂತಾಪ ತಲೆಗೇರಿತು: ಆಕೆ ತಟ್ಟನೆ ಸಿಡಿದೆದ್ದು ನಿಂತಳು. ಕಣ್ಣುಗಳಲ್ಲಿ ಬೆಂಕಿ ಕಿಡಿ ಕಾಣಿಸಿತು. ತುಟಿ ಥರಥರ ನಡುಗುತ್ತಿತ್ತು. ಎವೆಯಿಕ್ಕುವಷ್ಟರಲ್ಲಿ ಆಕೆ, ಕೆಳಗೆ ಬಿದ್ದ ಚೂರಿಯನ್ನೆತ್ತಿ ಅವನತ್ತ ನುಗ್ಗಿದಳು. ಚಕ್ಕೆಂದು ಹೊಟ್ಟೆಗೆ ಚುಚ್ಚಿಯೇ ಬಿಟ್ಟಳು. ರಕ್ತ ಚಿಲ್ಲೆಂದು ಚಿಮ್ಮಿತು. ಆಕೆಯ ಮುಖದ ತುಂಬ ರಕ್ತದ ತುಷಾರ ಸಿಂಚನ. ಕೆರಳಿದ ಕಾಳಿಯಂತೆ ಕಾಣಿಸುತ್ತಿದ್ದಳು. ಅಷ್ಟಕ್ಕೆ ಸಮಾಧಾನವಾಗಲಿಲ್ಲ. ಹುಚ್ಚು ಹಿಡಿದವಳಂತೆ, ''ಇಲ್ಲಾ ಅಂತಿಯಾ?'' ಎಂದು ಚೂರಿಯಿಂದ ಅವನ ಎದೆಗೂ ಚುಚ್ಚಿದಳು. ಹಾಗೆ ಹತ್ತಾರು ಬಾರಿಯಾದರೂ ಚುಚ್ಚಿರಬೇಕು. ರಕ್ತವಂತೂ ಕೋಡಿಕೋಡಿಯಾಗಿ ಹರಿಯಿತು. ಅವನು ದೊಪ್ಪೆಂದು ರಕ್ತದ ಮಡುವಿನಲ್ಲೇ ಉರುಳಿಬಿದ್ದು ಕೆಲವೇ ಕ್ಷಣಗಳಲ್ಲಿ ತಣ್ಣಗಾದ.





# ಗರ್ನಾಲು

ಅವನ ಹೆಸರೇನೋ '... ನಾಯ್ಕ' ಎಂದು ಹೇಳಿದ ನೆನಪು. ಊರಿನ ಒಂದು ತುದಿಯಲ್ಲಿ ಅವನ ತೋಟ. ಸುತ್ತಲೂ ದಟ್ಟ ಕಾಡು. ಅಲ್ಲಿ ಆನೆಯ ಕಾಟ ಬಹಳ ಇತ್ತು. ಒಮ್ಮೊಮ್ಮೆ ಹಿಂಡು ಹಿಂಡು ಆನೆಗಳು ತೋಟಕ್ಕೆ ನುಗ್ಗಿ, ಎಲ್ಲ ಹಾಳು ಮಾಡುತ್ತಿದ್ದವು. ಆನೆ ಬರುವ ಸುಳಿವು ದೊರೆಯತೊಡಗಿದ್ದೇ ನಾಯ್ಕ ಜಾಗ್ರತನಾಗುತ್ತಿದ್ದ. ದೊಡ್ಡ ಶಬ್ದ ಮಾಡಿ, ಆನೆಗಳನ್ನು ಓಡಿಸುತ್ತಿದ್ದ. ಅಡಿಗೆ ಕೋಣೆಯಲ್ಲಿ, ಒಲೆಯ ಮೇಲಕ್ಕೆ ಕಟ್ಟಿದ್ದ 'ಬೆಸಿಗೆ' ಯಲ್ಲಿ, ಸದಾ ಒಣಗಿ, ಸಿದ್ಧವಾಗಿರುತ್ತಿದ್ದ ಗರ್ನಾಲುಗಳು! ಗರ್ನಾಲು ಅಂದರೆ ಎದೆ ನಡುಗಿಸುವಂತೆ 'ಢಂ' ಎನ್ನುವ ದೊಡ್ಡ ಪಟಾಕಿಯ ಹಾಗೆ. ಗಾತ್ರದಲ್ಲಿ ರವೆ ಉಂಡೆಯ ಹಾಗೆ ಇದ್ದು, ಸಣ್ಣ ಕಡ್ಡಿಯಂತೆ ಚುಚ್ಚಿಕೊಂಡಿರುವ ಬತ್ತಿ. ಬೆಂಕಿ ಹಚ್ಚಿ ಮೇಲೆಸೆದರೆ ಭಯಂಕರ ಶಬ್ದ!! ಅದನ್ನು ಹಿಡಿಸಲು ಎಂಟೆದೆ ಬೇಕು. ಸ್ವಲ್ಪ ಮೈ ಮರೆತರೂ ಕೈ ಚೂರಾದೀತು! ಅಂಥ ಶಬ್ದ, ಅಂಥ ಶಕ್ತಿ, ಬಾಂಬಿನ ಹಾಗೆ.

ಒಮ್ಮೆ ಹೀಗೇ, ನಾಲ್ಕಾರು ಆನೆಗಳ ಗುಂಪು ತೋಟಕ್ಕೆ ನುಗ್ಗಿರುವ ಸುಳಿವು ಸಿಕ್ಕಿತು. ತೋಟದ ಕಡೆಗೊಮ್ಮೆ ಕಿವಿಗೊಟ್ಟು ಆಲಿಸಿ, 'ನಾಯ್ಕ' ಚುರುಕಾದ. ಹೆಂಡತಿಯೂ ದಡಬಡಿಸಿ ಎದ್ದಳು.

ಇಬ್ಬರಿಗೂ ಗಾಬರಿ, ಅವಸರ, ಆತಂಕ.

"ಬೇಗ... ಬೇಗ.. ಗರ್ನಾಲ್ ತಗೊಂಬಾ", ಗಂಡನ ಆಜ್ಞೆ ಕೇಳಿದ ನಾಯ್ಕನ ಹೆಂಡತಿ, ಕತ್ತಲಲ್ಲೇ ತಡಕಾಡಿ, ಚಿಮಿಣಿ ದೀಪ ಹಚ್ಚಿ, ಗರ್ನಾಲು ತಂದು ಗಂಡನ ಕೈಗೆ ಕೊಟ್ಟಳು. ಒಂದು ಕೈಯಲ್ಲಿ ದೀಪ, ಇನ್ನೊಂದು ಕೈಯಲ್ಲಿ ಗರ್ನಾಲು.



ನಾಯ್ಕ ಹೊರಗೆ ಹೋದ. ಒಮ್ಮೆ ತೋಟದತ್ತ, ಆನೆಗಳು ಇರಬಹುದಾದ ಜಾಗದತ್ತ ನೋಡಿದ 'ದೂರ ನಿಲ್ಲು', ಹೆಂಡತಿಗೆ ಗದರಿಸುವಂತೆ ಹೇಳಿ ಗರ್ನಾಲ್ ಹಚ್ಚಿದ... ಬೆಂಕಿ ಮುಟ್ಟಿತೋ ಇಲ್ಲವೋ ತಕ್ಷಣ ಎತ್ತಿ ಬಿಸಾಡಿದ ಮೇಲಕ್ಕೆ... ತೆಂಗಿನ ಮರದೆತ್ತರಕ್ಕೆ!

ಒಮ್ಮೆಗೆ ಮುತ್ತಿಕೊಂಡಿತು ಕತ್ತಲು. ದೀಪ ಮೇಲಕ್ಕೆ ಹಾರಿತ್ತು. ಗರ್ನಾಲ್ ಕೈಯಲ್ಲೇ ಉಳಿದಿತ್ತು ಹೆಂಡತಿಗೆ ತಪ್ಪಿನ ಅರಿವಾಯಿತು. "ಅಯ್ಯೋ.. ಅಯ್ಯೋ... ಬಿಸಾಡಿ.. ಬಿಸಾಡಿ", ಕಿರುಚಿಕೊಂಡಳು ನಾಯ್ಕ ಗಾಬರಿಯಿಂದ ಕೈಯಲ್ಲಿದ್ದ ಗರ್ನಾಲ್ ಅಂಗಳಕ್ಕೆ ಬಿಸಾಡುವುದಕ್ಕೂ, ಅದು 'ಢಂ'.. ಅಂ ಭಯಂಕರವಾಗಿ ಸಿಡಿಯುವುದಕ್ಕೂ ಸರಿಹೋಯಿತು. ಅವಸರದಲ್ಲಿ ಹೆಂಡತಿ, ಎಡಚ ಗಂಡನ ಎಡಗೈ ದೀಪ ಹಾಗೂ ಬಲಗೈಗೆ ಗರ್ನಾಲ್ ಕೊಟ್ಟಿದ್ದಳು!! ಗರ್ನಾಲ್ ಹಚ್ಚಿದವನೇ ನಾಯ್ಕ ದೀಪವನ್ನು ಕೈಬೀ ಮೇಲಕ್ಕೆ ಎಸೆದಿದ್ದ. ಅವನಿಗೀಗ ಹೆಂಡತಿಯ ಮೇಲೆ ವಿಪರೀತ ಸಿಟ್ಟು ಬಂತು. ಎಡಗೈ ಬೀಸಿ ಹೆಂಡತಿಯ ಕಪಾಳಕ್ಕೆ ರಪ್ಪನೆ ಬಾರಿಸಿದ.

ಭಾರೀ ಅನಾಹುತ ತಪ್ಪಿಸಿದ ಹೆಂಡತಿಗೆ ಎಂಥ ಉಡುಗೊರೆ ಕೊಟ್ಟ ನಾಯ್ಕ!

ಗರ್ನಾಲಿನ ಶಬ್ದಕ್ಕೆ ಆನೆಗಳೇನಾದರೂ ಓಡಿ ಹೋಗಿರದಿದ್ದರೆ, ನಮ್ಮ ಅಬ್ಬರದ ನಗು ಕೇಳಿ ಮೇಲೆ ಕಾಲು ಕಿತ್ತಿರಬಹುದು!

**ದಿನೇಶ ತೋಡಿಕಾ**

(ಗಿಜಿಗುಡುವ ಮದುವೆ ಮನೆಯಿಂದ ಸ್ವಲ್ಪ ದೂರ ಬಂದು, ಮಾತಿಗಿಳಿದಾಗ, ಚಂಗಪ್ಪ ಮಾಸ್ಟ್ರು ನನ್ನ ಅಣ್ಣನಿಗೆ ಹೇಳಿದ್ದು.)



# ಕ್ಲಾಸ್ ಮೇಟ್

ಮಹಾನಗರದ ಜನನಿಬಿಡ ಪ್ರದೇಶದಲ್ಲಿ, ಏಳಂತಸ್ತಿನ ಕಟ್ಟಡದ ತುದಿಯ ಥಳಥಳ ಆಫೀಸಿನಲ್ಲಿ ಐವತ್ತು ವಯಸ್ಸಿನ ಟಿಪ್‌ಟಾಪ್ ಉನ್ನತಾಧಿಕಾರಿ ಚೌಧರಿ, ಕಾರ್ಯನಿರತನಾಗಿದ್ದಾನೆ! ಆಗ, ಅಳುಕು ಅವನದೇ ವಯಸ್ಸಿನ ಮಾಸಿದ ವ್ಯಕ್ತಿಯೊಬ್ಬ ಬರುತ್ತಾನೆ. ಅವನನ್ನು ನೋಡಿ ಕಿರಿಕಿರಿಗೊಂಡ ಚೌಧರಿ ಏನಾಗಬೇಕಾಗಿತ್ತು ಎಂಬ ಧ್ವನಿಯಲ್ಲಿ "ಹೂಂ?" ಅಂತಾನೆ. ಬಂದವ "ನಾನು, ಸುದೀಪ್ ಶಾಲೆಯಲ್ಲಿ ನಿನ್ನ ಕ್ಲಾಸ್‌ಮೇಟಾಗಿದ್ದೆ. ನೆನಪಿದೆಯೆ...." ಎಂದು ತಡವರಿಸುತ್ತಾನೆ. ಕೆಲಸ ನಿಲ್ಲಿಸಿ ಅವನನ್ನೇ ತೀಕ್ಷ್ಣವಾಗಿ ನಿಟ್ಟಿಸಿ ನೋಡಿದರೂ ಏನೂ ನೆನಪು, ಗುರುತು ಹೊಳೆಯದ ಚೌಧರಿ ಹುಬ್ಬುಗಂಟಿಕ್ಕಿಯೇ ಇದ್ದಾನೆ. ಹೀಗೆ ಏನೇನೋ ಹಳೆ ನೆಪ, ನಂಟು ಮುಂದುಮಾಡಿ ಹಣ ಸಹಾಯ ಕೇಳಲು ಜನ ಬರುವುದು ಅವನಿಗೆ ಹೊಸತಲ್ಲ. ಇದೂ ಅಂಥದೇ ಕೇಸಿರಬಹುದು ಅಂತ, "ಹೌದ ಸರಿ, ಈಗೇನಾಗಬೇಕಿತ್ತು?" ಅಂತಾನೆ- ಕೆಲಸ ಮುಂದುವರಿಸುತ್ತ. "ಏನಿಲ್ಲ, ಊರಿನಿಂದ ಇಲ್ಲಿಯ

ದೊಡ್ಡಾಸ್ಪತ್ರೆಗೆ ಚೆಕಪ್‌ಗೆಂದು ಬಂದಿದ್ದೆ. ಹಣ ಕಡಿಮೆ ಬಿತ್ತು. ನೀನು ಇಲ್ಲಿದ್ದೀಯ ಅಂತ ಗೊತ್ತಿತ್ತು. ಒಂದು ಇನ್ನೂರು ರೂಪಾಯಿ ಕೊಟ್ಟರೂ ಮಹದುಪಕಾರ. ನನ್ನ ನೆನಪು ಆಗಲಿಲ್ಲವೆ?'' ಎಂದು ತೊದಲುತ್ತಾನೆ, ಆತ. ಚೌಧರಿ ಪರೀಕ್ಷಕನ ವರಸೆಯಲ್ಲಿ, ''ನೀನು ಯಾವ ವರ್ಷದ ಬ್ಯಾಚ್‌ನಲ್ಲಿ ನನ್ನ ಕ್ಲಾಸ್‌ಮೇಟ್ ಆಗಿದ್ದೆ?'' ಎಂದು ಕೇಳಿದಾಗ ''1960 ರಲ್ಲಿ. ನಮ್ಮ ಎಸ್ಸೆಸ್ಸೆಲ್ಸಿ ಗ್ರೂಪ್ ಫೋಟೋದಲ್ಲಿ- ನಿನ್ನ ಬಲಬದಿಗೆ ನಾನು ನಿಂತಿದ್ದೆ'' ಎಂದು ವಿಚಿತ್ರವಾಗಿ ಕಣ್ಣರಳಿಸುತ್ತಾನೆ, ಆಗಂತುಕ.



ಚೌಧರಿಗೆ ಏನೇನೂ ನೆನಪಾಗುವುದಿಲ್ಲ ಹಾಗಂತ ಅಲ್ಲಗಳೆಯಲೂ ಆಗುತ್ತಿಲ್ಲ. ಹಣ ಕೊಡಲೂ ಹಿಂಜರಿಕೆ. ''ನಾಳೆ ಮನೆಯ ಕಡೆ ಬಾ, ನೋಡೋಣ'' ಎಂದು ವಿಳಾಸ ಕೊಟ್ಟು ಕಳಿಸುತ್ತಾನೆ.

ಸಂಜೆ, ಮನೆಗೆ ಬಂದ ನಂತರ, ಹೆಂಡತಿಯ ಬಳಿ ಸಮಾಲೋಚಿಸುತ್ತಾನೆ. ಇಬ್ಬರೂ ಹಳೆಯ ಆಲ್ಬಮ್‌ನಿಂದ ಗ್ರೂಪ್ ಫೋಟೋ ತೆಗೆದು ನೋಡುತ್ತಾರೆ. ಬಾಲಚೌಧರಿಯ ಪಕ್ಕ ಹುಡುಗನೊಬ್ಬ ನಿಂತಿದ್ದೇನೋ ನಿಜ. ಆದರೆ ಅವನಿಗೂ, ಬೆಳಿಗ್ಗೆ ಬಂದ ಸುದೀಪ್‌ಗೂ ಏನೂ ಹೋಲಿಕೆ ತೋರುತ್ತಿಲ್ಲ. ಹುಡುಗನ ಕೂದಲು ಗುಂಗುರು ಗುಂಗುರಾಗಿ ಹಣೆಯ ಮೇಲಿವೆ. ಕಿವಿಗಳು ತುಸು ದೊಡ್ಡದಾಗಿವೆ. ಸುದೀಪನೋ ಬಕ್ಕತಲೆಯ ಅರೆವೃದ್ಧ. ''ಏನೇ ಇರಲಿ. ಪಾಪ, ತುಂಬ ಕಷ್ಟದಲ್ಲಿರಬೇಕು. ಬಂದರೆ ಏನಾದರೂ ಕೊಟ್ಟುಬಿಡಿ'', ಎನ್ನುತ್ತಾಳೆ ಹೆಂಡತಿ. ''ಛೆಛೆ... ಅವನು ಬರುವುದು ಸಂಶಯ. ಸುಳ್ಳುಗಾರ, ಖಂಡಿತ ಬರಲಾರ'' ಎನ್ನುತ್ತಾನೆ. ''ಇಲ್ಲ, ಹಣದ ಅವಶ್ಯಕತೆ ಇದ್ದವನಾದರೆ ಖಂಡಿತ ಬಂದಾನು'' ಎಂದು ಹೆಂಡತಿ ಹೇಳುತ್ತಾಳೆ.

ಬೆಳಿಗ್ಗೆ ಕರೆಗಂಟೆ ಆಗುತ್ತದೆ. ಚೌಧರಿ ಹೋಗಿ ಬಾಗಿಲು ತೆಗೆದರೆ, ಎದುರು ನಿಂತಿದ್ದಾನೆ, ಫೋಟೋದಲ್ಲಿಯ ಗುಂಗುರು ಗೂದಲ ದೊಡ್ಡ ಕಿವಿಯ, ಹೊಳಪುಗಂಗಳ ಹುಡುಗ!

ಅದೇ ಹುಡುಗ! ಅದೇ ಕಣ್ಣು! ಇದೆಂಥ ಕಾಲಾತೀತ ವಿಸ್ಮಯ ಎಂದು ಮೈ ಜುಮ್ಮೆಂದಾಗ ಎಳೆಕಂಠದಲ್ಲಿ ಪೋರ ಹೇಳುತ್ತಾನೆ.

''ಅಪ್ಪನಿಗೆ ಸುಸ್ತು ಜಾಸ್ತಿ ಆಗಿದೆ. ನನ್ನನ್ನು ಕಳಿಸಿದ್ದಾನೆ...''

ಮಣಿಭದ್ರ

(ಸತ್ಯಜಿತ್‌ರೇ ಅವರ ಸಣ್ಣಕತೆ ಆಧರಿಸಿ, ಅವರ ಮಗ ಸಂದೀಪ್‌ರೇ ನಿರ್ದೇಶಿಸಿದ ಟೆಲಿಚಿತ್ರವೊಂದರ ನೆನಪು)

ಕೂಗಿ ಕರೆದದ್ದು ಸರಿಯಾಗಿ ಕೇಳಿಸಿತ್ತು. ಹೆಸರು ಸ್ಪಷ್ಟವಾಗಿ ಕೇಳಿ ಬಂದಿತ್ತು. ''ಅವಿನಾಶ್!''

ಆದರೂ ಭ್ರಮೆಯಿರಬಹುದು ಎಂದೆನಿಸಿದೆ. ಆಚೆ ಈಚೆ ಹೋಗುವ ಜನರು, ಯಾರು ಯಾರನ್ನಾದರೂ ಕರೆಯಬಹುದು. ಇಲ್ಲಿ ನನ್ನನ್ನು ಈ ಹೆಸರಿನಿಂದ ಕರೆಯುವವರಾದರೂ ಯಾರು? ಗುರುತಿಸುವವರೆಲ್ಲ ನನ್ನನ್ನು ಸವಕಲಾದ ಆಫೀಸಿನ ಹೆಸರಿನಿಂದಲೇ ಗುರುತಿಸುತ್ತಾರೆ. ಎ. ಕಪೂರ. ಅದರಲ್ಲಿಯ 'ಎ' ಎಂದರೇನೆಂಬುದರ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳುವುದಿಲ್ಲ. ಬದುಕಿನಲ್ಲಿ ಆಗಲೇಬೇಕಾದ ಕೆಲಸಗಳೆಲ್ಲವೂ 'ಕಪೂರ' ಎಂಬ ಹೆಸರಿನಿಂದಲೇ ನಡೆದುಬಿಡುತ್ತವೆ. ಅದರಲ್ಲಿ ಅಪೂರ್ಣತೆಯಿದೆಯೆಂದಾದರೆ ಹಿಂದೆ 'ಮಿಸ್ಟರ್' ಸೇರಿಸಿಯೋ ಅಥವಾ ಮುಂದೆ ಸಾಹೇಬ ಸೇರಿಸಿಯೋ ಪೂರ್ತಿ ಮಾಡಿಕೊಂಡು ಬಿಡುತ್ತಾರೆ. ''ಹೇಗಿದ್ದೀರಿ ಮಿ. ಕಪೂರ?', ''ಹೇಳಿ ಕಪೂರ ಸಾಹೇಬರೇ, ಹೇಗೆ ನಡೆಯುತ್ತಿದೆ?''

ಆದರೀಗ, ನನ್ನ ಹೆಸರು ಸ್ಪಷ್ಟವಾಗಿ ಕೇಳಿ ಬಂದಿತ್ತು. ಜನಸಂದಣಿ ದಟ್ಟವಾಗಿತ್ತು. ಹಾಗಾಗಿ, ನನಗೆ ತಪ್ಪು ತಿಳುವಳಿಕೆ ಯಾಗಿರಬಹುದು ಅಥವಾ ಫೆಬ್ರುವರಿಯಲ್ಲಿ ಬೀಸುವ ಗಾಳಿಯಲ್ಲಿ ವಸಂತ ಋತುವಿನ ತಾಜಾತನದ ಅನುಭವ ವಿರುವುದರಿಂದ ನನಗೆ ಹಾಗೆ ಅನಿಸಿದ್ದಿರ ಬಹುದು. ಯಾಕೋ ಏನೋ! ಹಾಗೆ ನೋಡಿ ದರೆ, ಬೇಸಿಗೆಯ ಉರಿ, ಮಳೆಗಾಲದ ಮಳೆ ಯನ್ನು ಬಿಟ್ಟರೆ ಇನ್ನಾವ ಋತುವಿನ ಪರಿಚಯವೂ ಇಲ್ಲಾಗುವುದಿಲ್ಲ. ಆಗಸದಲ್ಲಿ ಮೋಡಗಳಿಲ್ಲ ದಿದ್ದರೂ, ತಿಳಿಯಾದ ಮೋಡದ ಬಣ್ಣವೇ ಇರುತ್ತದೆ. ಬಹಳ ವರ್ಷಗಳ ಹಿಂದೆ ಬಳಿದ ಬಣ್ಣ ದಂತೆ, ಎಲ್ಲವೂ ಮಾಸಲಾದಂತೆ ಕಾಣುತ್ತದೆ. ಗಾಳಿ, ಬೀಸಿದರೆ ಜೋರಾಗಿ ಬೀಸುತ್ತದೆ. ಇಲ್ಲ ವೆಂದರೆ ಬೀಸುವದೇ ಇಲ್ಲ. ಅದು ಸಮುದ್ರದ ಏರಿಳಿತವನ್ನೇ ಅವಲಂಬಿಸಿರುತ್ತದೆ. ಕತ್ತಲೆ-ಬೆಳ ಕನ್ನು ಬಿಟ್ಟರೆ ಹಗಲು-ಇರುಳುಗಳಲ್ಲಿ ಹೆಚ್ಚು ಅಂತರ ಕಾಣುವುದಿಲ್ಲ. ತಿಂದದ್ದು ಈ ಋತುವಿ ನಲ್ಲೂ ಕರಗುವದಿಲ್ಲ. ಆ ಋತುವಿನಲ್ಲೂ ಇಲ್ಲ. ಆದರೆ ಫೆಬ್ರುವರಿಯ ಆ ಸಂಜೆ ಬೇರೆಯೇ ರೀತಿಯದಾಗಿತ್ತು. ಗಾಳಿಯಲ್ಲಿ ವಸಂತ ಮಾಸದ ತುಸು ಆಭಾಸವಿತ್ತು. ಪಶ್ಚಿಮದ ಆಗಸವೂ ಹಿಂದಿನೆಲ್ಲ ದಿನಗಳಿಗಿಂತ ಸುಂದರವಾಗಿ ಕಾಣು ತ್ತಿತ್ತು. ಏಳುವರೆ ಆಗುತ್ತಿದ್ದಂತೆ ಹಸಿವೆಯೂ ಆಗಿತ್ತು. ರಸ್ತೆಯಲ್ಲಿ ಹೋಗುತ್ತಿದ್ದವರನ್ನು ನೋಡುತ್ತಿದ್ದೆ. ವ್ಹೇಲ್ ಮೀನಿನ ಬಗ್ಗೂ ಯೋಚಿ ಸುತ್ತಿದ್ದೆ. ಗರಿಗರಿಯಾದ ಶೇಂಗಾಬೀಜ ಸಿಕ್ಕರೆ, ಒಂದೈದು ಪೈಸೆ ಕೊಟ್ಟು ಖರೀದಿಸ ಬೇಕೆಂದೆನಿಸುತ್ತಿತ್ತು.

ಕರೆದದ್ದು ಮಾತ್ರ ಅವಿನಾಶನನ್ನೇ. ಧ್ವನಿ ಹುಡುಗಿಯದಾದುದರಿಂದ ನಂಬಿಕೆ ಬರಲಿಲ್ಲ. ಹುಡುಗಿಯದೋ ಹೆಂಗಸಿನದೋ. ಎರಡರಲ್ಲಿ ಅಂತರವಿದ್ದರೂ, ಹೆಚ್ಚಿಗೆ ಇರುವದಿಲ್ಲ. ಅಷ್ಟು ಸೂಕ್ಷ್ಮವಾದ ಅಂತರವನ್ನರಿಯಲು ಅಭ್ಯಾಸಬೇಕು.

ಮುಂಬೈ ಶಹರ. ಮರೀನ್ ಡ್ರ್ಯಾಯಿವ್‌ನ ಸಂಜೆ. ಅಂಥದರಲ್ಲಿ ನನ್ನನ್ನು ಕರೆಯುವ ಒಬ್ಬ ಹುಡುಗಿ. ಆಗುವಂತಿದ್ದರೆ ಏನೂ ಆಗಬಹುದು. ಆದರೆ ಹೆಚ್ಚಾಗಿ ನನ್ನ ಪಾಲಿಗೆ ಏನೂ ಆಗುವುದಿಲ್ಲ. ಹೇಗೆ ನಡೆಯುತ್ತಿದ್ದೆನೋ ಹಾಗೆ

ಹತ್ತಿಪ್ಪತ್ತು ಹೆಜ್ಜೆ ನಡೆದೆ. ಹಿಂದಿರುಗಿ ನೋಡ ಬಾರದೆಂದು ಹಾಗೆಯೇ ಹೋಗುತ್ತಿದ್ದೆ. ಆದರೂ, ನನ್ನನ್ನೇ ಯಾರೋ ಕರೆದಿರಬಹು ದೆಂಬ ಕುತೂಹಲದಿಂದ, ಸಹಜವಾಗಿ ಹಿಂದಿರುಗಿ ನೋಡಿದೆ. ಕೈಯೊಂದು ನನ್ನ ಕಡೆಗೆ ಅಲ್ಲಾಡುವುದನ್ನು ನೋಡಿದೆ. ಅವಿಶ್ವಾಸ ಹೆಚ್ಚು ತ್ತಿದ್ದಂತೆ, ಹಾಗೆಯೇ ಮಾಯವಾಯಿತು. ತುಂಬಾ ಪರಿಚಿತ ಮುಖ. ನೋಡಿದಾಗಲೇ ಗುರುತು ಸಿಕ್ಕಿತು. ಹಾಗಾಗಿ ಯೋಚಿಸುವ ಪ್ರಮೇಯ ಬರ ಲಿಲ್ಲ. ಆಶ್ಚರ್ಯವಾಯ್ತು, ಅವಳು ಮತ್ತೇಕೆ ಇಲ್ಲಿ!

ಬೋಂಡ, ಭೇಲಪುರಿಯವರಿಂದ ತಪ್ಪಿಸಿ ಕೊಳ್ಳುತ್ತ ಅವಳೆಡೆಗೆ ಸಾಗಿದೆ. ಕರೆದವಳು ಮಿಸು ಕಾಡದೆ ಅಲ್ಲೇ ನಿಂತಿದ್ದಳು. ಅವಳು ಕರೆದಾದ ಬಳಿಕ, ಗುರುತಿಸುವ, ಅವಳೆಡೆಗೆ ಹೋಗುವ ಎಲ್ಲಾ ಜವಾಬ್ದಾರಿ ನನ್ನ ಮೇಲಿದೆ ಎನ್ನುವಂತಿತ್ತು. ಹತ್ತಿರ ಹೋದರೂ, ಒಂದಿನಿತು ಮಿಸುಕಾಡ ಲಿಲ್ಲ. ದೂರವಿದ್ದಾಗ ತುಟಿ ಮುಚ್ಚಿ ನಕ್ಕವಳು, ಹತ್ತಿರ ಹೋದಾಗ ತುಟಿಬಿಚ್ಚಿ ನಗಲಾರಂಭಿಸಿ ದಳು. ಹುಬ್ಬಿನಲ್ಲಿರುವ ಐಬ್ರೊ ಪೆನ್ಸಿಲ್‌ನ ದಪ್ಪ ರೇಖೆಗಳನ್ನು ಮೆರೆಸುತ್ತ ''ಗುರುತಾಗಲಿಲ್ಲವಾ?'' ಎಂದಳು.

ಪ್ರಶ್ನೆ ಮೂರ್ಖತನದ್ದೆಂದು ಹೇಗೆ ಹೇಳು ವದು? ಗುರುತು ಹಿಡಿಯದೆ ಇದ್ದರೆ ಇಷ್ಟೊಂದು ದೂರ ಬರುತ್ತಿದ್ದೆನೆ? ''ಕ್ಷಮಿಸಿ ನೀವು ಯಾರೆಂದು ತಿಳಿಯುತ್ತಿಲ್ಲ''. ಇಷ್ಟು ಹೇಳುವುದಕ್ಕೆ ಮೂವತ್ತು ಗಜ ನಡೆದುಕೊಂಡು ಬರುತ್ತಿದ್ದೆನೆ? ಮನಸ್ಸಿನಲ್ಲಿ ಎಷ್ಟು ರೇಗಿದ್ದೆನೊ, ದನಿಯಲ್ಲಿ ಅಷ್ಟೇ ಮೆದು ವಾಗಿ ಕೇಳಿದೆ, ''ನಿನಗೇನನಿಸುತ್ತದೆ, ಗುರುತಿಸ ಲಿಲ್ಲವೆಂದಾ?''

ನಕ್ಕಳು, ಅಭ್ಯಾಸ ಬಲದಿಂದಲೊ, ಆದ ಸಂತೋಷದಿಂದಲೊ, ಗೊತ್ತಾಗಲಿಲ್ಲ. ವಿನಾ ಕಾರಣ ನಾನು ಮುಗುಳು ನಕ್ಕೆ. ''ಮೊದಲಿಗಿಂತ ಸ್ವಲ್ಪ ದಪ್ಪವಾಗಿದ್ದಿಯಾ'' ಎನ್ನುತ್ತಾ ತನ್ನ ವ್ಯಾನಿಟಿ ಬ್ಯಾಗ್ ಅಲ್ಲಾಡಿಸತೊಡಗಿದಳು. ಬಹುಶಃ, ತಾನು ಈಗಲೂ ಅಷ್ಟೇ ಚಿಡಗಿ, ಕಿರುವಯಸ್ಸಿ ನವಳು ಎಂದು ತೋರಿಸುವುದಕ್ಕಿರಬಹುದು. ಅವಳು ಹೇಗೆ ಕಾಣುತ್ತಾಳೆಂದು ನಿಜವಾಗಿ ಹೇಳಿಬಿಡಬೇಕೆಂದು ಒಮ್ಮೆ ಯೋಚಿಸಿದೆ, ಆದರೆ ಸಜ್ಜನಿಕೆಯ ಮುಖವಾಡ ಹೊತ್ತು, ಅವಳೇನನ್ನು ಕೇಳಲು ಇಷ್ಟಪಡುಬಹುದೊ, ಅದನ್ನೇ ಹೇಳಿದೆ, ''ನಿನ್ನಲ್ಲಿ ಅಷ್ಟೇನೂ ಅಂತರ ಕಾಣುತ್ತಿಲ್ಲ.''

ಅವಳು ನಸುನಕ್ಕಳು. ನಾನೂ ಮತ್ತೆ ಮುಗುಳುನಕ್ಕೆ. ಆದರೀಗ ವಿನಾಕಾರಣದಿಂದಲ್ಲ. ಅವಳು ಬ್ಯಾಗ್ ಬೀಸುವುದನ್ನು ಬಿಟ್ಟಳು. ಅದರಿಂದ ಶೇಂಗಾಬೀಜ ಹೊರ ತೆಗೆದಳು. ಕೆಲವು ಕಾಳುಗಳನ್ನು ಬಾಯಿಗೆ ಎಸೆದು, ನನ್ನತ್ತ ಒಂದಿಷ್ಟು ಚಾಚುತ್ತ ಕೇಳಿದಳು, ''ಈಗಲೂ ಒಂಟಿಯಾಗಿದ್ದೀಯಾ?''

ಹೇಳಿಬಿಡೋಣವೆಂದರೆ ಕೂಡಲೆ ಯಾವ ಉತ್ತರವೂ ಹೊಳೆಯಲಿಲ್ಲ. ಸುಳ್ಳು ಹೇಳೋಣ ವೆಂದು ಮೊದಲು ಯೋಚಿಸಿದೆ. ಸತ್ಯವನ್ನೇ ಹೇಳಿದರಾಯ್ತೆಂದು ಮತ್ತೆ ಎಣಿಸಿದೆ. ಆದರೆ ಸುಳ್ಳು-ಸತ್ಯ ಎರಡಕ್ಕೂ ಮನಸ್ಸು ಒಪ್ಪಿಗೆ ಕೊಡ ಲಿಲ್ಲ. ಸವಕಲು ನುಡಿಯೊಂದನ್ನು, ಎಲ್ಲಿಂದಲೋ ತಂದು ನಾಲಿಗೆಯ ಮೇಲಿಟ್ಟುಕೊಂಡೆ- ''ಒಂಟಿತನವನ್ನು ಅನುಭವಿಸುವವರು ಮಾತ್ರ ಒಬ್ಬಂಟಿಯಾಗಿರುತ್ತಾರೆ.''

ಬ್ಯಾಗಿನಲ್ಲಿ ಮತ್ತೆ ಕಾಳುಗಳು ಕೈಗೆಟಕಲಿಲ್ಲ. ಸ್ವಲ್ಪ ಹೊತ್ತು ಆಚೆ, ಈಚೆ ತಡಕಾಡಿದಳು. ಯಾವುದೋ ಮೂಲೆಯಲ್ಲಿ, ಮೂರು ನಾಲ್ಕು ಕಾಳುಗಳು ಸಿಕ್ಕಿದ್ದಕ್ಕೆ, ಕಣ್ಣಲ್ಲಿ ಹೊಳಪು ಕಾಣಿಸಿತು. ತೆಗೆದು, ಒಂದೊಂದಾಗಿ ಬಾಯಿಗಿಟ್ಟು, ಜಗಿಯ ತೊಡಗಿದಳು.

ಅವಳ ಹಲ್ಲುಗಳು ಈಗಲೂ ಚೂಪಾಗಿದ್ದವು. ನೆಲಗಡಲೆ ನುಂಗುವಾಗ ಕತ್ತಿನ ಮೇಲೆ ಅದೇ ರೀತಿಯಲ್ಲಿ ರೇಖೆಗಳು ಮೂಡುತ್ತಿದ್ದವು. ''ನೀನು ಅನುಭವಿಸುತ್ತಿಲ್ಲ, ಅದು ಒಳ್ಳೆಯ ಲಕ್ಷಣ'' ಎನ್ನುತ್ತ ಮತ್ತೆ ಕಾಳುಗಳನ್ನು ಅಗಿಯತೊಡಗಿದಳು.

ನಾನವಳ ಹೆಸರನ್ನು ನೆನಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೆ. ಬಹಳ ದಿನಗಳವರೆಗೆ ಆ ಹೆಸರು ನಾಲಿಗೆಯ ಮೇಲಿತ್ತು. ಬಹಳಷ್ಟು ಹುಡುಗಿಯರಿಗಿರುವ ಸರ್ವೇ ಸಾಮಾನ್ಯವಾದ ಹೆಸರು ಅದಾಗಿತ್ತು. ಪ್ರತಿ ಮೂರನೆಯ ಮನೆಯಲ್ಲಿ, ಅಂತಹ ಹೆಸರಿನ ಹುಡುಗಿ ಸಿಗುತ್ತಾಳೆ. ಅಂದಿನ ದಿನಗಳಲ್ಲಿ, ಆರೇಳು ವರ್ಷಗಳ ಹಿಂದೆ, ಒಂದೇ ಸಮನೆ ಇಪ್ಪತ್ತು ಇಪ್ಪತ್ತೆರೆಡು ದಿನ ಸತತವಾಗಿ ಅವರನ್ನು ಭೇಟಿಯಾಗುತ್ತಿದ್ದೆ. ಅವರಿಬ್ಬರು ಅಕ್ಕ-ತಂಗಿಯರು. ಮುಖಲಕ್ಷಣದಲ್ಲಿ ಸ್ವಲ್ಪವೂ ಹೋಲಿಕೆಯಿರಲಿಲ್ಲ. ದೊಡ್ಡವಳ ಮುಖದ ಎಲುಬುಗಳು ಚೌಕಾಕಾರವಾಗಿದ್ದರೆ ಚಿಕ್ಕವಳ ಮುಖದ್ದು ಶಿಲುಬೆಯಕಾರದಲ್ಲಿದ್ದವು. ಇಬ್ಬರ ಬಣ್ಣವೂ ಬೆಳ್ಳಗಿತ್ತು. ಆದರೆ ಚಿಕ್ಕವಳು ಹೆಚ್ಚು ಬೆಳ್ಳಗೆ ಕಾಣುತ್ತಿದ್ದಳು. ಇಬ್ಬರ ಕಣ್ಣುಗಳು ದೊಡ್ಡದಾಗಿದ್ದರೂ ಚಿಕ್ಕವಳದು ಎದ್ದು ಕಾಣು ತ್ತಿದ್ದವು. ಇಬ್ಬರೂ ವಾಚಾಳಿಗಳಾಗಿದ್ದರೂ ಚಿಕ್ಕ ವಳ ವಾಚಾಳಿತನ ಅಷ್ಟು ಕರಕರೆ ಯಾಗುತ್ತಿರಲಿಲ್ಲ. ಚಿಕ್ಕವಳ ಹೆಸರು ಪ್ರಮೀಳಾ ಯಾನೆ ಪಮ್ಮಿ ಯಾನೆ ಮಿಸ್.ಪಿ. ಮತ್ತೆ ದೊಡ್ಡವಳ ಹೆಸರು.. ಥೆ.. ನೆನಪೇ ಆಗುತ್ತಿಲ್ಲ.. ಅವರ ಪರಿಚಯವಾಗಿದ್ದ ದಿನಗಳಲ್ಲಿ, ದೊಡ್ಡವಳ ಮದುವೆಯಾಗಿ ವಿಚ್ಛೇದನವಾಗಿತ್ತು. ಹಾಗಾಗಿ ಸ್ವಲ್ಪ ಬಾಲಿಶವಾಗಿ ಮಾತನ್ನಾಡುತ್ತಿದ್ದಳು. ಮಾತು ಮಾತಿಗೆ ತನ್ನ ಹೆಸರನ್ನು ಎತ್ತುತ್ತಿದ್ದಳು. ಸರಳಾ.. ಹೌದು, ಅವಳ ಹೆಸರು ಸರಳಾ. "ನಾನು ಹೇಳಿದೆ ಸರಳಾ, ನೀನು ಯಾವತ್ತೂ ಯಾಕೆ ಹೀಗೆ ಮಗುವಿನ ಹಾಗೆ ಇರ್ತಿಯಾ?" ಹಾಗಂತ ತನ್ನಷ್ಟಕ್ಕೆ ಹೇಳಿಕೊಳ್ಳುತ್ತಿದ್ದಳು.

ಅವಳಿಗೆ ತನ್ನ ಹೆಸರು ಇಷ್ಟವಿರಲಿಲ್ಲ. ಸ್ಪೆಲ್ಲಿಂಗ್‌ನ್ನು ಸ್ವಲ್ಪ ಬದಲಾಯಿಸಿ, ಅದರಲ್ಲಿ ಇಂಗ್ಲಿಷ್ ಸ್ಟೈಲ್ ತರುವುದು ಸಾಧ್ಯವಿರಲಿಲ್ಲ. ಪ್ರಮೀಳಾದಲ್ಲಿಯ 'ಎ' ಯನ್ನು 'ಓ' ಮಾಡಿದರೆ ಪ್ರೊಮಿಲಾ ಆಗಿ ಬಿಡುತ್ತಿತ್ತು. 'ಆರ್'ಬಿಟ್ಟರೆ ಪಮೇಲಾ ಆಗುತ್ತಿತ್ತು. ಪ್ರಮೀಳಾ ಇನ್ನೂ ಮದುವೆಯಾಗಲಿಲ್ಲವೆಂದು ಇವಳಿಗೆ ಹೊಟ್ಟೆಯುರಿಯಿತ್ತು. ಪರಿಚಿತರು ಮಾತಾಡುವುದು ಇವಳಲ್ಲಾದರೂ, ಅವರ ಗಮನ ಪ್ರಮೀಳಾನ ಮೇಲಿರುತ್ತಿತ್ತು.

'ಆಧೇ ಅಧೂರೆ', 'ಲೆಹರೋಂಕೆ ರಾಜಹಂಸ್', 'ಆಷಾಢ್‌ಕಾ ಏಕ್ ದಿನ್'ಗಳಂಥ ಅತ್ಯಾಧುನಿಕ ನಾಟಕಗಳನ್ನು ಬರೆದ (ಇವುಗಳ ಕನ್ನಡ ರೂಪಾಂತರವನ್ನು ಸಿದ್ಧಲಿಂಗ ಪಟ್ಟಣಶೆಟ್ಟಿ ಮಾಡಿದ್ದಾರೆ) **ಮೋಹನ್ ರಾಕೇಶ್**, ಆಧುನಿಕ ಹಿಂದಿ ಸಾಹಿತ್ಯ ಕಂಡ ಶ್ರೇಷ್ಠ ಪ್ರತಿಭೆ. ಅನೇಕ ಕಾದಂಬರಿಗಳನ್ನು, ಕಥಾ ಸಂಗ್ರಹಗಳನ್ನು ಪ್ರಕಟಿಸಿರುವ ಮೋಹನ್ ರಾಕೇಶ್, ರಮ್ಯತೆಯ ಕೊಳದ ಕಮಲದ ಬಳ್ಳಿಗಳಲ್ಲಿ ಸಿಕ್ಕುಬಿದ್ದ ಹಿಂದಿ ಸಾಹಿತ್ಯವನ್ನು ಹೊರತಂದವರು. ಅಮೃತಸರದಲ್ಲಿ ಜನಿಸಿ, ಲಾಹೋರ್ ವಿಶ್ವವಿದ್ಯಾಲಯದಿಂದ ಹಿಂದಿ, ಸಂಸ್ಕೃತಗಳ ಎಂ.ಎ. ಮಾಡಿ, ಮುಂಬಯಿ, ಜಲಂಧರ, ದೆಹಲಿ, ಕಾನ್ಪುರುಗಳಲ್ಲಿ ಉಪನ್ಯಾಸಕರಾಗಿ ಕೆಲಸ ಮಾಡಿದರು. ಹೋದಲ್ಲೆಲ್ಲ ನೌಕರಿಯ ಕುಣಿಕೆಗೆ ಬೇಸತ್ತು ಬಿಟ್ಟು ಬಂದರು. ಕೊನೆಗೆ 'ಸಾರಿಕಾ' ಪತ್ರಿಕೆಯ ಸಂಪಾದಕರಾಗಿ, ಅದೂ ಸುಸ್ತಾಗಿ ಹೊರಬಿದ್ದರು. ಮನುಷ್ಯನ ಭಗ್ನ, ಅಪೂರ್ಣ ರೂಪಗಳನ್ನು ಜೋಡಿಸಿ, ವಿಶಾಲ ಮನುಜಾಕೃತಿಯನ್ನು ಕಟ್ಟಿಕೊಡುವ ಮೋಹನ್ ರಾಕೇಶ್‌ರ ಬರವಣಿಗೆಯಲ್ಲಿ ಸುಕುಮಾರತೆ ಮತ್ತು ಚಿಂತನಶೀಲತೆ ಒಟ್ಟಿಗೇ ಮಿಂಚುತ್ತವೆ.

'ಫೌಲಾದ್ ಕಾ ಆಕಾಶ್' (1966) ಸಂಗ್ರಹದಿಂದ ಆಯಲಾದ ಈ ಕಥೆಯನ್ನು ಕನ್ನಡಕ್ಕೆ ತಂದಿರುವ ಕವಯತ್ರಿ **ಮಾಧವಿ ಭಂಡಾರಿ**, ಉಡುಪಿಯಲ್ಲಿ ಹಿಂದಿ ಉಪನ್ಯಾಸಕಿಯಾಗಿದ್ದಾರೆ.

''ಪ್ರಮೀಳಾನ್ನ ಭೇಟಿ ಮಾಡ್ತಿಯಾ?''

''ಅವಳೂ ಇಲ್ಲೇ ಇದ್ದಾಳಾ?'' ನಾನು ಕೇಳಿದ್ದಕ್ಕೆ-

''ನಾವಿಬ್ಬರೂ ಒಟ್ಟಿಗೆ ಬಂದಿದ್ದೇವೆ. ಸತೀಶ ನನ್ನು ಶಿಪ್ ಹತ್ತಿಸಲಿಕ್ಕಿತ್ತು. ಅವನು ಜರ್ಮನಿಗೆ ಹೊರಟಿದ್ದಾನೆ. ಲೋಕೋಮೋಟಿವ್ ಇಂಜನಿಯರಿಂಗ್‌ಗಾಗಿ ಅಲ್ಲಿಗೆ ಹೊರಟಿದ್ದಾನೆ.

''ಸತೀಶ್?'' ಎಷ್ಟೇ ಪ್ರಯತ್ನಿಸಿದರೂ ಆ ಹೆಸರಿನ ವ್ಯಕ್ತಿಯ ಮುಖ ನೆನಪಾಗಲಿಲ್ಲ.

''ನಿನಗೆ ಸತೀಶನ ಪರಿಚಯವಿಲ್ಲವಾ?'' ಆಶ್ಚರ್ಯವಾಯಿತವಳಿಗೆ. ಕ್ಷಣ ಹೊತ್ತು ನಾಲಿಗೆಯಿಂದ ಲಿಪ್‌ಸ್ಟಿಕ್ ನೆಕ್ಕತೊಡಗಿದಳು. ''ನಮ್ಮ ಚಿಕ್ಕ ತಮ್ಮ ಸತೀಶ. ನೀನು ಅವನೊಂದಿಗೆ ಕುಳಿತು ರಾತ್ರಿಯಿಡಿ ಇಸ್ಪೀಟ್ ಆಡುತ್ತಿದ್ದಿಯಲ್ಲ.''

ಇಸ್ಪೀಟ್ ಆಡುತ್ತಿದ್ದುದಂತೂ ನಿಜ. ಆದರವನ ಹೆಸರು 'ಸತ್ತೀ' ಎಂದು ನೆನಪಾಗುತ್ತಿದೆ. ಏಳು ವರ್ಷಗಳ ನಂತರ, ಸತೀಶ ಸಾಹೇಬನಾಗಿ, ಲೋಕೋಮೋಟಿವ್ ಇಂಜನಿಯರಿಂಗ್‌ಗಾಗಿ ಜರ್ಮನಿಗೆ ಹೋಗಬಹುದು ಎಂದು ಯೋಚಿಸಿರಲಿಲ್ಲ!

''ಹಾಂ ಯಾಕೆ ನೆನಪಿಲ್ಲ? ಸತೀಶನನ್ನು ಮರೆಯಲುಂಟಾ?''. ಅವನನ್ನು ಮರೆಯುವದು ಸಾಧ್ಯವಿರಲಿಲ್ಲ. ವಿಶೇಷವಾಗಿ ಅವನ ಚೂಪು ಮೂಗಿನಿಂದಾಗಿ.

''ಪ್ರಮೀಳಾ ಫೋರ್ಟ್‌ನಲ್ಲಿ ಶಾಪಿಂಗ್ ಮಾಡುತ್ತಿದ್ದಾಳೆ. ಅಂಗಡಿಯಲ್ಲಿ ನನಗೆ ಉಸಿರುಗಟ್ಟುತ್ತಿತ್ತು. ಹಾಗಾಗಿ ಇಲ್ಲಿಗೆ ಬಂದೆ''. ಬೀಸುವ ಗಾಳಿಗೆ, ಸೆರಗು ಭುಜದಿಂದ ಜಾರಿ ದರೂ ಗಮನಿಸದವಳಂತಿದ್ದಳು. ಬ್ಲೌಸಿನ ಗುಂಡಿಗಳನ್ನೂ ತೆಗೆದುಬಿಡಬೇಕು ಎನ್ನುವಂತೆ ಬೆರಳುಗಳನ್ನು ಗುಂಡಿಗಳ ಮೇಲಿಟ್ಟಿದ್ದಳು. ಶಹರದ ಹವಾಮಾನ ನಿಯಂತ್ರಣಕರು ಹತ್ತಿರ ದಲ್ಲೇ ಎಲ್ಲೋ ಇದ್ದಾರೆ ಎನ್ನುವಂತೆ, ''ಇವತ್ತು ತುಂಬಾ ಸೆಕೆ ''ಎಂದಳು. ಫಿರ್ಯಾದೆಯ ಇನ್ನೊಂದು ಮಗ್ಗಲು ಎನ್ನುವಂತೆ ''ದಿಲ್ಲಿಯಲ್ಲಿ ಫೆಬ್ರುವರಿ ತಿಂಗಳು ಎಷ್ಟು ಚೆನ್ನಾಗಿರುತ್ತದೆ'' ಎಂದಳು.

'ಸರಿ ಮತ್ತೆ ಸಿಗೋಣ' ಎಂದು ಒಬ್ಬರನ್ನೊಬ್ಬರು ಬೀಳ್ಕೊಳ್ಳುವ ರಸ್ತೆಯ ತಿರುವು ಬಂತು. ಆ ಮಾತನ್ನು ಅವಳೇ ಹೇಳಲೆಂದು ಕಾದೆ. ಅವಳು ಹೇಳಲಿಲ್ಲ. ಬಹುಶಃ, ಅದರ ಕಡೆಗೆ ಅವಳ ಲಕ್ಷ್ಯ ಹೋಗಿರಲಿಕ್ಕಿಲ್ಲ. ಒಮ್ಮೆಲೆ ನನ್ನ ಮೊಣಕೈ ಹಿಡಿದು, ''ನಡೆ ಫ್ಲೋರಾ ಫೌಂಟೇನ್ ಕಡೆಗೆ ಹೋಗೋಣ. ಎಂಟು ಗಂಟೆಯ ನಂತರ ವೋಲ್ಗಾದ ಹೊರಗೆ ಸಿಗೋಣ ಎಂದು ಪಮ್ಮಿ ಹೇಳಿದ್ದಾಳೆ. ಜೊತೆಗೆ ನಿನ್ನನ್ನು ನೋಡಿದರೆ ಅವಳಿಗೆ ಬಹಳ ಖುಷಿಯಾಗಬಹುದು''

ಪಮ್ಮಿಯನ್ನು ಗುರುತಿಸುವದು ನನ್ನ ಪಾಲಿಗೆ ಸ್ವಲ್ಪ ಕಷ್ಟವಾಯ್ತು. ಅವಳಂತೂ ನೋಡುತ್ತಿರುವಂತೆಯೆ ಗುರುತು ಹಿಡಿದುಬಿಟ್ಟಳು. ''ಓಹ್! ಅವಿನಾಶ್ ನೀವು ಆವತ್ತಿನಿಂದಲೂ ಮುಂಬೈಯಲ್ಲೇ ಇದ್ದೀರಾ?''.

ಅವಳ ಮುಖದಲ್ಲಿಯ ಆ ಶಿಲುಬೆಯಾಕಾರ ಮಾಯವಾಗಿ, ಕೆನ್ನೆ ದುಂಡಗಾಗಿತ್ತು. ಅಲ್ಲಿರುವ ಮೂಳೆಗಳ ಪತ್ತೆಯೇ ಇರಲಿಲ್ಲ. ಆದರೆ ಗಲ್ಲದ ಗುಳಿ ಮಾತ್ರ ಹಾಗೆಯೇ ಇತ್ತು. ತೋಳುಗಳು ಎರಡು ಪಟ್ಟು ದಪ್ಪವಾಗಿರದಿದ್ದರೂ ಒಂದೂವರೆ ಪಟ್ಟಂತೂ ಆಗಿರಲೇಬೇಕು. ಉಳಿದಂತೆ ಎಲ್ಲಾ ಸೈಜುಗಳು ಸೀರೆಯ ಹಿಂದೆ ಅವಿತಿದ್ದವು. ಒಟ್ಟಿನಲ್ಲಿ ಈಗ ಅವಳೇ ಅಕ್ಕನಂತೆ ಕಾಣುತ್ತಿದ್ದಳು.

ಹೇಳಬೇಕೆನಿಸಿದರೂ ನಾಲಿಗೆ ಹೊರಳಲಿಲ್ಲ. ನನ್ನ ನಿಂತ ಭಂಗಿ ನನಗೇ ಸರಿಯೆನಿಸಲಿಲ್ಲ. ''ಹಾಂ ಇಲ್ಲೇ ಇದ್ದೇನೆ'' ಹೇಳುತ್ತಿದ್ದಂತೆ ನನಗೆ ನಗು ಬಂತು. ಆದರ ಉತ್ತರ ಕೇಳಿದ ಅವಳು ಸೀರಿಯಸ್ ಆದಳು.

ಆಗಿನಿಂದಲೂ ಒಂದೇ ಶಹರದಲ್ಲಿದ್ದೇನಲ್ಲ ಎಂದು ಸಂಕಟವಾಯ್ತು. ಸಂಭಾವಿತರ್‍ಯಾರಾದರೂ ಇಷ್ಟು ವರ್ಷ ಒಂದೇ ಕಡೆ ಇರುತ್ತಾರಾ? ಬೇರೆಲ್ಲಿ

ಗಾದರೂ ಹೋಗಿದ್ದರೆ ಇವಳು ಇಷ್ಟೊಂದು ಸೀರಿಯಸ್ ಆಗುತ್ತಿರಲಿಲ್ಲ.

"ಅದೇ ಫ್ಲ್ಯಾಟಲ್ಲಾ?", ಅವಳು ಮೂಗು ಸಿಂಡರಿಸಿದಳು. ಒಂದೇ ಊರಲ್ಲಿರುವುದನ್ನು ಹೇಗಾದರೂ ಸಹಿಸಬಹುದು. ಆದರೆ ಅದೇ ಫ್ಲ್ಯಾಟಿನಲ್ಲಿರುವದು?... ಸಾಧ್ಯವೇ ಇಲ್ಲ, ವಿಶೇಷವಾಗಿ ಫ್ಲ್ಯಾಟ್ ಅಂತಹದಾಗಿದ್ದಾಗ..

ಯಾವ ಕಾಲ ಮೇಲೆ ಬಲಹಾಕಿ ನಿಂತು ಮಾತನಾಡಬೇಕೆಂಬುದೇ ಗೊತ್ತಾಗಲಿಲ್ಲ. ಯಾವ ಕಾಲೂ ಅಷ್ಟು ಸರಿ ಎನ್ನಿಸಲಿಲ್ಲ. ತೊಟ್ಟ ಪಾಯಿಜಾಮ ಅಷ್ಟು ಸರಿ ಕಾಣಲಿಲ್ಲ. ಅದರ ಕ್ರೀಸ್ ಸರಿಯಾಗಿರಲಿಲ್ಲ. ಮೊದಲೇ ಗೊತ್ತಾಗಿದ್ದರೆ, ಬೇರೆ ಪಾಯಿಜಾಮ ತೊಡುತ್ತಿದ್ದೆ. ಅಂಗಿಯ ಮಧ್ಯದ ಗುಂಡಿ ತುಂಡಾಗಿತ್ತು. ಗೊತ್ತಿದ್ದರೆ ಅದನ್ನೂ ಹಾಕಿಕೊಂಡು ಬರುತ್ತಿದ್ದೆ. ಈಗಲೂ ಅದೇ ಫ್ಲ್ಯಾಟಿನಲ್ಲಿದ್ದೇನೆಂದು ಬಾಯಿ ಬಿಟ್ಟು ಹೇಳಲು ಮನಸ್ಸಾಗಲಿಲ್ಲ, ಕೇವಲ ತಲೆ ಅಲ್ಲಾಡಿಸಿದೆ.

"ಅದೇ ಐದನೆಯ ಮಾಳಿಗೆಯ ಫ್ಲ್ಯಾಟಿನಲ್ಲಾ?" ಇದನ್ನು ತಿಳಿದು ಅವಳಿಗೆ ಸಂತಸವಾಯ್ತೋ, ದುಃಖವಾಯ್ತೋ ಗೊತ್ತಾಗಲಿಲ್ಲ. ಅವಳಿಗಾಗುವ ಸಂತೋಷ ಬೇಸರದಲ್ಲಿ ಅಂತರವೇ ತಿಳಿಯುವುದಿಲ್ಲ. ಈ ದೂರು ಆವತ್ತೂ ಇತ್ತು, ಇವತ್ತೂ ಇದೆ.

ಕಿಸೆಯಲ್ಲಿ ಒಂದು ಚಾರ್‌ಮಿನಾರ್ ಸಿಗಬಹುದೆಂದು ತಡಕಾಡಿದೆ. ಇರಲಿಲ್ಲ, ಗೊತ್ತಾಗದೆ, ಬೆಂಕಿಪೆಟ್ಟಿಗೆ ಹೊರಬಂದದ್ದು, ನಾಚಿ, ಪುನಃ ಒಳಸೇರಿತು. "ಹೌದು ಅದೇ ಫ್ಲ್ಯಾಟಿನಲ್ಲಿ", ಶಬ್ದಗಳನ್ನು ಕಷ್ಟಪಟ್ಟು ಬಾಯಿಂದ ಹೊರದಬ್ಬಿದೆ. ಒಣಗಿದ ತುಟಿಗಳ ಮೇಲೆ ನಾಲಿಗೆಯಿಂದ ಸವರಿಕೊಂಡೆ. ಆದರೂ ತುಟಿ ಒದ್ದೆಯಾಗಲಿಲ್ಲ.

"ಈಗಲೂ, ಅದೇ ರೀತಿ, ಐದೂ ಮಾಳಿಗೆ ಹತ್ತಿಕೊಂಡು ಹೋಗಬೇಕಾ?" ಮತ್ತೆ-ಮತ್ತೆ ಕೆರೆಯುವದರಿಂದ ಅದೇನು ಸಂತೋಷವೋ ನಾಕಾಣೆ. ಚ್ಯೂಯಿಂಗಮ್ ಇಲ್ಲವೇನೋ, ಹಾಗಾಗಿ ಬಾಯಾಡಿಸುವುದಕ್ಕೆ ಏನಾದರೂ ಬೇಕು. ಆ ದಿನಗಳಲ್ಲಿಯೂ ಚ್ಯೂಯಿಂಗಮ್ ತಿನ್ನುತ್ತಿದ್ದಳು. ಪ್ರೀತಿಯಿಂದ ಬಾಯಿ ಮುರುಟಿಸಿದರೂ, ಅದನ್ನೇ ತಿನ್ನುತ್ತಿದ್ದಳೇನೋ ಎಂದು ಅನ್ನಿಸುತ್ತಿತ್ತು. ಮುಖದಲ್ಲಿಯ ಶಿಲುಬೆಯಾಕಾರ, ಆಗ ಇನ್ನಷ್ಟು ಉದ್ದ ಕಾಣಿಸುತ್ತಿತ್ತು. ಬಬಲ್‌ಗಮ್ ತಿಂದರೆ ಮುಖ ಗೋಲಾಕಾರವಾಗುತ್ತದೆ ಎಂದು ನಾನು ಒಂದೆರಡು ಬಾರಿ ತಮಾಷೆಗೆ ಹೇಳಿದ್ದೆ. ಅದನ್ನವಳು ಸೀರಿಯಸ್ಸಾಗಿ ತೆಗೆದು ಕೊಂಡಂತಿತ್ತು.



ನಾನೂ ಪೆಟ್ಟು ಬಿದ್ದ ದನಿಯಲ್ಲಿ ಹೇಳಿದೆ, ''ಹಾಂ, ಮೆಟ್ಟಲು ಹತ್ತದೆ, ಐದನೇ ಮಹಡಿಗೆ ಹೋಗುವುದಾದರೂ ಹೇಗೆ?''

''ಈಗ ಲಿಫ್ಟ್ ಹಾಕಿಸಿರಬಹುದು ಎಂದು ತಿಳಿದುಕೊಂಡಿದ್ದೆ''.

ಬಹಳ ಸಿಟ್ಟು ಬಂತು. ಲಿಫ್ಟ್ ಹೊರಗಿನಿಂದ ಸೇರಿಸುವಂತಹದಲ್ಲವಲ್ಲ. ಅಥವಾ ಮಾಳಿಗೆಯನ್ನು ಒಡೆದು, ಒಳಗೆ ಸೆಟ್ ಮಾಡುವಂತಹದಲ್ಲ. ಹಾಕಿಸುವುದಾದರೆ ಮೊದಲೇ ಹಾಕಿಸುತ್ತಿದ್ದರು. ಅದರಿಂದಾಗಿ ಎಷ್ಟೊಂದು ತೊಂದರೆಗಳಿಂದ ತಪ್ಪಿಸಿ ಕೊಳ್ಳಬಹುದಿತ್ತು. ಮತ್ತೇನಲ್ಲದಿದ್ದರೂ, ಆ ಒಂದು ದಿನ ನಡೆದದ್ದರಿಂದಲಾದರೂ ಬಚಾವಾಗಬಹುದಿತ್ತು.

ಸ್ಮಾರ್ಟಾಗಿ ಉತ್ತರಿಸಿದೆ, ''ಈ ಬಿಲ್ಡಿಂಗ್ ಬಿದ್ದು ಹೋಗುವವರೆಗಂತೂ ಲಿಫ್ಟನ ಬಗ್ಗೆ ಯೋಚಿಸುವಂತಿಲ್ಲ''. ಈ ವಿಷಯದಲ್ಲಿ ಅವಳು ಇನ್ನೂ ಹೆಚ್ಚಿನದೇನನ್ನೂ ಕೇಳಲಿಕ್ಕಿಲ್ಲ ವೆಂದೆಣಿಸಿದೆ. ಆದರೆ ಕೇಳಿಯೇಬಿಟ್ಟಳು, ''ನೀವು ಆ ಮನೆಯನ್ನೇಕೆ ಬದಲಾಯಿಸಲಿಲ್ಲ?''

ಬೆನ್ನಲ್ಲಿ ತುರಿಕೆ ಆರಂಭವಾಗಿತ್ತು. ಅವಳೆದುರು ತುರಿಸಿಕೊಳ್ಳುವುದಕ್ಕೆ ನಾಚಿಕೆಯಾಗಿ ಸೊಂಟವನ್ನು, ಭುಜವನ್ನು ಬಿಗಿಯಾಗಿ ಜಗ್ಗಿಕೊಳ್ಳುತ್ತಾ, ಹೇಗೋ ಸುಧಾರಿಸಿಕೊಂಡೆ.

''ಅಂತಹ ಅನಿವಾರ್ಯ ಅನಿಸಲಿಲ್ಲ. ಒಬ್ಬನೇ ಇರುವುದಕ್ಕೆ ಆ ಪ್ಲೇಸು, ಅಷ್ಟೇನೂ ಕೆಟ್ಟದ್ದಲ್ಲ''. ಹಿಂದಕ್ಕೆ ಹೋಗುತ್ತಿದ್ದ ಕೈಯನ್ನು ಬಲವಂತವಾಗಿ ಕೆಳಗಿಳಿಸಿದೆ.

ನಾನು ಈ ಮಾತನ್ನು ಬೇಕೆಂತಲೇ ಹೇಳಿರಬಹುದೆಂದು ಅವಳಿಗೆ ಸ್ವಲ್ಪ ಮುಜುಗರವಾಯ್ತು. ದುಂಡಗಿನ ಕೆನ್ನೆಯ ಮೇಲೆ ಬಾಗಿ ಬಿದ್ದ ರೆಪ್ಪೆಗಳು ಬಲು ಅಂದವಾಗಿ ಕಂಡವು. ಮೊದಲವಳ ಕಣ್ಣರೆಪ್ಪೆಗಳು ಹೀಗೆ ಬಾಗುತ್ತಿರಲಿಲ್ಲ. ಕೈಯಲ್ಲಿದ್ದ ಪ್ಯಾಕೆಟ್‌ಗಳನ್ನು ಎಣಿಸುತ್ತಾ ಕೇಳಿದಳು, ''ಇನ್ನೂ ಮದುವೆ ಮಾಡಿಕೊಳ್ಳಲಿಲ್ಲವಾ?'' ಅವಳ ಧ್ವನಿ ಕೇಳಿ, ಅತೀತದಲ್ಲಿ ಬಹುದೂರ ಸಾಗಿದಂತೆ ಅನಿಸಿತು. ಪ್ರಶ್ನೆಯಲ್ಲಿ ಆತ್ಮೀಯತೆಯ ಲವಲೇಶವಿರಲಿಲ್ಲ. ಕಾಳಜಿಯಾಗಲಿ, ಸಹಾನುಭೂತಿಯಾಗಲಿ ಒಂದಂಶವೂ ಇರಲಿಲ್ಲ. ಕುತೂಹಲವೂ ಕಾಣಲಿಲ್ಲ. ಲೋಕಾಭಿರಾಮವಾಗಿ ಯಾರೋ 'ಏನು, ಇನ್ನೂ ಹಲ್ಲು ಉಜ್ಜಿ ಆಗಿಲ್ಲವಾ?' ಎಂದು ಕೇಳಿದಂತಿತ್ತು.

ನನ್ನ ಒಂಟಿತನದ ಬಗ್ಗೆ ಯಾಕಾದರೂ ಪ್ರಸ್ತಾಪಿಸಿದೆನೊ? ಮನಸ್ಸು ಕುಗ್ಗಿಹೋಯಿತು. ಸಮಯ ಸವೆದು ಹೋದುದಕ್ಕೆ ಯಾಕೆ ಯೋಚಿಸಲಿಲ್ಲ? ಈಗವಳು ಏನು ತಿಳಿಯಬಹುದು? ಅದೇ ಕಾರಣಕ್ಕಾಗಿ ಅಥವಾ ಆ ಫ್ಲ್ಯಾಟನಿಂದಾಗಿ...

ಅದಕ್ಕೀಗ ಸುಮ್ಮನಿರುವಂತಿಲ್ಲ. ಹಾಳಾಗಿ ಹೋಗಲಿ ಎಂದು ಹೇಳಿಯೇ ಬಿಟ್ಟೆ, ''ಮಾಡಿಕೊಳ್ಳುವದಾದರೆ ಆಗಲೇ ಮಾಡಿಕೊಳ್ಳುತ್ತಿದ್ದೆ''

ಆಗವಳ ನೋಟದಲ್ಲಿ, ಎಷ್ಟೊಂದು ಅರ್ಥಗಳ ಸಾಧ್ಯತೆಯಿತ್ತು. ಉದಾ-ನೀನು ಸುಳ್ಳು ಹೇಳ್ತಾ ಇದ್ದೀಯಾ.. ನಿನ್ನ ಜೊತೆ ಯಾರೂ ಮದುವೆ ಮಾಡಿಕೊಳ್ಳಲಿಲ್ಲವಾ? ನಾನೂ ನೋಡ್ತೇನೆ, ನೀನು ಯಾರನ್ನು ಮದುವೆಯಾಗ್ತಿಯಾ ಅಂತ... ನಿಜ ಹೇಳಬೇಕು ಅಂದರೆ, ನಿಮ್ಮ ಬಿಲ್ಡಿಂಗ್‌ಗೆ ಒಂದು ಲಿಫ್ಟ್ ಇದ್ದಿದ್ದರೆ-

''ಇನ್ನೂ ಕಾಲ ಮಿಂಚಿಲ್ಲ. ಈಗ ಅಷ್ಟೇನ್ ಮಹಾ ವಯಸ್ಸಾಗಿದೆ'' ಹೀಗೆನ್ನುತ್ತಾ ತನ್ನ ಪ್ಯಾಕೆಟ್‌ಗಳನ್ನೆಲ್ಲಾ ಒಂದುಗೂಡಿಸತೊಡಗಿದಳು. ಅಕ್ಕ ಬಂದದ್ದರಿಂದ ಮಾತು ಮುಂದುವರಿಯಲಿಲ್ಲ. ಈ ಮಧ್ಯೆ ಅವಳಲ್ಲಿ ಕಾಣೆಯಾಗಿದ್ದಳೊ? ಇವಳೊಂದಿಗೆ ಹರಟುತ್ತಿರುವಾಗ ಅವಳ ಇರವೇ ಮರೆತುಹೋಗಿತ್ತು. ದೂರದಿಂದಲೇ, ''ಎಲ್ಲೂ ಸಿಗಲಿಲ್ಲ'' ಎಂದು ಕೈ ಚೆಲ್ಲಿದವರಂತೆ ಹೇಳಿದಳು.

ಅಚ್ಚರಿಯಿಂದ ನಾನವಳ ಕಡೆಗೆ ನೋಡಿದೆ. ''ಪೇಟೆಯಲ್ಲೆಲ್ಲೂ ಸಿಗಲಿಲ್ಲ'' ಎನ್ನುತ್ತ ಮುಖ ಸಿಂಡರಿಸಿಬಿಟ್ಟಳು.

''ಏನಪ್ಪಾ ಅದು?''

''ಶೇಂಗಾ ಬೀಜ, ಹುರಿಗಡ್ಲೆ, ಮೊದಲೇ ಗೊತ್ತಿದ್ದರೆ ಮರೀನ್ ಡ್ರ್ರಾಯಿವ್‌ನಿಂದ ತರುತ್ತಿದ್ದೆ.''

''ಈಗ ಅಲ್ಲಿಗೆ ಹೋಗೋಣವಾ?''

ನನ್ನ ಈ ಪ್ರಶ್ನೆಗೆ ಅವಳೊಮ್ಮೆ ತಂಗಿಯ ಕಡೆಗೆ ನೋಡಿದಳು. ತಂಗಿಯ ಒಪ್ಪಿಗೆಯಿದ್ದಂತೆ ಕಾಣಲಿಲ್ಲ. ''ಇಷ್ಟೊಂದು ಸಾಮಾನು ಹೊತ್ತುಕೊಂಡು ಎಲ್ಲೆಲ್ಲಿಗೆ ತಿರುಗಾಡೋದು?''

ಅಕ್ಕನ ಉತ್ತರ ಸಿದ್ಧವಾಗಿತ್ತು, ''ಸಾಮಾನು ಶೇರ್ ಮಾಡಿಕೊಂಡರಾಯ್ತು. ಸ್ವಲ್ಪ ಅವಿನಾಶನಿಗೆ ಕೊಡು. ಸ್ವಲ್ಪ ನನ್ನ ಕೈಗೆ ಜಾರಿಸು'', ನಿಂತಲ್ಲೇ ವಿಲೇವಾರಿ ಮಾಡಿಬಿಟ್ಟಳು.

''ವಾಪಸ್ಸಾಗೋದಕ್ಕೆ ಲೇಟಾಗಬಹುದು. ಎಷ್ಟೆಂದರೂ ರಿಲೇಟಿವ್ಸ್ ಬೇರೆ. ಅವರೇನು ತಿಳಕೊಳ್ಳಬಹುದು?'', ತಂಗಿ ಅಲ್ಲೇ ಕ್ಯಾತೆ ತೆಗೆದಳು.

''ತಿಳಿದುಕೊಂಡರೆ ತಿಳಿದುಕೊಳ್ಳುತ್ತಾರೆ. ಈ ಒಂದು ಸಂಜೆ ಮಾತ್ರ ನಮ್ಮ ಹತ್ತಿರ ಇರೋದು. ನಾಳೆ ಹೋಗಬೇಕು.'' ತಂಗಿಯ ಕೈಯಲ್ಲಿರುವ ಪ್ಯಾಕೆಟ್‌ಗಳನ್ನೆಲ್ಲಾ ತೆಗೆದು ಹಂಚಲಾರಂಭಿಸಿದಳು.

ಫುಟ್‌ಪಾಥ್. ಪೆಡೆಸ್ಟ್ರಿಯನ್ ಕ್ರಾಸಿಂಗ್. ಡೋಂಟ್ ಕ್ರಾಸ್. ಕ್ರಾಸ್ ನೌ.

ಪ್ಯಾಕೆಟ್ ಹಿಡಿದುಕೊಂಡು ಹುಡುಗಿಯರ ಹಿಂದೆ ಮುಂದೆ ನಡೆಯುವುದು. (ಆ ದಿನಗಳ ನೆನಪಿಗಾಗಿ 'ಹುಡುಗಿಯರು' ಎಂಬ ಪದ ಪ್ರಯೋಗ) ಅವರಿಬ್ಬರ ಹಿಂದೆ ಅಥವಾ ಮುಂದೆ ಇರುವದು. ಮಧ್ಯೆ ಇಬ್ಬರಲ್ಲೂ ಹರಟುವದು. ನಗುವದು. ''ಅಕ್ಕಾ, ನೀನಂತು ಆಗಬಹುದು ಮಹಾರಾಯತಿ'', ಪ್ರಮೀಳಾನ ಮಾತಿಗೆ ಅಕ್ಕ ಸರಿಯಾಗಿ ಬಾಯ್ಬಿಟ್ಟು, '' ಈ ಸಂಜೆ ಎಷ್ಟು ಚೆನ್ನಾಗಿದೆ'' ಎನ್ನುತ್ತಾ ಕಣ್ಣುಗಳಿಂದಲೇ ನನ್ನ ಕಾಂಪ್ಲಿಮೆಂಟ್ಸ್ ಬಯಸೋದು. ಸುಮ್ಮನೆ ನಗೋದು, ಮಾತನ್ನಾಡುತ್ತಿರುವಾಗ ಸುಮ್ಮನಾಗುವದು, ಸುಮ್ಮನಿದ್ದಾಗ ಮಾತಾಡೋದು. ನಗುವ ಸಂದರ್ಭದಲ್ಲಿ ಗಂಭೀರ. ಗಂಭೀರ ಸನ್ನಿವೇಶಗಳಲ್ಲಿ ನಕ್ಕು ಬಿಡುವದು. ಎದುರಿಂದ ಬರುತ್ತಿರುವ ಅಲ್ಪ-ಸ್ವಲ್ಪ ಪರಿಚಿತರು ಪ್ರಶ್ನಾರ್ಥಕವಾಗಿ ನಮ್ಮನ್ನು ನೋಡುವದು. ಯಾರಿಗೋ ಲ್ಯಾನ್ ಹೊಡೆಯೋದು. ಯಾರನ್ನೋ ಹಿಡಿದು ನಿಲ್ಲಿಸಿ ''ಗಮ್ಮತ್ತಪ್ಪ ಗಮ್ಮತ್ತು'' ಎನ್ನುವುದು.

ಛೆ! ನನಗಂತೂ ಒಂದು ಥರವಾಯ್ತು. ಶತಶತ ಮಾನಗಳಿಂದ ಆ ಪ್ಯಾಕೆಟ್‌ಗಳನ್ನು ಹೊತ್ತುಕೊಂಡಿದ್ದೀನೇನೊ... ಶತ-ಶತಮಾನಗಳಿಂದ ಅದೇ ಫುಟ್‌ಪಾಥ್ ನನ್ನ ಕಾಲ ಕೆಳಗಡೆ ಇದೆಯೇನೊ, ಅದೇ ಪೆಡೆಸ್ಟ್ರಿಯಲ್ ಕ್ರಾಸಿಂಗ್ ಎದುರುಗಡೆ ಇದೆಯೇನೊ, ಡೋಂಟ್ ಕ್ರಾಸ್. ಕ್ರಾಸ್ ನೌ.. ಶತಮಾನಗಳಿಂದ ತಂಗಿ ಹೇಳ್ತಾ ಇದ್ದಾಳೇನೊ, ''ಅಕ್ಕ ನೀನಂತು ಆಗಬಹುದು ಮಹಾರಾಯ್ತಿ'', ಪಕ್ಕದಲ್ಲಿ ಯಾರೋ ಹೇಳ್ತಾ ಇದ್ದಾರೆ, ''ಗಮ್ಮತಪ್ಪ ಗಮ್ಮತ್ತು.''

ಅಂತೂ ಒಬ್ಬ ಕಡ್ಲೆಕಾಯಿ ಮಾರುವವ ಇರೋಸ್‌ನ ಹತ್ತಿರ ಕಂಡದ್ದೆ ತಡ, ಸರಳಾ ಫೆನ್ಸ್‌ನ ಕೆಳಗಡೆಯಿಂದ ನುಸುಳಿ ಅವನೆಡೆಗೆ ಓಡಿದಳು. ಸ್ವಲ್ಪ ತಡವಾದರೆ ಅವನೆಲ್ಲಿ ಓಡಿಬಿಡ್ತಾನೇನೋ ಎನ್ನುವಂತೆ ಗಡಬಡಿಸಿದಳು. ಒಂದಿಬ್ಬರು ಕಾರಿನವರಿಗೆ ಬ್ರೇಕ್ ಹಾಕಬೇಕಾಯ್ತು. ಒಬ್ಬನಂತೂ ದುರುಗಟ್ಟಿ ನನ್ನ ಕಡೆ ನೋಡಿದ. ನಾನಂತೂ ಉಸಿರು ಬಿಗಿ ಹಿಡಿದು ಮೂಗಿನ ನೇರಕ್ಕೆ ಹೋಗುತ್ತಿದ್ದೆ. ದಾರಿಯಲ್ಲಿ ಪ್ರಮೀಳಾ ಕೇಳಿದಳು, ''ಯಾಕೆ ಸುಮ್ಮನಿದ್ದೀಯಾ?

''ಸುಮ್ಮನಾ! ಇಲ್ಲವಲ್ಲ'' ಎನ್ನುತ್ತಾ ಮೆದುವಾಗಿ ಸಿಳ್ಳೆ ಹಾಕಲಾರಂಭಿಸಿದೆ.

''ನಾವು ನಿಮಗೆ ಬೋರ್ ಮಾಡಲಿಲ್ಲ ತಾನೆ?'' ಅವಳು ಹಾಗೆ ತಿಳಿದುಕೊಳ್ಳುವಂತೆ ಯಾಕೆ ಮಾಡಿದೆ, ಯಾಕೆ ಏನನ್ನಾದರೂ ಮಾತಾಡಲಿಲ್ಲ, ಅಂತ ನನ್ನ ಮೇಲೆ ನನಗೆ ಸಿಟ್ಟು ಬಂತು. ಅವರಿಬ್ಬರನ್ನು ಎಲ್ಲಿಗಾದರೂ ಕರೆದುಕೊಂಡು ಹೋಗಿ ಚಾ ಕುಡಿಸಬೇಕಂತ ಎಷ್ಟೋ ಬಾರಿ ಯೋಚನೆ ಮಾಡಿದೆ. ಆದರೆ ಹಣ



ಸಾಕಾಗುತ್ತೊ ಇಲ್ಲವೋ ಅಂತ ಹೆದರಿಕೆಯಾಯ್ತು. ಮೊದಲೇ ಗೊತ್ತಿದ್ದರೆ ಯಾರ ಹತ್ತಿರನಾದ್ರೂ ಸಾಲ ಕೇಳ್ತಿದ್ದೆ. ಅಥವಾ ಒಂದನೇ ತಾರೀಖಿನಿಂದಲೇ ಬೇರೆ ತೆಗೆದಿಡುತ್ತಿದ್ದೆ. ಯಾವಾಗಲೂ ಹೀಗೆ, ಬೇಕು ಎನ್ನುವಾಗ ಕೈಯಲ್ಲಿ ಹಣವಿರೋದಿಲ್ಲ.

ಆ ದಿನವೂ ಹಾಗೇ ಆಗಿತ್ತು. ಆ ದಿನ, ಇಸ್ಪೀಟಿನಲ್ಲಿ ಹಣ ಕಳ್‌ಕೊಳ್ಳದೆ ಇದ್ದಿದ್ದರೆ...

ಸರಳಾ, ನೆಲಗಡಲೆ ತೊಗೊಂಡು ಪರ್ಸಿನಲ್ಲಿ ತುಂಬಿಸಿಕೊಂಡಿದ್ದಳು. ಈಗ ಒಂದೊಂದೆ ಕಾಳು ತೆಗೆದು ಬಾಯಿಗೆ ಎಸೆಯುತ್ತಿದ್ದಳು. ನಾವು ರನ್ನರ್ಸ್-ಅಪ್ ಆಗಿದ್ದೇವೆ ಎನ್ನುವಂತೆ ಕೆಲವೊಮ್ಮೆ ನಮ್ಮ ಕಡೆಗೆ ನೋಡುತ್ತಿದ್ದಳು. ನಾವು ಅವಳ ಹತ್ತಿರ ಹೋಗುತ್ತಿದ್ದಂತೆ, ಅವಳು ಇನ್ನೊಂದು ರಸ್ತೆಯನ್ನು ದಾಟಿದಳು. ಎಲಿತಾಲಿಯಾದ ಹೊರಗಡೆ ನಿಂತು, ಹುರಿಗಡಲೆ ಜಗಿತಾ ಇದ್ದಳು. ನಾವು ಅಲ್ಲಿಗೆ ತಲುಪುವುದರೊಳಗೆ ಅವಳು ಚರ್ಚ್‌ಗೇಟಿನ ಹೊರಗೆ ಹೋಗಿ ಬಿಟ್ಟಿದ್ದಳು.

ಪ್ಯಾಕೆಟ್ಟಿನ ಹೊರೆಯಿಂದಾಗಿ ಬಹುಶಃ ಪ್ರಮೀಳಾ ಸೀರಿಯಸ್ ಆಗಿಬಿಟ್ಟಿದ್ದಳು. ಬೆಳ್ಳಗಿನ ಮಾಂಸದ ತೋಳುಗಳು ಕೆಂಪಗಾಗಿದ್ದವು. ನಿದ್ದೆ ತುಂಬಿಕೊಂಡಿದ್ದಂತೆ ರೆಪ್ಪೆಗಳು ಭಾರವಾಗಿದ್ದವು. ಸರಳಾನ ಹತ್ತಿರ ಹೋಗಿ, "ಈಗ ಎಲ್ಲಿಗೆ ಹೋಗಬೇಕು?" ಎಂದು ಕೇಳಿದಳು. ಅವಳ ಧಾಟಿ ಹೇಗಿತ್ತೆಂದರೆ, "ಸುಮ್ಮ ಸುಮ್ಮನೆ ನನ್ನನ್ನು ಎಲ್ಲಿ ಎಳಕೊಂಡು ಹೋಗ್ತಾ ಇದ್ದೀಯಾ?"

"ಬ್ಯಾಕ್ ಹೋಮ್", ಸರಳಾ ತಟ್ಟನೆ ಉತ್ತರಿಸಿದಳು. ಅದಕ್ಕಿಂತ ಹೆಚ್ಚು ಕೇಳುವುದಕ್ಕಾಗಲಿ, ಹೇಳುವುದಕ್ಕಾಗಲಿ ಅಲ್ಲಿ ಅವಕಾಶವೇ ಇರಲಿಲ್ಲ. ಕೇವಲ ನೆಲಗಡಲೆ ಖರೀದಿಗಾಗಿ ಇಷ್ಟು ಹೊತ್ತಿನವರೆಗೆ ನನ್ನ ಕೈಯಲ್ಲಿ ಪ್ಯಾಕೆಟ್ ಹೊರಿಸಿದ್ದರು.

"ಪ್ಯಾಕೆಟ್ ತೆಗೆದುಕೊಳ್ಳೋದಾ?", ಕೇಳುತ್ತಾ ಒಮ್ಮೆ ತೀಕ್ಷ್ಣವಾಗಿ ಅಕ್ಕನನ್ನು ನೋಡಿದಳು. ಅವಳು ಅಲ್ಲೇ ಕಣ್ಣು ಮಿಟುಕಿಸಿ ಹೇಳಿದಳು, "ಪಾಪ ಅವನಿಗೆ ಇನ್ನೆಷ್ಟು ಹೊತ್ತು ಸುಸ್ತು ಮಾಡ್ತಿಯಾ?"

ಒಂದೆರಡು ಪ್ಯಾಕೆಟ್‌ಗಳನ್ನು ಕೆಳಗೆ ಬೀಳಿಸಬೇಕು, ಅಕ್ಕ ಬಗ್ಗಿ, ಅವುಗಳನ್ನೆತ್ತಬೇಕು, ಎಂಬ ಮನಸ್ಸಾಯಿತು. ಪ್ಯಾಕೆಟ್ ತೆಗೆದುಕೊಳ್ಳುವಾಗ ಪ್ರಮೀಳಾನ ತೋಳು ತಾಗಿತು. ಗಿಡ್ಡ ಕೈತೋಳಿನ ರವಿಕೆ ಹಾಕಿದ್ದಳು. ಇಲ್ಲವಾದರೆ ರೋಮಾಂಚನವಾಗುತ್ತಿರಲಿಲ್ಲ. ಬಲು ಜಾಗ್ರತೆಯಿಂದ ಪ್ಯಾಕೆಟ್‌ಗಳನ್ನು ಕೊಡುವ ಪ್ರಯತ್ನ ಮಾಡಿದೆ. ಒಂದೊಂದಾಗಿ ಕೊಡುವುದಕ್ಕೆ ಬಹಳ ಟೈ ತೆಗೆದುಕೊಂಡೆ. ಇನ್ನೊಮ್ಮೆ ಅವಳ ತೋಳಿಗೆ ಕೈ ತಾಗಲಿ ಎಂಬ ಆಸೆಯಿತ್ತು. ಆದರ ತಾಗಲಿಲ್ಲ. ಕೊನೆಯ ಪ್ಯಾಕೆಟ್ ನಿಜಕ್ಕೂ ಕೆಳಗೆ ಬಿದ್ದು ಹೋಯ್ತು. ಪ್ರಮೀಳಾ ಕಣ್ಣು ಮುಚ್ಚಿಕೊಂಡಳು.

ಎಂಥ ನಾಜೂಕಾದ ವಸ್ತು ಅದರಲ್ಲಿತ್ತೋ ಏನೊ!

ಬಿದ್ದ ಪ್ಯಾಕೆಟನ್ನು ನಾನೇ ಎತ್ತಬೇಕಾಯ್ತು. ಏನಾದರೂ ಒಡೆದಿದೆಯೋ ಎಂದು ತಡಕಾಡಿದೆ. ಒಡೆಯುವಂತಹದೇನೂ ಕೈಗೆ ತಾಗಲಿಲ್ಲ. ಅದರಲ್ಲಿ ಬರೇ ಬಟ್ಟೆಯಿತ್ತು. ಪ್ಯಾಕೆಟ್ ಕೊಡುತ್ತ ಹೇಳಿದೆ, ''ಆಯ್ ಲ್ಯಮ್ ಸಾರಿ''. ಈ ಬಾರಿಯಾದರೂ ನನ್ನ ಕೈ ಅವಳ ತೋಳಿಗೆ ತಗಲಬಹುದೆಂದೆಣಿಸಿದೆ

ಹಾಗಾಗಲಿಲ್ಲ. ಪ್ಯಾಕೆಟ್ ಹಿಡಿದು ಅದರ ಮೇಲಿಂದ ಧೂಳು ಝಾಡಿಸಲಾರಂಭಿಸಿದಳು.

''ಏನೂ ಒಡೆಯಲಿಲ್ಲ ತಾನೆ?''

'ಒಡೆದಿದ್ದರೂ ಬಾಯಿಬಿಟ್ಟು ಹೇಗೆ ಹೇಳುವದು' ಎಂಬಂತೆ ಅವಳು ತಲೆ ಅಲ್ಲಾಡಿಸುತ್ತಾ, ಅವುಗಳನ್ನೆಲ್ಲಾ ಮಗುವಿನಂತೆ ಎದೆಗವಚಿಕೊಂಡಳು. ನಾನೂ, ನನ್ನೆರಡು ಬೆರಳುಗಳಿಂದ ಅದನ್ನು ಮಗುವಿನಂತೆ ನೇವರಿಸುತ್ತ ತೊದಲು ನುಡಿಯಲ್ಲಿ, ''ಬಬ್ಲೂ ಪೆತ್ತಾಯ್ತಾ?' ಎಂದು ಕೇಳಬೇಕೆನಿಸಿತು.

''ಹೋಗೋಣವಾ?'', ಪ್ರಮೀಳಾ ಅಕ್ಕನ ಕಡೆಗೆ ನೋಡಿದಳು. ಅಕ್ಕ ಕೈ ಗಡಿಯಾರದ ಕಡೆಗೆ ನೋಡಿದಳು. ಮತ್ತೆ ರೈಲ್ವೆ ಸ್ಟೇಷನ್ನಿನ ಗಡಿಯಾರದ ಕಡೆಗೆ ನೋಡಿದಳು. ಹಾಗೆಯೆ ಮರೀನ್ ಡ್ರಾಯಿವ್ ಕಡೆಯಿಂದ ಬರುವ ಗಾಡಿಗಳ ಕಡೆಗೆ ದೃಷ್ಟಿ ಹಾಯಿಸಿದಳು. ನಿಟ್ಟುಸಿರು ಬಿಟ್ಟು, ''ಬಾ ಬಾ ಹೋಗೋಣ'' ಎಂದಳು. ಮೊದಲು ಯಾರು ಹೋಗುವದು ಎಂಬ ಹೊಯ್ದಾಟದಲ್ಲಿ, ಕೆಲ ಹೊತ್ತು ಹಾಗೆಯೆ ಕಳೆಯಿತು. ಅವರು ಮೌನವಾಗಿ ನನ್ನನ್ನು, ನಾನು ಅವರನ್ನು ನೋಡುತ್ತಾ ಕಳೆದೆವು. ಅಷ್ಟರಲ್ಲಿ ಅಕ್ಕ ''ಅಯ್ಯೋ ಫಾಸ್ಟ್‌ಟ್ರೇನ್ ಹೋಗ್ತಾ ಇದೆ'' ಎನ್ನುತ್ತಾ ಒಳಗಡೆ ಓಡತೊಡಗಿದಳು.

ಚಿಕ್ಕವಳು ಹಿಂಬಾಲಿಸುತ್ತ ಒಮ್ಮೆ ನೋಡಿದಳು. ಕಣ್ಣುಗಳನ್ನು ಅಲ್ಲಾಡಿಸಿದಳು. ಕೈಗಳನ್ನು ಜೋಡಿಸುವಂತೆ ಮಾಡಿದಳು. ಏನನ್ನೋ ಹೇಳುವಂತೆ ತುಟಿ ಅಲ್ಲಾಡಿಸಿದಳು. ಅವಳನ್ನೆಳೆಯುವ ಬ್ಯಾಟರಿ, ಅಕ್ಕನ ಕಾಲಿಗೆ ಜೋಡಿಸಿಕೊಂಡಿದ್ದಂತೆ, ಕಾಲೆಳೆಯುತ್ತ ಅವಳ ಹಿಂದೆ ಹೋದಳು.

ಸ್ವಲ್ಪ ಹೊತ್ತು ಅಲ್ಲೇ ನಿಂತುಕೊಂಡೆ. ಗಾಡಿ ಹೊರಟಿದ್ದನ್ನು ನೋಡಿದೆ. ಮತ್ತೆ ನನ್ನ ಖಾಲಿ ಕೈಗಳನ್ನು, ತೋಳುಗಳನ್ನು ನೇವರಿಸಿಕೊಳ್ಳುತ್ತ ಬಸ್‌ಸ್ಟಾಪಿಗೆ ಬಂದೆ. ಮೊದಲನೆಯ ಬಸ್ ಬಿಟ್ಟೆ. ಎರಡನೆಯ ಬಸ್ ಬಿಟ್ಟೆ, ಮೂರನೆಯದನ್ನು ಬಿಡಲಿಲ್ಲ. ಸ್ಟಾಪಿನಲ್ಲಿ ನಾನೊಬ್ಬನೆ ಉಳಿದಿದ್ದೆ. ಯೋಚನೆ ಮಾಡ್ತಾ ನಿಂತಿದ್ದೆ. ಕಂಡಕ್ಟರನಿಗೆ ಸಿಟ್ಟು ಬಂತು. ಫುಟ್‌ಬೋರ್ಡಿನ ಮೇಲೆ ಕಾಲಿಟ್ಟ ತಕ್ಷಣ ಬೈದು ಬಿಟ್ಟ, ''ಹೋಗೋ ಮನಸ್ಸಿಲ್ಲದಿದ್ದರೆ ಇಲ್ಲೇ ನಿಂತುಕೊಳ್ಳಿ. ಚಂದ-ಚಂದದ ಮುಖ ನೋಡಲಿಕ್ಕೆ ಸಿಕ್ತಾವೆ''. ಅವನ ಮಾತು ನನ್ನ ಮೇಲೆ ಯಾವುದೇ ಪರಿಣಾಮ ಬೀರದ್ದನ್ನು ಕಂಡು, ಸಿಟ್ಟಿನಿಂದ, ಟಿಕೆಟ್ ಕೊಡದೆ ಮುಂದಕ್ಕೆ ಹೋದ. ನಾನೇನಾದರೂ ಪ್ರತಿಕ್ರಿಯಿಸಬಹುದೆಂದು ಅಲ್ಲಿಂದಲೇ ತಿರುತಿರುಗಿ ನನ್ನತ್ತ ನೋಡುತ್ತಿದ್ದ.

ಒಬ್ಬ ಹುಡುಗಿಯ ಹತ್ತಿರ ಸೀಟು ಖಾಲಿಯಿತ್ತು. ಅಲ್ಲಿ ಹೋಗಿ ಕುಳಿತುಕೊಳ್ಳುವ ಮನಸ್ಸಾದರೂ, ನಿಂತುಕೊಂಡೇ ಅವಳನ್ನು ನೋಡತೊಡಗಿದೆ. ಹುಡುಗಿ ಪರವಾಗಿರಲಿಲ್ಲ, ಸ್ಮಾರ್ಟ್ ಆಗಿದ್ದಳು. ತೋಳುಗಳು ಸ್ವಲ್ಪ ಸಪೂರ. ಸ್ಲೀವ್‌ಲೆಸ್ ಹಾಕಿದ್ದರಿಂದ ಹಾಗೆ ಕಾಣುತ್ತಿದ್ದಳೇನೋ. ಲೋ ಕಟ್, ಸ್ಲೀವ್‌ಲೆಸ್. ಆ ದಿನಗಳಲ್ಲಿ ಪ್ರಮೀಳಾ ಕೂಡ ಹೀಗೆಯೆ ಬಟ್ಟೆ ಹಾಕ್ತಿದ್ದಳು. ಲೋ ಕಟ್, ಸ್ಲೀವ್‌ಲೆಸ್. ಅವಳ ತೋಳು, ಹೇಳಿಕೊಳ್ಳುವಷ್ಟು ಸಪೂರ ಇರಲಿಲ್ಲ. ರೋಮವೂ ಅಷ್ಟಾಗಿರಲಿಲ್ಲ. ಹಿಸುಕಬೇಕು ಎಂದೆನಿಸುತ್ತಿತ್ತು. ಅದನ್ನೊಮ್ಮೆ ಅವಳಿಗೆ ಹೇಳಿಯೂಬಿಟ್ಟೆ. ತುಟಿ ಕಚ್ಚಿಕೊಂಡು ಸುಮ್ಮನಾಗಿಬಿಟ್ಟಳು.

ಕಂಡಕ್ಟರ್‌ಗೆ ತಡೆಯಲಿಕ್ಕಾಗಲಿಲ್ಲ. ಟಿಕೆಟ್ ಕೊಡೋದಕ್ಕೆ ತಾನೇ ಬಂದ. ನಾನವನ ಹತ್ತಿರ



ಕ್ಷಮೆ ಕೇಳಬಹುದು, ಕನಿಷ್ಠ ಪಕ್ಷ ಮುಗುಳು ನಗಬಹುದೆಂದು ಅವನೆಣಿಸಿದ್ದ. ಆದರೆ ನಾನು ಮುಖಗಂಟು ಹಾಕಿಕೊಂಡೇ ಇದ್ದೆ, ತುಟಿಗಳಲ್ಲಿ ತೇವಾಂಶವೇ ಇದ್ದಿರಲಿಲ್ಲ. ತನ್ನ ಸಿಟ್ಟನ್ನು ಟಿಕೆಟ್ ಮೇಲೆ ತೆಗೆದ. ಟಿಕೆಟ್ ಪಂಚ್ ಮಾಡುವಾಗ ಅವನ ಮುಖದ ಆಕಾರವೇ ಬದಲಾಗಿಬಿಟ್ಟಿತ್ತು.

ಮನೆಗಿಂತ ಒಂದು ಸ್ಟಾಪ್ ಹಿಂದೆ, ಮೆಟ್ರೋದಲ್ಲೆ ಇಳಿದೆ. ರಾತ್ರಿಯ ಶೋಗೆ ಟಿಕೆಟ್ ತೆಗೆದರಾಯ್ತೆಂದು ಅಲ್ಲಿಗೆ ಹೋದೆ. ಟಿಕೆಟ್ ಇತ್ತು. ಆದರೆ ಮೂರು ಐವತ್ತರದು, ಒಂದು ಎಪ್ಪತ್ತೈದರದು. ಹೊರಗಡೆ ಸೋಲ್ಡ್ಔಟ್ ಬೋರ್ಡ್ ಇತ್ತು. ಮೂರು ಐವತ್ತನ್ನು ಹೊರತೆಗೆದು ಎಣಿಸಿ, ಪುನಃ ಕಿಸೆಗೆ ಹಾಕಿಕೊಂಡೆ. ಆ ಕ್ಲಾಸಿಗೆ ಎಂದೂ ಹೋಗಿರಲಿಲ್ಲ ಹಾಗಾಗಿ ಎರಡು ನಿಮಿಷ ಕ್ಯೂನಲ್ಲಿ ನಿಂತು ಹಿಂದಿರುಗಿದೆ.

ಗಾಳಿಯಿತ್ತು ಆದರೆ ಸೆಕೆಯೂ ಇತ್ತು. ಎದುರಿಗೆ ಗಿರಗಾಂವ್ ರೋಡ್ ಇತ್ತು. ಸುಲಭವಾಗಿ ಕ್ರಾಸ್ ಮಾಡಬಹುದಿತ್ತು. ಆದರೆ ಮನೆಗೆ ಹೋಗುವ ಮೂಡ್ ಇರಲಿಲ್ಲ. ಊಟಕ್ಕೆ ಹೋಗಲು ಕೂಡಾ ಮನಸ್ಸಾಗಲಿಲ್ಲ. ಇರಾಣಿಯ ಹತ್ತಿರ ಬೇಡ, ಗುಜರಾಥಿಯ ಹತ್ತಿರ ಬೇಡ, ಮಥುರಾದವನ ಹತ್ತಿರವೂ ಬೇಡ. ಈ ಮೂರು ಹೋಟೆಲ್‌ಗಳಲ್ಲಿ ಬಾರಿ ಬಾರಿಯಾಗಿ ಊಟ ಮಾಡ್ತಿದ್ದೆ. ಒಂದರ ರುಚಿ, ಇನ್ನೊಂದರ ರುಚಿಯನ್ನು ದಬ್ಬಿಬಿಡ್ತಾ ಇತ್ತು. ಹಣ ಕೊಡುವುದಕ್ಕೂ ಅನುಕೂಲ. ಹೊಸ ಹೊಸ ಮುಖಗಳ ದರ್ಶನ. ಕಂಪ್ಲೇಂಟ್ ಕೊಡಬೇಕೆನಿಸಿದರೆ ಮೂವರಲ್ಲೂ ಕೊಡ ಬಹುದಿತ್ತು.

ಈ ಮೂರಕ್ಕೆ ಹೋಗುವ ಮನಸ್ಸಿಲ್ಲದಿದ್ದರೂ, ಬೇರೆ ಎಲ್ಲಿಗಾದರೂ ಹೋಗಿ ಉಟ ಮಾಡುವುದಕ್ಕೂ ಮನಸ್ಸಾಗಲಿಲ್ಲ. ಹಸಿವೆಯಿತ್ತು. ಆದರೆ ಅಲ್ಲಿಗೆ ಹೋಗುವದು, ಕುಳಿತುಕೊಳ್ಳುವದು, ಉಣ್ಣುವದು ಯಾವುದೂ ಬೇಡವಾಗಿತ್ತು. ನನ್ನ ಮೇಲೆ ನನಗೇ ಕೋಪ ಬಂತು. ಬೆಣ್ಣೆ-ಬ್ರೆಡ್ಡನ್ನಾದರೂ ಮನೆಯಲ್ಲಿ ತಂದಿಟ್ಟುಕೊಳ್ಳಬೇಕು ಎಂದು ಎಷ್ಟೋ ಬಾರಿ ಯೋಚಿಸಿದ್ದೆ. ತರಕಾರಿಯನ್ನು ಮನೆಯಲ್ಲೇ ಮಾಡಿಕೊಳ್ಳಬೇಕು. ಕೇವಲ ಯೋಚಿಸು ವುದರಲ್ಲಿಯೇ ಏಳು ವರ್ಷ ಕಳೆದುಹೋಯ್ತು.

ಇನ್ನು ಮನೆಗೆ ಹೋದರಾಯ್ತೆಂದು ಯೋಚಿಸಿದೆ, ಆದರೆ ಹೆಜ್ಜೆ ಏಳಲೇ ಇಲ್ಲ. ಮೆಟ್ಟಲುಗಳ ಮೇಲೆ ಮೆತ್ತಿಕೊಂಡ



ಕತ್ತಲೆಯ ನೆನಪಾಯ್ತು. ಒಂದರ ಮೇಲೊಂದ ರಂತೆ, ಐದು ಮಾಳಿಗೆ. ಮೊದಲನೆಯ ಮಾಳಿಗೆಯಲ್ಲಿ ಇಡೀ ಬಿಲ್ಡಿಂಗ್‌ನ ತೊಟ್ಟಿಯ ಗೊಬ್ಬು ನಾತ. ಎರಡನೆಯ ಮಾಳಿಗೆಯಲ್ಲಿ, ಕೊಳಕು ಕೊಬ್ಬರಿಯ ಕಮಟು. ಮೂರನೆಯ ದರಲ್ಲಿ ಮುಗ್ಗಿದಕ್ಕಿಯ, ಕೊಳೆತ ಹಣ್ಣಿನ ವಾಸನೆ. ನಾಲ್ಕನೆಯದರಲ್ಲಿ ಆಯುರ್ವೇದಿಕ್ ಔಷಧಿ ಯದು. ಐದನೆಯ ಮಾಳಿಗೆಯ ವಾಸನೆಯ ಬಗ್ಗೆ ಸರಿಯಾಗಿ ತಿಳಿದು ಬಂದಿಲ್ಲ. ಅತ್ಯಂತ ಕಟು ವಾಸನೆ ಅದೆಂದು ಪ್ರಮೀಳಾ ಹೇಳುತ್ತಿದ್ದಳು. ಆದರೆ ಸರಳಾ ಅದನ್ನು ಒಪ್ಪಿಕೊಂಡಿರಲಿಲ್ಲ. ಅವಳ ದೃಷ್ಟಿಯಲ್ಲಿ ಅತ್ಯಂತ ಕಟುವಾದದ್ದು ಆಯುರ್ವೇದಿಕ್ ಔಷಧಿಯದು.

ತುಂಬಾ ಹೊತ್ತು ಅಲ್ಲೇ ನಿಂತುಕೊಂಡು, ಎಲ್ಲೆಲ್ಲಿಗೆ ಹೋಗಬಹುದೆಂದು ಯೋಚಿಸಿದೆ. ಎಲ್ಲಿ ಹೋಗುವುದಕ್ಕೂ ಮನಸ್ಸಾಗಲಿಲ್ಲ. ಎಲ್ಲಿ ಹೋದರೂ ಆತ್ಮೀಯತೆಯ ಅಭಾವ ಕಾಡಬಹುದು. ನೋಡಿದ ತಕ್ಷಣ ಪುರಿ ಕೇಳಬಹುದು, ''ಬಾ ಬಾ ಇನ್ನೊಂದು ಹತ್ತು ನಿಮಿಷ ಲೇಟಾಗಿದ್ದರೆ, ನಾವು ಊಟ ಮಾಡಿ, ತಿರುಗಾಡಲಿಕ್ಕೆ ಹೋಗಿ ಬಿಡ್ತಿದ್ದೆವು''. ಭಟನಾಗರ ಕಣ್ಣುಜ್ಜಿಕೊಳ್ತಾ ಹೇಳಬಹುದು, ''ಅರೆ ನೀನಾ ಇಷ್ಟು ಹೊತ್ತಿನಲ್ಲಿ? ಎಲ್ಲಾ ಕ್ಷೇಮ ತಾನೆ?''

ಅಂತೂ ರಸ್ತೆ ದಾಟಿ, ಗಿರ್ಗಾಂವ್‌ನ ಫುಟ್‌ಪಾಥ್‌ಗೆ ಬಂದು ಮುಟ್ಟಿದೆ. ಪ್ರಿನ್ಸೆಸ್ ಸ್ಟ್ರೀಟ್‌ನ ಕ್ರಾಸಿಂಗ್‌ನಲ್ಲಿ ಕೆಲಹೊತ್ತು ನಿಂತುಕೊಂಡೆ. ಕೊನೆಗೆ ಅಲ್ಲಿಂದಲೂ ದಾಟಿ ಬಂದೆ.

ಇರಾನಿ ಹೊಟೆಲಿಗೆ ಹೋಗಿ ಡಬಲ್ ರೋಟಿ-ಬೆಣ್ಣೆ ಖರೀದಿಸಿದೆ. ಜೊತೆಗೊಂದು ಬಿಸ್ಕೆಟ್ ಪ್ಯಾಕ್ ಎತ್ತಿಕೊಂಡೆ. ಸ್ವಲ್ಪ ಮುಂದೆ ಬಂದಾಗ, ಕಿಸೆಯಲ್ಲಿ ಸಿಗರೇಟ್ ಇಲ್ಲದೇ ಇದ್ದುದು ನೆನಪಾಗಿ ಬೀಡಾ ಅಂಗಡಿಗೆ ಹೋಗಿ ಎರಡು ಚಾರ್‌ಮಿನಾರ್ ಪ್ಯಾಕ್ ತೆಗೆದುಕೊಂಡೆ. ಮನೆಯಲ್ಲಿ ನೆಂಟರಿದ್ದಾರೆ, ನಾನು ಹೋಗಿ ಅವರ ಯೋಗಕ್ಷೇಮ ವಿಚಾರಿಸಬೇಕು, ಎನ್ನುವಂತೆ ತರಾತುರಿಯಲ್ಲಿ ಅಲ್ಲಿಂದ ಕಾಲ್ಕಿತ್ತೆ.

ಎಷ್ಟು ಮೆಟ್ಟಲಿವೆಯೆಂಬುದು ಗೊತ್ತಿತ್ತು. ಆದರೂ ಎಣಿಸುತ್ತ ಮೇಲೇರಿದೆ. ಮತ್ತೆ ಮತ್ತೆ ಎಣಿಸುವುದರಿಂದ ಹೆಚ್ಚು ಕಮ್ಮಿಯಾದರೂ ಆಗಬಹುದು. ನೂರಾ ಇಪ್ಪತ್ತು ಇದ್ದುದು, ಹದಿನಾರಕ್ಕೋ ಹದಿನೇಳಕ್ಕೋ ಇಳಿಯ ಬಹುದು. ಇಪ್ಪತ್ನಾಲ್ಕರವರೆಗೆ ಎಣಿಸಿದೆ. ಬೋರಾಯ್ತು. ಎರಡನೆಯ ಮಾಳಿಗೆ ಏರು ತ್ತಿದ್ದಂತೆ ಎಣಿಸುವುದನ್ನು ಬಿಟ್ಟೆ.

ಅಂದು ಇಲ್ಲಿಯವರೆಗೆ ಬಂದಾಗ ಪ್ರಮೀಳಾ ಸುಸ್ತು. ''ಇನ್ನೆಷ್ಟು ಮಾಳಿಗೆ ಹತ್ತ ಬೇಕು?'' ಎಂದು ಕೇಳಿದ್ದಳು. ''ಇನ್ನು ಮೂರು ಬಾಕಿ'', ಅವಳು ಧೈರ್ಯಗುಂದದೆ ಇರಲೆಂದು ಒಂದು ಕಡಿಮೆ ಹೇಳಿದ್ದೆ. ಮೂರನೆ ಮಾಳಿಗೆ ಬರುವವರೆಗೆ ಅವಳು ಮತ್ತೇನನ್ನೂ ಕೇಳ ಬಾರದೆಂದು ನಾನು ಬೇಗ ಬೇಗನೆ ಮೇಲೇರಿದ್ದೆ. ತಿನ್ನುವುದಕ್ಕೆಂದು ಸಾಕಷ್ಟು ಕಟ್ಟಿಸಿಕೊಂಡು ಬಂದಿದ್ದೆ. ಅವುಗಳನ್ನು ಹಿಡಿದುಕೊಳ್ಳುವದು ಕಷ್ಟವಾಗಿತ್ತು. ಬಿಸ್ಕೆಟ್, ಗಟ್ಟಿಬಜೆ, ಮೊಟ್ಟೆ, ಚೂಡಾ. ನಮ್ಮಲ್ಲಿಗೆ ಬಂದು ಚಾ ಕುಡಿಯುವ ಹಂಬಲ ಸರಳಾನದಾಗಿತ್ತು. ''ಈ ರೀತಿಯಲ್ಲಿ ನಿನ್ನ ಫ್ಲ್ಯಾಟ್ ನೋಡಿದ ಹಾಗಾಯ್ತು'' ಎಂದಿದ್ದಳು.

ಆದರ ಪ್ರಮೀಳಾಗೆ ಇಲ್ಲಿಗೆ ಬರುವ ಬದಲು ಪಿಕ್ಚರಿಗೆ ಹೋಗುವ ಮನಸ್ಸಿತ್ತು. 'ಹೆಮ್ಲೆಟ್' ಇದೆಯೆಂದು ಹಿಂದಿನ ದಿನ ನಾನೇ, ಹೇಳಿ ಬಂದಿದ್ದೆ. ಪ್ರಮೀಳಾ ಅದರ ಬಗ್ಗೆ ಒಳ್ಳೆಯ ವಿಮರ್ಶೆ ಮಾಡಿದ್ದಳು. ಐವತ್ತರವತ್ತು ರೂಪಾಯಿ ಗೆಳೆಯನೊಬ್ಬನ ಹತ್ತಿರ ಕಡಾ ತಂದಿದ್ದೆ. ಆದರೆ ಅವರ ಮನೆಗೆ ಹೋದವನು ನಾಲ್ವತ್ತಕ್ಕೂ ಹೆಚ್ಚನ್ನ ಇಸ್ಪೀಟಾಟದಲ್ಲಿ ಸೋತಿದ್ದೆ. ಅದೇ ಅವಳ ತಮ್ಮನ ಹತ್ತಿರ. ಈಗ ಅದೇ ಸತ್ತಿ, ಸತೀಶ ಆಗಿದ್ದಾನೆ. ಶರ್ಮಾನ ಮನೆಯಲ್ಲಿ

ಅವರು ಉಳಿದುಕೊಂಡಿದ್ದರು. ಅವನೇ ಅವರ ಪರಿಚಯ ಮಾಡಿಸಿದ್ದ. ಆದರೆ ಆಗವನು ಮನೆಯಲ್ಲಿರಲಿಲ್ಲ. ಈವನಿಂಗ್ ಡ್ಯೂಟಿಗೆ ಹೋಗಿದ್ದ. ಇದ್ದಿದ್ದರೆ ಹತ್ತಿಪ್ಪತ್ತು ಸಾಲ ಕೇಳುತ್ತಿದ್ದೆ. ಅವರಿಬ್ಬರನ್ನು ಜೊತೆಯಲ್ಲಿ ಕರೆದೊಯ್ಯುವಾಗ ನನ್ನ ಜೇಬಲ್ಲಿದ್ದುದು ಒಟ್ಟು ಆರು ರೂಪಾಯಿ.

ಜೊತೆಯಲ್ಲಿ ಅವರಿರುವಾಗ, ಟ್ರೇನಿನಲ್ಲಿ ಏನೆಲ್ಲಾ ಯೋಚನೆ ಮಾಡಿದೆ. 'ಗದ್ದಲದಲ್ಲಿ ಯಾರೋ ಪರ್ಸ್ ಹೊಡೆದುಬಿಟ್ರು', 'ಅಯ್ಯೋ ಕಾಲು ಉಳುಕಿಬಿಡ್ತು', 'ಎಂಟು ಗಂಟೆಗೆ ಒಬ್ಬರ ಹತ್ತಿರ ಅಪಾಯಿಂಟ್‌ಮೆಂಟ್ ಇದೆ'. ಆದರೆ ಹೇಳಿದ ನೆಪ ಮಾತ್ರ ಅಷ್ಟು ತೂಕದ್ದಾಗಿರಲಿಲ್ಲ. ಪಿಕ್ಚರ್ ಬಹಳ ರಶ್ಶು. ಇಡೀ ವಾರದ ಸೀಟು ಬುಕ್ ಆಗಿದೆ ಎಂದೆ.

ಪ್ರಮೀಳಾಗೆ ಬೇಜಾರಾಯ್ತು. ಒಮ್ಮೆಲೆ ಮುಗುಂ ಆಗಿಬಿಟ್ಟಳು. "ಒಳ್ಳೆಯದಾಯ್ತು. ಹೇಗೂ ನೀನಿವತ್ತು ಇಷ್ಟು ಹಣ ಸೋತಿದ್ದಿಯಲ್ಲಾ" ಎನ್ನುತ್ತಾ ಸರಳ ಸಸುನಕ್ಕಳು. ಈ ಮಾತಿನಿಂದಾಗಿ ನಾನು ತುಂಬಾ ಹೊತ್ತು ಸುಮ್ಮನಿರಬೇಕಾಯ್ತು.

ಮೂರನೆಯ ಮಾಳಿಗೆ ಏರುತ್ತಿದ್ದಂತೆ, ಪ್ರಮೀಳಾ ಏದುಸಿರುಬಿಡಲು ಆರಂಭಿಸಿದಳು. ಕಣ್ಣಲ್ಲಿ ಕಂಪ್ಲೇಂಟಿನ ಮುದ್ರೆಯಿತ್ತು. ಪಿಕ್ಚರಿಗೆ ಕರಕೊಂಡು ಹೋಗದೆ ಇರೋದಕ್ಕೆ ಕುಂಟುನೆಪ ಹೇಳಿದ ಹಾಗೆ, ಇಲ್ಲಿಗೆ ಬರುವುದನ್ನು ತಪ್ಪಿಸಲೂ ಏನಾದರು ಪ್ಲ್ಯಾನ್ ಮಾಡಬಹುದಾಗಿತ್ತಲ್ಲಾ ಎನ್ನುವಂತಿತ್ತು ಅವಳ ಮುಖಭಾವ. ಸರಳಾ, ಚುರುಕಾಗಿ ಮೇಲೇರುತ್ತ ಅವಳ ಕಡೆಗೆ ನೋಡಿ ನಗುತ್ತಿದ್ದಳು.

ನಾಲ್ಕನೆಯ ಮಾಳಿಗೆ ಮುಗಿದು ಐದನೆಯ ಮಾಳಿಗೆಯ ಮೆಟ್ಟಲೇರುತ್ತಿದ್ದಂತೆ, ಪ್ರಮೀಳಾ ನಿಂತುಬಿಟ್ಟಳು. "ಇನ್ನೂ ಮೇಲೇರಬೇಕಾ?", ಅವಳ ಪ್ರಶ್ನೆ ಕೇಳಿ ನನ್ನ ಸುಳ್ಳಿನ ಬಗ್ಗೆ ನನಗೇ ಬೇಜಾರಾಯ್ತು. "ಇದು ಕೊನೆಯ ಮಾಳಿಗೆ", ನಾನಂದದಕ್ಕೆ ಸರಳಾ ಜೋರಾಗಿ ನಕ್ಕಳು. ಪ್ರಮೀಳಾನ ಕಣ್ಣುಗಳಲ್ಲಿ ಕೆಂಪಾದ ಗೆರೆಗಳು ಕಾಣಿಸಿಕೊಂಡವು. "ಮನುಷ್ಯರು ಇರುವಂಥ ಜಾಗಾನಾ ಇದು?". ಅವಳು ಹೇಳುವುದನ್ನು ತಾನೇ ಹೇಳಿದೆ ಎನ್ನುವಂತೆ ಪ್ರಮೀಳಾ ಅಕ್ಕನ ಕಡೆಗೆ ನೋಡಿದಳು.

ಮೇಲೆ ಹೋಗಿ, ಬಾಗಿಲು ತೆರೆದು, ದೀಪ ಉರಿಸಿದೆ. ಸಾಮಾನುಗಳೆಲ್ಲಾ ಹರಡಿ ಬಿದ್ದಿದ್ದವು. ಆ ದಿನ, ಅವರಿಬ್ಬರು ಬಂದಾಗ, ಇನ್ನಷ್ಟು ಕೆಟ್ಟದಾಗಿ ಹರಡಿಕೊಂಡಿದ್ದರೂ, ಕೆಲವಷ್ಟಾದರೂ ವ್ಯವಸ್ಥಿತವಾಗಿದ್ದವು.

ನಾನು ಚಾ ಮಾಡುವುದರಲ್ಲಿ ತೊಡಗಿಕೊಂಡಿದ್ದೆ. ಸರಳಾ ಕೋಣೆಯೆಲ್ಲಾ ತಿರುಗಿ, ಅಲ್ಲಿರುವ ವಸ್ತುಗಳನ್ನು ವೀಕ್ಷಿಸುತ್ತಿದ್ದಳು- "ಒಹ್ ಈ ಮಂಚ ಯಾವಾಗಿನದು? ಮರಾಠರ ಕಾಲದ್ದಾ? ಸ್ಟಡೀ ಟೇಬಲ್ ಮೇಲೆ ಏನಿದು? ಸಾಬೂನಾ? ಪೇಪರ್ ವೇಟ್ ಅಂತ ತಿಳಿದೆ."

ಪ್ರಮೀಳಾ ಮೌನವಾಗಿ ಕಿಟಕಿಯ ಹತ್ತಿರ ನಿಂತಿದ್ದಳು. ಹೊರಡುವದಕ್ಕೆ ಮುನ್ನ ಸರಳಾ ಬಚ್ಚಲು ಮನೆಗೆ ಹೋಗಿದ್ದಳು. ಪ್ರಮೀಳಾ ಹತ್ತಿರ ಬಂದು, "ಟಿಕೆಟ್ ಇಲ್ಲ ಎಂಬುದನ್ನು ಮೊದಲೇ ಗೊತ್ತುಮಾಡಿಕೊಳ್ಳಲಿಕ್ಕೆ ಆಗಲಿಲ್ಲವಾ?" ಎಂದು ಕೇಳಿದಳು.

ಏನು ಹೇಳುವುದೆಂದೇ ಗೊತ್ತಾಗಲಿಲ್ಲ. ಸೋತ ದೃಷ್ಟಿಯಲ್ಲಿ, ಅವಳ ಕಡೆಗೆ ನೋಡುತ್ತ ನಿಂತೆ. ಮತ್ತೆ ಹೇಳಿದಳು, "ನನಗಾಗಿ ಹೇಳಿದ್ದಲ್ಲ. ಸರಳಾ ಮೊದಲಿನಿಂದ ಏನೇನೋ ಹೇಳ್ತಾ ಇದ್ದಳು. ಇನ್ನು ಮನೆಗೆ ಹೋದ ಮೇಲೆ ಏನೇನು ಹೇಳಬಹುದು, ಗೊತ್ತಾ?"

"ನನಗಿದು ಮೊದಲೇ ಗೊತ್ತಿದ್ದರೆ..."

ಅವಳ ಧ್ವನಿ ಖಾರವಾಗಿತ್ತು. "ಗೊತ್ತಿರಬೇಕಲ್ಲವಾ.. ಇಷ್ಟು ಸಣ್ಣ ವಿಷಯಕ್ಕಾಗಿ"... ಅಷ್ಟರಲ್ಲಿ ಸರಳಾ ಬಚ್ಚಲು ಮನೆಯಿಂದ ಹೊರಗೆ ಬಂದಳು. "ಈ ಬಚ್ಚಲು ಮನೆಯಂತೂ ಒಳ್ಳೆಯ

ಪ್ರಾಚ್ಯವಸ್ತು ಸಂಗ್ರಹಾಲಯದ ಹಾಗಿದೆ. ಒಳಗೆ ಹೋಗುವವರ ಹತ್ತಿರ ಒಂದಾಣೆಯಂತೆ ಟಿಕೆಟ್ ವಸೂಲ ಮಾಡಬಹುದು'' ಎಂದು ಜೋರಾಗಿ ನಕ್ಕಳು.

ಪ್ರಮೀಳಾ ನಮ್ಮಿಬ್ಬರಿಗಿಂತ ಮೊದಲೆ ಹೊರನಡೆದು ಮೆಟ್ಟಿಲುಗಳ ಹತ್ತಿರ ನಿಂತಿದ್ದಳು.

ಬೆಣ್ಣೆ, ಬ್ರೆಡ್, ಬಿಸ್ಕೆಟ್‌ಗಳನ್ನೆಲ್ಲ ಟೇಬಲ್ ಮೇಲಿಟ್ಟು, ಸ್ವಲ್ಪ ಹೊತ್ತು ಸುಮ್ಮನೆ ಮಂಚದ ಮೇಲೆ ಕುಳಿತೆ. ಶೆಲ್ಫ್‌ನಿಂದ ಹಳೆಯ ಪುಸ್ತಕವೊಂದನ್ನು ತೆಗೆದೆ. ಬಹಳ ದಿನಗಳವರೆಗೆ ಆ ಪುಸ್ತಕವನ್ನು ತಲೆಯ ಹತ್ತಿರ ಇಟ್ಟುಕೊಂಡು ಮಲಗುತ್ತಿದ್ದೆ. ಪುಸ್ತಕ ಪ್ರಮೀಳಾನದು. ಆ ದಿನಗಳಲ್ಲಿ ಅವಳ ಮನೆಯಿಂದ ತಂದಿದ್ದೆ. ಓದುವ ಹುಚ್ಚಿನಿಂದಲ್ಲ, ಒಳಗಡೆ ಪ್ರಮೀಳಾನ ಫೋಟೋ ಇಟ್ಟಿದ್ದನ್ನು ನೋಡಿ ತಂದಿದ್ದೆ. ಪ್ರಮೀಳಾಗೆ ಅದು ಗೊತ್ತಿತ್ತು. ಅದನ್ನು ಗಮನಿಸಿ, ಅವಳು ನನ್ನತ್ತ ನೋಡಿ ಮುಗುಳು ನಕ್ಕಿದ್ದಳು. ಆಗಷ್ಟೇ ಪರಿಚಯವಾಗಿತ್ತು. ಅವಳು ಹೀಗೇ ಮುಗುಳು ನಗುತ್ತಿದ್ದಳು.

ಪುಸ್ತಕ ಹಿಂದಿರುಗಿಸಲು ಹೋದಾಗ, ಅವರು ಎರಡು ದಿನ ಹಿಂದೆಯೇ ಹೊರಟು ಹೋಗಿದ್ದಾರೆಂಬುದು ತಿಳಿಯಿತು. ಆ ದಿನ ಏನೆಲ್ಲಾ ಯೋಚನೆ ಮಾಡಿಕೊಂಡು ಹೋಗಿದ್ದೆ. ಇನ್ನೆಂದಾದರೂ ಖಂಡಿತಾ ಸಿನೇಮಾಕ್ಕೆ ಕರೆದು ಕೊಂಡು ಹೋಗ್ತೇನೆ ಎಂದು ಹೇಳಬೇಕೆಂದಿದ್ದೆ. ಆ ದಿನ ಮನೆಯನ್ನು ಸ್ವಚ್ಛ ಮಾಡಿಟ್ಟು ಹೋಗಿದ್ದೆ. ಆದರೆ ಅಷ್ಟು ಬೇಗ ಅವರು ಹೊರಟು ಹೋಗಬಹುದು ಎಂದೆಣಿಸಿರರಲಿಲ್ಲ.

ಅವರು ಬರುವ ಮೊದಲೊಮ್ಮೆ ಶರ್ಮ ಹೇಳಿದ್ದ, ಹುಡುಗಿ ಹೇಗನಿಸಿತು ಎಂದು ನೋಡಿ ಹೇಳು. ಅವರು ಬೇಗ ಮದುವೆ ಮಾಡುವವರಿದ್ದಾರೆ.

ನನಗೆ ಹೇಗೆನಿಸಿತು ಎಂದವನು ಮತ್ತೆ ಕೇಳಲಿಲ್ಲ. ಮತ್ತವರ ಪ್ರಸ್ತಾಪವನ್ನೇ ಮಾಡಿಲ್ಲ.

ಪುಸ್ತಕ ತೆರೆದೆ. ಪಾಕೆಟ್ ಬುಕ್ ಸೀರಿಸ್‌ನ ಹಳೆಯ ಪುಸ್ತಕ, ಹರಿದು ಹೋಗಿತ್ತು. ಒಂದೊಂದು ಪುಟವೂ ಎದ್ದಿತ್ತು. ಫೋಟೊ ಅಲ್ಲೇ ಇತ್ತು. ಐವತ್ನಾಲ್ಕು-ಐವತ್ತೈದರ ಮಧ್ಯದ ಪುಟಗಳಲ್ಲಿ. ಈಗಲೂ ಅವಳು, ನನ್ನನ್ನು ಅದೇ ದೃಷ್ಟಿಯಲ್ಲಿ ನೋಡುತ್ತ, 'ಪಿಕ್ಚರಿಗೆ ಕರೆದುಕೊಂಡು ಹೋಗದೆ ಇರೋದಕ್ಕೆ ಕುಂಟುನೆಪ ಹೇಳಿದ ಹಾಗೆ, ಇಲ್ಲಿಗೆ ಬರುವುದನ್ನು ತಪ್ಪಿಸಲೂ ಏನಾದರು ಪ್ಲ್ಯಾನ್ ಮಾಡಬಹುದಿತ್ತಲ್ಲಾ?' ಎಂದು ಹೇಳುತ್ತಿದ್ದಂತೆ ಅನ್ನಿಸಿತು.

ಫೋಟೋ ಕೈಯಲ್ಲಿ ಹಿಡಿದು, ನೋಡುತ್ತಾ ಕುಳಿತೆ. ಮತ್ತಲ್ಲೇ ಇಟ್ಟು, ಪುಸ್ತಕ ಮಡಿಚಿದೆ. ಅದನ್ನು ಮಂಚದ ಮೇಲಿಟ್ಟು, ಎದ್ದೆ. ಅಲ್ಲಿಂದೆತ್ತಿ ಮೇಜಿನ ಮೇಲಿಟ್ಟು, ಕಿಟಕಿಗಳ ಹತ್ತಿರ ಹೋದೆ. ಹೊರಗೆ ಅವೇ ಚಾವಣಿಗಳು, ಒಣಗುತ್ತಿರುವ ಅವೇ ಬಟ್ಟೆ-ಬರೆಗಳು, ಅವೇ ಮಕ್ಕಳಾಟಿಗೆಯ ಹರುಕು-ಮುರುಕು ಗಾಡಿಗಳು, ಹಳೆಯ ಕುರ್ಚಿಗಳು, ಭರಣಿಗಳು, ಬಾಟ್ಲಿಗಳು.. ಹಿಂದಿರುಗಿ ಕುರ್ಚಿಯ ಹತ್ತಿರ ಬಂದೆ. ಎಷ್ಟೋ ಹೊತ್ತಿನವರೆಗೆ ಅಲ್ಲೇ ಕುಳಿತುಕೊಂಡೆ. ಮತ್ತೆ ಒಮ್ಮೆಲೆ ಎದ್ದು, ಪುಸ್ತಕವನ್ನು ಕೈಗೆತ್ತಿಕೊಂಡೆ. ಮತ್ತಲ್ಲೇ ಇಟ್ಟೆ. ಒಳಗಡೆ ಹೋಗಿ ಚೂರಿ ತಂದು ಬ್ರೆಡ್ಡಿನಿಂದ ಸ್ಲಾಯಿಸ್ ಮಾಡತೊಡಗಿದೆ. ಅದನ್ನು ಅರ್ಧಕ್ಕೆ ಬಿಟ್ಟು ಕಿಟಕಿಯ ಹತ್ತಿರ ಬಂದೆ. ಅಲ್ಲಿಂದಲೇ ಬಹಳ ಹೊತ್ತಿನವರೆಗೆ ನನ್ನನ್ನು, ನನ್ನ ಕೋಣೆಯನ್ನು ಅವಳ ದೃಷ್ಟಿಯಿಂದ ನೋಡತೊಡಗಿದೆ.

ಕನ್ನಡಕ್ಕೆ: **ಮಾಧವಿ ಭಂಡಾರಿ**



ಶಬ್ದತೀರ



# ಚಪ್ಪಟೆ ಜೀವಿಗಳು

ದೀವಾಳಿಯೆದ್ದುಹೋದಂತಿರುವ ಮುಚ್ಚಿದ ಅಂಗಡಿಯೊಂದರ ಎದುರಿನ ವಿಶಾಲ ಫುಟ್‌ಪಾಥಿನ ಮೇಲೆ, ಫಳಫಳ ಹೊಳೆಯುವ ಪೋಸ್ಟರುಗಳ ಹಂಗಾಮಿ ಅಂಗಡಿಯೊಂದು ತೆರೆದುಕೊಂಡಿದೆ. ಲಾಲ್‌ಬಹಾದ್ದೂರ್ ಶಾಸ್ತ್ರಿ, ಸಚಿನ್ ತೆಂಡೂಲ್ಕರ್, ಮಾಧುರಿ ದೀಕ್ಷಿತ್, ಜವಾಹರಲಾಲ್ ನೆಹರು, ಕಾಜೋಲ್, ಹೃತಿಕ್ ರೋಷನ್, ಸೌರವ್ ಗಂಗೂಲಿ, ತಿರುಪತಿ ವೆಂಕಟೇಶ್ವರ, ಮಧುಬಾಲಾ.... ಹೀಗೆ ಎಲ್ಲ ಅಂಗಾತ, ಆಕಾಶ ನೋಡುತ್ತ ನಗುತ್ತಿದ್ದಾರೆ. ನೀವು ಬಂದರೆ ನಿಮ್ಮನ್ನು ನೋಡಿ ನಗುತ್ತಾರೆ. ಈ ನಗುವಿನ ಹಿಂದಿನ ನಿಶ್ಶಬ್ದ, ಬ್ಲೇಡಿನಿಂದ ಕುಯ್ದಷ್ಟು ಸೂಕ್ಷ್ಮವಾಗಿರುತ್ತದೆ.

ಮಾಧುರಿಯ ಬದಿಗೋ, ಮೇಲೋ ತನ್ನ ಸರದಿ ಬಂದರೆ, ನೆಹರೂಗೆ ಖುಷಿ. ಗಾಂಧಿಯ ಕೆಳಗೆ ಬಂದರೆ, ಕಾಜೋಲ್‌ಗೆ ತುಂಬ ದುಃಖ. ಇಬ್ಬರು ಡಬ್ಲ್ಯೂ ಡಬ್ಲ್ಯೂ ಎಫ್ ಟೊಣಪಿಯರ ನಡುವೆ ಸಿಕ್ಕ ಅಂಬೇಡ್ಕರ್‌ರಂತೂ, ಇನ್ನೇನು, ಕನ್ನಡಕ ತೆಗೆದು, ಅದನ್ನು ಒರೆಸಿಕೊಳ್ಳಲು ಉದ್ಯುಕ್ತರಾಗಿದ್ದಾರೆ. ಬಲ ತುದಿಯಲ್ಲಿರುವ ತಾಜ್‌ಮಹಲ್, ಗಾಳಿಗೆ ಎದ್ದೆದ್ದು ಬೀಳುತ್ತಿದೆ. ಬೀಸುವ ಗಾಳಿಗೆ ಮರದ ಎಲೆಯೊಂದು ಓಲಾಡುತ್ತ ಬಂದು, ಶಾಹ್‌ರುಖ್‌ನ ಒಂದು ಕಣ್ಣಿನ ಮೇಲೆ ಬಿದ್ದು, ಅವನು ಒಂದು ಕಣ್ಣಿನ ಆಪರೇಷನ್ ಮಾಡಿಕೊಂಡು ಹಸಿರು ಬಟ್ಟೆಯ ಪಟ್ಟಿ ಕಟ್ಟಿಕೊಂಡವನಂತೆ ಕಾಣುತ್ತಿದ್ದಾನೆ.

ಮಾರಾಟಗಾರ ಮಾತ್ರ,, ತನ್ನ ಚಿಲ್ಲರೆಯ ಸಣ್ಣ ಡಬ್ಬಿ ಬಿಟ್ಟು ನಾಪತ್ತೆಯಾಗಿದ್ದಾನೆ. ನೀವೀಗ, ಎಷ್ಟು ಬೇಕೋ ಅಷ್ಟೊತ್ತು, ಈ ಚಪ್ಪಟೆ ಜೀವಿಗಳೊಂದಿಗೆ ಒಡನಾಡಬಹುದು.

ಈ ಮಾರಾಟಗಾರನನ್ನು, ಮೊದ್ದು ಅಂದುಕೊಳ್ಳುವ ಹಾಗಿಲ್ಲ. ಏಕೆಂದರೆ, ಪ್ರತೀ ಸಲ ಸಂಜೆಯಾದದ್ದೇ, ಅವನು ಈ ಪೋಸ್ಟರುಗಳನ್ನೆಲ್ಲ ದೊಡ್ಡದೆರಡು ರಟ್ಟುಗಳ ನಡುವೆ ಹೊಂದಿಸಿಡುತ್ತಾನಲ್ಲಾ, ಆಗ ತುಂಬಾ ಮಸ್ಕರಿ ಮಾಡುವುದುಂಟು. ಉದಾಹರಣೆಗೆ, ಸರ್ವಪಲ್ಲಿ ರಾಧಾಕೃಷ್ಣನ್ ಮತ್ತು ಸಮಂತಾ ಫಾಕ್ಸ್‌ರನ್ನು ಎದುರು ಬದುರು ಇಟ್ಟುಬಿಡೋದು ಅಥವಾ ಬೊಚ್ಚುಬಾಯಿಯ ಮೋಹನ ದಾಸ್ ಗಾಂಧಿಯನ್ನು, ಪಮೇಲಾ ಎಂಡರ್‌ಸನ್ ಮೇಲೆ ಬಿಟ್ಟುಬಿಡೋದು... ಹೀಗೆ. ಮರುದಿನ ಮುಂಜಾನೆ, ಕಟ್ಟುಬಿಚ್ಚುವಾಗ, ಅವನಿಗೇನೋ ತುಂಟ ನಗು. ಮೆಲ್ಲಗೆ ಬೇರ್ಪಡಿಸುತ್ತಾನೆ. ಆಗ ಗಾಂಧೀಜಿಯ ಕಣ್ಣು ತೆರೆದೇ ಇರುವುದನ್ನು ನೋಡಿ, 'ಅಲಲಲಾ' ಅಂತಾನೆ. ರಾಧಾಕೃಷ್ಣನ್, ಏನೂ ಆಗದಿರುವಂತೆ ನಟಿಸುತ್ತಾರಲ್ಲ ಎಂದು ಸಿಳ್ಳೆಹಾಕುತ್ತಾನೆ. ಅವರೆಲ್ಲ ತನಗೆ ವಿಧೇಯರಾಗಿದ್ದಾರೆ ಅಂತವನ ನಂಬುಗೆ.

ಬೇಕಿದ್ದರೆ, ಪೋಸ್ಟರ್‌ಗಳನ್ನು ಅವನಿಲ್ಲದಾಗ ನೋಡಿ ಮತ್ತು ಅವನಿದ್ದಾಗ ನೋಡಿ. ಫರಕು ನೀವೇ ಮನಗಾಣಬಲ್ಲಿರಿ. ಅವನಿದ್ದಾಗ ಈ ಪೋಸ್ಟರುಗಳು, ಅತ್ತೆಯ ಉಪಸ್ಥಿತಿಯಲ್ಲಿಯ ಸೊಸೆಯಂತಿರುತ್ತವೆ (ಅಥವಾ ವೈಸಾವರ್ಸಾ). ಅವನಿಲ್ಲದಾಗ, ಮಾಸ್ತರು ರಜಾ ಮೇಲಿದ್ದಾಗಿನ ವಿದ್ಯಾರ್ಥಿಗಳಂತಿರುತ್ತವೆ.

ನಿಮ್ಮ ಜತೆ ವಿಚಿತ್ರವಾದ ಸಂಬಂಧ ಸ್ಥಾಪಿಸಿಕೊಳ್ಳುತ್ತವೆ. ತೀರಿಹೋದ ಪೂರ್ವಜರನ್ನು ನೆನಪಿಸುತ್ತವೆ. ಬಾಲ್ಯದ ಕ್ಯಾಲೆಂಡರುಗಳನ್ನು ಗಾಳಿಗೆ ಪಟ ಪಟ ಹಾರಿಸುತ್ತವೆ. ಮುಕ್ಕಾಲು ಜೀರ್ಣಾವಸ್ಥೆಯ ಕ್ಯಾಲೆಂಡರೊಂದು, ಹೇಗೆ, ಒಂದೇ ಜಂಗು ಕಡ್ಡಿಯ ಆಧಾರದ ಮೇಲೆ ಇನ್ನೂ ನಿಂತಿದೆಯಲ್ಲ! ಗಾಳಿಗೆ ಆ ಕಡ್ಡಿ, ಗೋಡೆಯನ್ನು ಗೀರಿ, ಗೀರಿ ಶಾಶ್ವತವಾದ ಸಹಿಯೊಂದನ್ನು ಮಾಡಿದಂತಿದೆಯಲ್ಲ!!

ಆ ಕ್ಯಾಲೆಂಡರಿನ, ಯಾವುದೋ ಇಸವಿಯ, ಕಡೇ ತಿಂಗಳ ದಿನಾಂಕಗಳ ಹಾಳೆ ಮಾತ್ರ ಇದೆಯಲ್ಲ; ಅದರಲ್ಲಿ ಪೆನ್ಸಿಲ್‌ನಿಂದ ಏನೋ ಬರೆದಂತಿದೆ. ಯಾವುದೋ ತಾರೀಕಿಗೆ ರೌಂಡು ಮಾಡಿದಂತಿದೆಯಲ್ಲ ಆ ದಿನ, ಏನಾಯಿತು? ಯಾವ ಮರ, ಯಾವ ಕಾಡಲ್ಲಿ ಸದ್ದಿರದೆ ಉರುಳಿತು? ಯಾವ ಹಾವು, ಯಾವ ಮೆಟ್ಟಿಲ ಮೇಲೆ ಪರೆ ಬಿಟ್ಟಿತು? ಯಾವ ಮಾಣಿ, ಯಾವ ಹೋಟಲಲ್ಲಿ, ತನ್ನ ಮೊದಲ ಗ್ಲಾಸು ಒಡೆದ? ಯಾವ ನೈಟ್‌ಬಸ್ಸಿನ ಚಾಲಕ, ಯಾವ ಸೇತುವೆಯ ಮೇಲೆ ನಿದ್ದೆ ಹೋದ, ಇಡೀ ಬಸ್ಸನ್ನು ಬಿಟ್ಟು ಇಳಿದು, ಕತ್ತಲಲ್ಲಿ ಇಲ್ಲವಾದ?

ಫಕ್ಕನೆ ಕಣ್ತೆರೆದರೆ, ರಸ್ತೆಯಲ್ಲಿ ಭೋರೆಂದು ಹಾದು ಹೋದ ಬಸ್ಸಿಗೆ, ಎಲ್ಲರೂ ಇದ್ದಲ್ಲೇ ಕಂಪಿಸಿದ್ದಾರೆ. ನೆಹರೂ ಈಗ ಕಿರಾಣಿ ಅಂಗಡಿಯ ಗುರಣ್ಣನಂತೆ ತೋರುತ್ತಿದ್ದಾನೆ. ರಾಜೀವ ಗಾಂಧಿಯಂತೂ, ಅಯ್ಯಪ್ಪನೋತ್ಸವದಲ್ಲಿ ಏಳು ಹಗಲು, ಏಳು ರಾತ್ರಿ ಅವಿರತ ಸೈಕಲ್ ಸುತ್ತಿ, ಹೈರಾಣಾದ ಪೈಲವಾನ್‌ನಂತೆ ಕಾಣುತ್ತಿದ್ದಾನೆ. ಆ ಸೈಕಲ್‌ಗೆ ಕಟ್ಟಿದ ಪುಗ್ಗೆಗಳೂ, ಕ್ರಮೇಣ, ಅವನಂತೆ ಬಾಡಿ, ಪಂಚಭೂತಗಳಲ್ಲಿ ಲೀನವಾಗಿಹೋದವು. 'ಟುರುರ್' ಎಂದು ಮರ್ಮಭೇದಕವಾದ ಸದ್ದು ಬರುವಂತೆ, ಒಂದು ಬಲೂನು ಮಾತ್ರ, ಸದಾ ಟವ ಟವ ಊದಿಕೊಂಡು, ಹಿಂಗಾಲಿಯ ಕಡ್ಡಿಗಳ ಆಯತ ಸ್ಥಳದಲ್ಲಿ ಜಾಗ್ರತವಾಗಿತ್ತು.

ಪೋಸ್ಟರುಗಳಿಗೀಗ ಬೇಸರ. ನೆತ್ತಿಯ ಮೇಲೆ ಬಂದು ಕರಿಗಟ್ಟಿದೆ, ಎಂದಿಲ್ಲದ ಮೋಡ. ಎಲ್ಲರಿಗೂ ಬೇಸರ. ಶಾಹ್‌ರುಖ್ ಖಾನ್‌ಗೆ ಒಳ್ಳೆಯ ಗಂಡನಾದದ್ದಕ್ಕೆ ಬೇಸರವಾದಂತಿದೆ. ಅಮೀರ್‌ಖಾನ್‌ಗೆ ಒಳ್ಳೆಯ ಅಪ್ಪನಾದುದಕ್ಕೆ ಬೇಸರವಾದಂತಿದೆ. ವಿಶ್ವೇಶ್ವರಯ್ಯನವರಿಗೆ ಕನ್ನಂಬಾಡಿಯ ಬಗ್ಗೆ ಬೇಸರ. ರವಿವರ್ಮನ ಕನ್ನಿಕೆಗೆ, ಕನ್ಯತ್ವದ ಬಗ್ಗೆ ಬೇಸರ.

ಒದ್ದೆಗಾಳಿ ಬೀಸುತ್ತಿದೆ. ಪಟ ಪಟ, ಎಲ್ಲರ ಲ್ಯಾಮಿನೇಟೆಡ್ ಕೆನ್ನೆಗಳ ಮೇಲೆ ಹನಿಗಳು ಉದುರುತ್ತಿವೆ. ಅರೆ, ಅಂಗಡಿಯವನಿಲ್ಲ. ತರಗೆಲೆಗಳನ್ನು ಹೆಡೆಮುರಿಗೆ ಎತ್ತುತ್ತ ಬಂದ ಗಾಳಿ, ಮೊದಲು ಎತ್ತೋದು ಯಾರನ್ನು... 'ಅರೇ... ಒಬ್ಬರಿಗೊಬ್ರು ಹಿಡಕೊಳ್ಳಿ... ಅಂಗಡಿಯವನು ಎಲ್ಲೋದಾ...'. ನೋಡ ನೋಡುತ್ತಿರುವಂತೆ, ಗಾಳಿಪಟಗಳಂತೆ ಪೋಸ್ಟರುಗಳು ದೊಪ್ಪೆಂದು, ಎದ್ದೆದ್ದು ಬೀಳುತ್ತ, ಒದ್ದೆ ರಸ್ತೆಗುಂಟ ಸುರುಳಿಯಾಗಿ ಹೋಗುತ್ತಿವೆ. ಯಾರದೋ ದಿನಚರಿಯ ಹಾಳೆಗಳಂತೆ ದಿಕ್ಕಾಪಾಲಾಗಿ ಓಡುತ್ತಿವೆ. ನೈಟ್‌ಬಸ್ಸಿನ ಕಿಟಕಿಯಿಂದ ಹಾರಿಹೋದ ಕನಸುಗಳಂತೆ.

ನಾವೂ ನಿಂತಿದ್ದೇವೆ, ಚಪ್ಪಟೆ, ಚೂರೂ ಅಲ್ಲಾಡದೆ.

ಬಹುಶಃ ನಾಳೆಯಿಂದ ಅವನು, ನಮ್ಮನ್ನು ಮಾರಬಹುದು, ಇದೇ ಜಾಗದಲ್ಲೇ!

**ಜಯಂತ ಕಾಯ್ಕಿಣಿ**



ದುಷ್ಯಂತ ನಾಡಗೌಡ

# ಪಾರಿವಾಳದ ಶಕ್ತ

ಅಂಗಳದ, ಆಕಾಶದೆಡೆಗೆ ತಲೆ ಎತ್ತಿ ನಿಂತ ಮೂರೂ ಗೋಡೆಗಳಿಗೆ, ಉದ್ದುದ್ದವಾಗಿ ಕ್ಯಾಮಿ ಹಾಗೂ ಸುಣ್ಣದ ಬಿಳಿಯ ಪಟ್ಟೆಗಳನ್ನು ಬಳೆಸಲಾಗಿತ್ತು. ಪೂರ್ವಕ್ಕೆ ಮುಖಮಾಡಿದ ಬಾಗಿಲು, ನೊಗ ಹೊತ್ತಂತೆಯೇ ದೊಡ್ಡ ಹೊಸ್ತಿಲು ದಾಟಿ, ಎರಡು ಎತ್ತುಗಳು ಆರಾಮಾಗಿ ಒಳಗೆ ಬರುವಷ್ಟು ಅಗಲವಿದ್ದರೆ, ಎತ್ತರವೂ ಅದಕ್ಕೆ ತಕ್ಕಷ್ಟಿತ್ತು. ದಣಿದು ಬಂದ ಎತ್ತುಗಳ ನೊಗ ಹರಿದು, ಅವು ದನದ ಮನೆಗೆ ಹೋಗುವ ಮೊದಲು, ಅಲ್ಲಿಯೇ ಅಂಗಳದಲ್ಲಿದ್ದ ದೊಡ್ಡ ಡೋಣಿಯಲ್ಲಿ ನೀರು ಕುಡಿಯುತ್ತಿದ್ದವು. ಅದಕ್ಕೆ ಎದುರಾಗಿ ಹುಸಿಯ ಬಲಗೋಡೆಯಲ್ಲಿ, ಕೈ ಒಳಗೆ ಇಳಿಸಲು ಬರುವಂತಹ




ಮಾಡಿನಲ್ಲಿ, ಯಾವಾಗಲೂ ಜೋಳ ತುಂಬಿರುತ್ತಿತ್ತು. ಕಾಲಿಗೆ ಕಟ್ಟಿದ ಗೆಜ್ಜೆಗಳ ಸಪ್ಪಳ ಮಾಡುತ್ತ, ಕೈಯಲ್ಲಿ ಬಡಿಗೆ ಹಿಡಿದು, ತೆಳು ಕಾವಿಬಟ್ಟೆ ಧರಿಸಿ, ಅಂತಹದೇ ಬಣ್ಣದ ಪಾವುಡ ತಲೆಗೆ ಸುತ್ತಿದ, ನಿಯಮಿತ ಭಿಕ್ಷೆಗಾಗಿ ಬರುತ್ತಿದ್ದ ಜಂಗಮರಿಗಾಗಿ ಆ ಜೋಳ. ಅಂಗಳಕ್ಕೆ ಹೊಂದಿದ, ಮೇಲೆ ಕರೀ ಹಂಚು ಹೊಚ್ಚಿದ ಆರಂಕಣದ ಹುಸಿ ಇದು; ಇದಕ್ಕೆ ಹೊಂದಿಕೊಂಡು ಅಷ್ಟೇ ಅಂಕಣದ ಪಡಸಾಲೆ. ಹೆಚ್ಚು ಕಾಳಜಿಯಿಂದ ಸುಣ್ಣ-ಬಣ್ಣ ಮಾಡಿದ, ನುಣುಪಾಗಿ ಕಾಣುವ ಪಡಸಾಲೆಯ ಗೋಡೆಗಳು. ಅವುಗಳಿಗೆ ತೂಗು ಹಾಕಿದ, ಹೆಚ್ಚು ಸಂದಣಿ ಮಾಡದ ರೀತಿಯಲ್ಲಿಯ ಫೋಟೋಗಳು, ಚಿತ್ರಗಳು, ಒಂದೆರಡು ಕ್ಯಾಲೆಂಡರುಗಳು. ಮಧ್ಯಾಹ್ನದ ಊಟವಾದ ಮೇಲೆ, ಕೆಲವೊಂದು ಸಲ ಸಾಯಂಕಾಲದ ಚಹಾದ ಸಮಯದಲ್ಲಿ, ಅಪ್ಪಾ ಸಣ್ಣಗೆ ತೂಗಿಕೊಳ್ಳುತ್ತ ಕೂಡುತ್ತಿದ್ದ. ತೂಗುಮಂಚ ಎಡಬದಿಯಲ್ಲಿ. ಆಯ್ದ ಕೆಲವೇ ಜನರೊಡನೆ ಅಪ್ಪಾ, ವಾರ್ತಾ-ಸಲ್ಲಾಪ ನಡೆಸುತ್ತಿದ್ದುದೂ ಇದೇ ತೂಗುಮಂಚದ ಮೇಲೆಯೇ ಕುಳಿತು. ಒಂದು ಸಲ, ಇನ್ನೂ ಹತ್ತೀ-ಸುಗ್ಗಿ ಮುಂದಿದ್ದ ವೇಳೆಯಲ್ಲಿ, ಬಹುಶಃ ಸಂಕ್ರಮಣ ದಂದಿರಬೇಕು-ಅಪ್ಪಾ ಹೊರಗಿನಿಂದ ಬಂದಾಗ, ಕೊರವರ ಮಂಜ, ಹುಸಿಯ ಅಂಚಿಗೆ ಕುಳಿತು ಸನಯಿ ಬಾರಿಸಹತ್ತಿದ್ದ. ಬಂದವರೇ ಅಪ್ಪಾ, ಹೊರಗಿನ ಬಿಸಿಲು ಹಾಗೂ ದಣವಿನಿಂದಾಗಿ, ಹೊಸ ರೇಶಿಮೆ ಶರಟನ್ನು ಮೈಮೇಲಿಂದ ಕಳೆದು, ಕೈಮೇಲೆ ಚೆಲ್ಲಿಕೊಂಡು, ತೂಗುಮಂಚದ ಮೇಲೆ ಕುಳಿತು ಸನಯಿ ಕೇಳಿದರು. ಪೂಜೆ ಮುಗಿಸಿದ ಅಪ್ಪಣ್ಣಭಟ್ಟರು ಹಾಗೂ ಉಳಿದವರು ಒಳಗೆ ಊಟಕ್ಕಾಗಿ ಅಪ್ಪಾನ ದಾರಿಕಾಯುತ್ತಿದ್ದರು. ಸನಯಿ ಕೇಳಿ ಖುಷಿಯಿಂದ ಅಪ್ಪಾ, "ಲೇ ಮಗನs ತೊಗೋ; ಇದನ್ನು ಹಾಕ್ಕೊಂಡು ಹಬ್ಬ ಮಾಡು" ಎಂದು ಕೈಯಲ್ಲಿ ಜೋತುಬಿದ್ದಿದ್ದ ರೇಶಿಮೆ ಅಂಗಿಯನ್ನೇ ಮಂಜನಿಗೆ ಕೊಟ್ಟರು.

ಅಕ್ಕನ ಮದುವೆಯ ತಯಾರಿ, ಸುಮಾರು ಒಂದು-ಒಂದೂವರೆ ತಿಂಗಳಿಂದಲೇ ನಡೆದಿತ್ತು. ತೂಗುಮಂಚ ತೆಗೆದಿಡಲಾಗಿತ್ತು. ಪ್ರತಿವರ್ಷ, ಹತ್ತಿ ಬರುವ ಬೇಸಿಗೆಯ ಪ್ರಾರಂಭದ ಕಾಲದಲ್ಲಿ, ತೂಗುಮಂಚ ಬಿಚ್ಚಿ ಒಳಗಿನ ಕೋಣೆಯಲ್ಲಿ ಡುತ್ತಿದ್ದರು. ತೂಗುಮಂಚದ ಸರಳುಗಳನ್ನು ತೂಗು ಹಾಕಿದಲ್ಲಿಯೇ, ಹತ್ತಿ ತುಳಿದು ತುಂಬುವ ಗಂಟನ್ನು ತೂಗುಹಾಕುತ್ತಿದ್ದರು. ಸಣ್ಣವನಾಗಿದ್ದಾಗಿನಿಂದ ತನ್ನ ಅಪ್ಪನ ಜೊತೆಗೆ, ಸದಾಕಾಲ ಈ ಮನೆಗೆ ಬರುತ್ತಿದ್ದ ಚೆನ್ನ-ಚೆನ್ಯಾ ಈಗ, ಆಕರ್ಷಕ ಮೈಕಟ್ಟಿನ ಹರೆಯದ ದುಡಿಮೆದಾರನಾಗಿದ್ದಾನೆ. ಉಟ್ಟ ಧೋತರ ತೊಡೆಯವರೆಗೂ ಮೇಲೆಳೆದು, ಟೊಂಕಕ್ಕೆ ಕಟ್ಟಿ, ಸಣ್ಣ ತೋಳಿನ ಬನಿಯನ್ ಮೇಲೆ ಅಂಡಿಗೆಯಲ್ಲಿ ಹತ್ತೀ ತುಳಿಯುವ ಚೆನ್ನನನ್ನು ಮತ್ತೊಮ್ಮೆ ಹೊರಳಿ ನೋಡಬೇಕೆನಿಸುವುದು. ಮನೆಯಲ್ಲಿ ಎಲ್ಲರಿಗೆ ಬೇಕಾಗಿ, ಎಲ್ಲರೊಡಗೂಡಿ ಬೆಳೆದವ; ಮನಸ್ಸುಗೊಟ್ಟು ಅಪ್ಪಾನ ಮನೆಗಾಗಿ ದುಡಿಯುವವ. ಮಾರೀ ಮೇಲೆ ಯಾವಾಗಲೂ ಒಂದು ರೀತಿಯ ಪ್ರಸನ್ನತೆ; ಆಗೀಗ ಹುಡುಗಾಟಿಕೆ ತೋರಿಸಲು, 'ಞಂ' 'ಞ್ಞಾ' ಎಂದು ಶಬ್ದ ಹೊರಡಿಸಿ ನಗುವವ. ಅಷ್ಟೆ ಅವನಿಗೆ ಬರುವ ಮಾತುಗಳು; ಚೆನ್ನ ಹುಟ್ಟು ಮೂಕ. ಅಪ್ಪಾನಿಗೆ ಚನ್ಯಾ ಅಂದರ ಬಹಳ ಪ್ರೀತಿ. ಆದರೆ ಚೆನ್ನನಿಗಿಂತ ನಾಲ್ಕಾರು ವರ್ಷ ಸಣ್ಣವನಾದ ನನ್ನ ಮೇಲೆ, ಅಪ್ಪಾನ ಸ್ವಂತ ಮಗನಾದವನ ಮೇಲೆ, ಅಪ್ಪಾ ಆ ರೀತಿ ಪ್ರೀತಿ ಮಾಡಿದ್ದು ನನಗೆ ತಿಳುವಳಿಕೆ ಬಂದ ಮೇಲಂತೂ ನೆನಪಿಲ್ಲ. ಸಾಲಿಗೆ ಹೋಗಲಿಕ್ಕೆ ಸೈಕಲ್ಲು ಕೊಡಿಸಂತ, ಅವ್ವನ ಕಡೀಂದ ಹೇಳಿಸಿದರೂ ಕೊಡಿಸಿರಲಿಲ್ಲ.

ಮದುವೆ ತಯಾರಿಗೆ ಬಂದವರಲ್ಲಿ, ಸೋದರ ಮಾವ, ತಾಳೀಕೋಟೆಯ ಗೋಪಾಲಮಾಮನ ಕೆಲಸ ಎಲ್ಲರಿಗಿಂತ ಮೊದಲೇ ಶುರುವಾಗಿತ್ತು. ಸುತ್ತಲಿನ ಹತ್ತು ಹಳ್ಳಿಯಿಂದ ಬರುವ ಬೆಣ್ಣೆ ಪರೀಕ್ಷಿಸಿ, ಧಾರಣೆ ನಿರ್ಧರಿಸಿ, ತೂಗಿಸಿ, ಕೂಡಿಹಾಕುವುದು; ಹೊತ್ತು ಮುಳುಗುವುದರೊಳಗೆ ಅಂಗಳದಲ್ಲಿ ಒಲೆ ಹೂಡಿಸಿ, ಕಲಾಯಿಯಿದ್ದ ದೊಡ್ಡ ಹಿತ್ತಾಳೆ ಪಾತ್ರೆಯಲ್ಲಿ ಕಾಯಿಸಿ, ಡಬ್ಬಿಯೊಳಗೆ, ಭರಣಿಗಳೊಳಗೆ ತುಂಬಿಸುವುದು ಗೋಪಾಲಮಾಮನ ಕೆಲಸ. ಬಹಳ ನಾಜೂಕಿನ ಕೆಲಸದಾಗ ಅವನು ನುರಿತವನು; ನಿಷ್ಠೆಯಿಂದ ಆ ಕೆಲಸ ಮಾಡುತ್ತಿದ್ದ. ಅಲ್ಲಿಯೇ, ಮುಂಚೀ ಬಾಗಿಲಿಗೆ, ಹುರಿಮಂಜು ಹಚ್ಚುವ ಕೆಲಸ ಮುಗೀತ ಬಂದಿತ್ತು. ಉಳಿದ ಬಾಗಿಲುಗಳಿಗೂ ಹುರಿಮಂಜನ್ನೇ ಹಚ್ಚುವುದು. ಆದರೆ ನಡುಮನೆಯೊಳಗಿನ ಗಣಪತಿ ಮಾಡು, ಅದರ ಸುತ್ತ ಮುತ್ತಲಿನ ಗೋಡೆಗಳಿಗೆ ಪೇಂಟ ಮಾಡಲು ಮಾತ್ರ ನರೇಂದ್ರದ ರಾಜೇಸಾಬನೇ ಆಗಬೇಕು. ಎಂಟ್ಹತ್ತು ವರ್ಷದ ಹಿಂದೆ, ಈ ರಾಜೇಸಾಬ, ತನ್ನ ಹೆಂಡ್ತಿ ಮ್ಯಾಲೆ ಸಂಶಯ ತಾಳಿ ಖೂನಿ ಮಾಡಿದ ಅಂತ ಜನರು ಮಾತಾಡ್ತಿದ್ದರು; ಪೊಲೀಸರದೂ ಅದೇ ಆಪಾದನೆ ಇತ್ತು. ಆ ಕಷ್ಟದ ಕಾಲದಾಗ, ನಮ್ಮೂರಿನ ತನ್ನ ಬೀಗರ ಮನೆಗೆ ರಾಜೇಸಾಬ ಬಂದಾಗ, ಅಪ್ಪಾ ಅವನಿಗೆ ಆಶ್ರಯ ಕೊಟ್ಟು, ಜಾಮೀನು ಕೊಡಿಸಿ ಸಹಾಯ ಮಾಡಿದರಂತೆ. ಅದೇ ಕಾಲಕ್ಕೆ, ರಾಜೇಸಾಬನ ಬಣ್ಣ ಹಚ್ಚುವ ಉದ್ಯೋಗದಲ್ಲಿಯ ಕೌಶಲ್ಯ ಅಪ್ಪಾನ ಲಕ್ಷ್ಯಕ್ಕೆ ಬಂದದ್ದು. ಅಂದಿನಿಂದ ಪ್ರತಿವರ್ಷ, ಗಣಪತಿ ಕೂಡಿಸುವ ಮುಂದ, ರಾಜೇಸಾಬ ಎಲ್ಲಿದ್ದಲ್ಲಿಂದ ಬಂದು ನಡುಮನಿ ಬಣ್ಣಾ ಮಾಡಿಕೊಡುವವ. ಹೊರಗೆ ಆಯಕಟ್ಟಿನ ಸ್ಥಳಗಳಲ್ಲಿ ಕಂಬ ಹುಗಿದು, ಉಳಿದ ಕಡೆಗಳಲ್ಲಿ ಗಳಾ ನೆಟ್ಟು, ಹಂದರಾ ಕಟ್ಟು ಗಡಿಬಿಡಿಯಲ್ಲಿ ಹುಸೇನ ಸಾಹೇಬರ ಜೋರು ದನಿ ಕೇಳಿಸುತ್ತಿತ್ತು. ಅಪ್ಪಾ ಯಾವಾಗಲೂ ಹುಸೇನಿಯನ್ನು 'ಹುಸೇನ ಸಾಹೇಬರ' ಅಂತಲೇ ಕರೆಯುವುದು. ಕಿರಾಣಿ ಸಾಮಾನಿನ ಸಲುವಾಗಿ, ವಾಲಿಸಾವಕಾರ ಅಂಗಡಿಯಲ್ಲಿ ಖಾತೇ ತೆಗೆದಿದ್ದು, ಏನು? ಎಷ್ಟು? ಯಾವಾಗ? ಮತ್ತು ಹ್ಯಾಂಗ? ತರುವುದನ್ನು ಯಾರ್‍ಯಾರೋ ನಿರ್ಧರಿಸಿ ತಂದೊಗೆಯು

ತ್ತಿದ್ದರು. ಒಂದು ದೃಷ್ಟಿಯಿಂದ, ಹಲವಾರು ಜನ ಅನ್ನುವಂತೆ ಅಪ್ಪಾ ಧರ್ಮರಾಯನೇ ಸರಿ. ಆದರೆ ಅಕ್ಕನ ಮದುವೆಗೂ ಮೊದಲೇ, ಈ ಧರ್ಮ ರಾಯ ಸತ್ವಪರೀಕ್ಷೆಗೊಳಗಾಗಬೇಕಾಯಿತು; ಕಷ್ಟ ಅನುಭವಿಸಬೇಕಾಗಿಬಂತು. ಇದರ ಜೊತೆ ಗೆಯೇ ತನಗೆ, ಆ ವಯಸ್ಸಿನಲ್ಲಿ ಅಪ್ಪಾ ತನ್ನ ಮಗನಾದವನಿಗೆ ಹೇಗೆ ಪ್ರೀತಿ ಮಾಡಬೇಕೊ ಆ ರೀತಿ ಮಾಡಲಿಲ್ಲ ಅಂತ ಕಸಿವಿಸಿ ಆಗುತ್ತಿತ್ತು. ಪುಸ್ತಕ-ಪಾಟಿ ಬಗ್ಗೆ ಕೇಳಿದ್ದಿಲ್ಲ, ಅಪ್ಪಾ ನನ್ನ ಅರಿವಿ-ಅಂಚಡಿ ಬಗೆಗೂ ಕೇಳಿದ್ದಿಲ್ಲ. ಎಲ್ಲಾದರೂ ಓಡಿ ಹೋಗಬೇಕಂತ ಆಗ ಅನಿಸಲಿಕ್ಕೆ ಹತ್ತಿತ್ತು. ಮದಿವಿಗಿಂತ ಎರಡು ದಿನ ಮೊದಲು, ನನ್ನ ಮುಂಜಿವೆ. ಆ ಸಲುವಾಗಿ ಆದರೂ ನನ್ನ ಕಡೆ, ಅಪ್ಪಾ ಮತ್ತು ಉಳಿದವರು ಲಕ್ಷ್ಯಕೊಡಬಾರದೇ ಅನ್ನಿಸಿತ್ತು.

ಅಪ್ಪಾ ಅಂದರೆ ನನ್ನ ತಂದೆ ಮಾಧವರಾವ ಕುರಹಟ್ಟಿ. ನಾಲ್ಕು ತಲೆಮಾರುಗಳ ಹಿಂದೆ ಸಾಂಗಲಿ ಸಂಸ್ಥಾನಿಕರು, ತಮ್ಮ ಪ್ರತಿನಿಧಿ ಖರೆ ಸರಕಾರ ಅವರನ್ನು ನಮ್ಮೂರಿಗೆ ಕಳುಹಿಸಿದ ದಿನಗಳಲ್ಲಿಯೇ, ಅಪ್ಪಾನ ಮುತ್ತಜ್ಜ ಶಿರಹಟ್ಟಿ ಲಕ್ಷ್ಮೇಶ್ವರ ಕಡೆಯಿಂದ, ಪ್ರಸಿದ್ಧ ವೈದ್ಯನೆಂಬ ನಾಮೆಯೊಂದಿಗೆ ಈ ಊರಿಗೆ ಬಂದರಂತೆ. 'ಖರೆ ಸರಕಾರ', ಯಾವಾಗ, ಹೇಗೆ ಅನುಭವ ಪಡೆದರೋ, ಅಂತೂ ನಾರಾಯಣರಾವ ಕುರಹಟ್ಟಿ ಇವರಿಗೆ, ತಮ್ಮ ಹಾಗೂ ತಮ್ಮ ಕುಟುಂಬದ ಆರೋಗ್ಯದ ಜವಾಬ್ದಾರಿ ಹೊರೆಸಿ ದರು. ಎಂತಹ ಯೋಗಾಯೋಗವೋ ಏನೋ, ನಿರ್ವಂಶರಾದ ಗೌಡರೊಬ್ಬರ ಮನೆ, ದೊಡ್ಡ ಮನೆ ಖಾಲಿ ಬಿದ್ದಿತ್ತು. ಖರೆ ಸರಕಾರರ ಮನೆ ಶ್ರೀಮಂತಿಕೆಯದಾಗಿತ್ತು. ಆದರೆ ಗೌಡರ ಮನೆಯ ಎದುರಿಗೆ ಇದ್ದಂತಹ ಪ್ರಶಸ್ತ ರಸ್ತೆ, ಊರಲ್ಲಿ ಮತ್ತೆಲ್ಲೂ ಇರಲಿಲ್ಲ. ಓಣಿ ಹೊರಳುವ ಮೂಲೆಗೆ ಲಾಟೀನು ಕಂಬ; ಅಗಲ ಗಟಾರಗಳು. ಹಿಂದಿನ ಅಂಗಳದಲ್ಲಿ ಬಾವಿ. ಸಿಹಿ ನೀರನ್ನು ಮಾತ್ರ, ವಿಠೋಬ ದೇವರಗುಡಿಯ ಬಾವಿ ಯಿಂದಲೇ ಅವ್ವ ತರುತ್ತಿದ್ದಳು. ಪ್ರೇಮಕ್ಕ, ಶಾಂತಕ್ಕ ಅವ್ವನ ಜೋಡಿ ಹೋಗುವವರು. ಮಡಿನೀರು ತರಲು ಹೋಗುವಾಗ ಮಾತ್ರ ಇನ್ನೂ ಕತ್ತಲಿರುತ್ತಿತ್ತು. ಚುಮು-ಚುಮು ನಸುಕಿ ನಲ್ಲಿ, ಅವ್ವನ ಜೋಡಿ ಹೋಗುವಾಗ, ಜಗತ್ತೆಲ್ಲ ಶಾಂತವಾಗಿ, ಸಂತೋಷದಲ್ಲಿ ಮುಳುಗಿರುತ್ತಿತ್ತು. ಈ ಅನುಭವ ಬಹಳಷ್ಟು ಸಲ ಸಿಕ್ಕರೂ, ಅಕ್ಕಂದಿರು ದೊಡ್ಡವರಾದಂತೆ, ಅವ್ವ ಹೆಚ್ಚು ಹೆಚ್ಚು ಅಂತರ್ಮುಖಿಯಾಗತೊಡಗಿ ದ್ದಳು. ಕೆಲ ವೊಂದು ಸಲವಂತೂ ಬಹಳ ಖಿನ್ನಳಾಗಿರು ತ್ತಿದ್ದಳು. ಅಡುಗೆ ಮನೆಯಲ್ಲಿ ಮಡಿಯಿಂದ ಅಡಿಗೆ ಮಾಡುವಾಗ ಸಹ, ಕುಬುಸ ತೊಟ್ಟುಕೊಳ್ಳದೆ ಸೆರಗಿನಿಂದಲೇ ಎದೆಯನ್ನೂ, ಬೆನ್ನನ್ನು ಮುಚ್ಚಿಕೊಂಡಿರು ತ್ತಿದ್ದಳು. ಅಕಸ್ಮಾತ್ ಆಗ ಅಡುಗೆ ಮನೆಗೆ ಅಪ್ಪಾ ಬಂದರೆ, ಮುಖ ಇನ್ನೂ ಭಾವನಾರಹಿತ ಮಾಡಿ ಕೊಂಡು ತಿರುಗಿ ಹೊರಗೆ ಹೋಗುತ್ತಿದ್ದರು.

ಅಪ್ಪಾನ ಹಿರಿಯರು ಹೇಗೆ ಇದ್ದರೋ ಗೊತ್ತಿಲ್ಲ; ಆದರೆ ನಾರಾಯಣರಾವ ಕುರಹಟ್ಟಿಯವರ ವೈದ್ಯಕೀಯ ಮಾತ್ರ ಮುಂದಿನ ಒಂದು ತಲೆಗೇ ಸೀಮಿತವಾಯಿತಂತೆ. ಶೀನಪ್ಪ ವೈದ್ಯ, ನಿಪುಣ ವೈದ್ಯನಲ್ಲದೆ ಚಾಣಾಕ್ಷ ವ್ಯವಹಾರಿಕನೂ ಆಗಿದ್ದ. ಸಾಕಷ್ಟು ಗಳಿಸಿ, ಜಮೀನು ಖರೀದಿಸಿ, ಆರೆತ್ತಿನ ಒಕ್ಕಲುತನವಿಟ್ಟ. ಅವನ ಮಗ ರಾಘಪ್ಪ, ಪಕ್ಕಾ ಮತ್ತು ಬರೇ ಜಮೀನುದಾರನಾದ. ಸರಕಾರ ಖರೆ ಅವರ ಮನೆತನಕ್ಕೆ ಸರಿಸಮನಾಗುವ ಸಂಪತ್ತು, ಸ್ಥಾನ ಗಳಿಸಿದ. ಅವನ ಒಬ್ಬನೇ ಮಗ ನಮ್ಮ ಅಪ್ಪ, ಹೀಗಾಗಿ ಬಹುಶಃ ಭೇಫಿಕರ ಬೆಳೆದಿರಬೇಕು. ಯಾರಿಗೋ ಜಡ್ಡು ಆದರೆ, ನಡೀರಿ ಬೆಳಗಾವಿಗೆ, ಗಿಂಡೆ-ಜೀರಗೆನಲ್ಲಿ ತೋರ ಸೂಣು ಅಂತ ಕರಕೊಂಡು ಹೋಗೂದು. ಯಾವ ಹೊಲಕ್ಕ, ಯಾವ ದಿವಸ, ಎಷ್ಟು ಕೆಲಸ ದವರು ಬೇಕು ಅನ್ನುವುದನ್ನು, ಎಷ್ಟು ಮತ್ತು ಎಂತಹ ಗೊಬ್ಬರ ಬೇಕು, ಇದನ್ನು ಅಪ್ಪಾನಿಗಾಗಿ,

ಅವರ ಆಪ್ತರಲ್ಲಿಯೇ ಒಬ್ಬರು ನಿರ್ಧಾರ ಮಾಡು ತ್ತಿದ್ದರು. ಅತ್ಯಂತ ಸಮೃದ್ಧ ದಿವಸಗಳಲ್ಲಿ ತಮ್ಮ ತಾರುಣ್ಯ ಅನುಭವಿಸಿ, ದಯೆ ಮತ್ತು ಔದಾರ್ಯ ತೆಗಳನ್ನು ಹೊಂದಿದ್ದಿರಬಹುದು. ಈ ದಯೆ ಮತ್ತು /ಅಥವಾ ಔದಾರ್ಯ ಮತ್ತೊಬ್ಬರಿಗೆ ತೋರಿಸಿದಾಗ, ಹೊರಗಿನವರಿಗೆ ಉಣಬಡಿಸಿ ದಾಗ ಅದರಲ್ಲಿ ಪ್ರೀತಿಯೂ ಕಂಡೀತು. ಆದರೆ ಅವರ ಮಗನಾದ ನನಗೆ ಯಾವಾಗಲೂ ಪರ ದೇಶಿತನವೆ ಕಾಡುತ್ತಿತ್ತು. ನನ್ನ ಭಾವನೆಗಳು, ಯಾತನೆ ಅಪ್ಪಾನನ್ನು ಮುಟ್ಟುತ್ತಿದ್ದವೋ ಇಲ್ಲವೋ? ಎತ್ತರದ ನಿಲುವಿನ, ಒಳ್ಳೆಯ ಮೈಕಟ್ಟಿನ, ಸಾದು ಗಪ್ಪು ಬಣ್ಣದ, ಗುಂಗುರುಕೂದಲಿನ ಮೋಹಕ ವ್ಯಕ್ತಿತ್ವ, ಮುಖದ ಮೇಲಿನ ಅನವಶ್ಯಕ ಗಂಭೀರತೆ ಯಿಂದಾಗಿ-'ನನ್ನದು ಕೊಡ-ತೊಗೊಳ್ಳುವ ವ್ಯವ ಹಾರವಲ್ಲ; ಏನಿದ್ದರೂ ನನ್ನಿಂದ ನೀವು ಪಡೆಯ ತಕ್ಕದ್ದು' ಎಂದು ತಪ್ಪದೇ ಹೇಳುವ ಮುಖ ಮುದ್ರೆಯಿಂದಾಗಿ, ಮೋಹಕವಾಗಿ ಕಾಣದೇ, ಪೂರ್ತಿ ಯಾರ ತಿಳುವಳಿಕೆಗೂ ಸಿಗದಂತಾಗಿತ್ತು ಎಂದೆನಿಸುತ್ತದೆ. ತಾನಾದರೂ ಈ ಮನುಷ್ಯ ಸುಖದಿಂದಿದ್ದಾನೆಯೇ ಅನಿಸುತ್ತಿತ್ತು. ನಾನು ಮನೆ ಬಿಟ್ಟು ಓಡಿ ಹೋಗಲು, ಸಂಪೂರ್ಣವಾಗಿ ಈ ಮನುಷ್ಯನ ವ್ಯಕ್ತಿತ್ವವೇ ಕಾರಣ ಎನ್ನಿಸಿದರೂ, ನಮ್ಮಪ್ಪನನ್ನು ತಪ್ಪುಗಾರನನ್ನಾಗಿ ಮಾಡಲು, ಮನಸ್ಸು ಈಗಲೂ ಸಿದ್ಧವಿಲ್ಲ. ಅಸಂಖ್ಯ ಸಾಧ್ಯತೆ ಗಳನ್ನು ಹೊಂದಿ, ಪರಂಪರಾಗತ ಚೌಕಟ್ಟಿ ನಲ್ಲಿಯೇ ಬದುಕಬೇಕಾದ ಒಬ್ಬನ ಪರಿಸ್ಥಿತಿ ಯನ್ನು, ಅವನಲ್ಲಿ ಗಟ್ಟಿಯಾಗಿ ನಿಲ್ಲುವಂತಹ ಕೆಲವು ಗುಣಗಳನ್ನು, ಬೇರೆ ಯಾರೂ ಸರಿಯಾಗಿ ತಿಳಿದುಕೊಳ್ಳಲಾರರು ಎನಿಸುತ್ತದೆ. ಎಲ್ಲಾದರೂ ಓಡಿಹೋಗಿ ತನಗಿಷ್ಟವಾದ ರೀತಿಯಲ್ಲಿ ಬದುಕು ವುದು ಸಾಧ್ಯವಿಲ್ಲ ಎನಿಸಿದಾಗ, ಒಮ್ಮೊಮ್ಮೆ, ಇಲ್ಲಿಯೇ, ಯಾವುದೋ ಒಂದು ಬೇರೆಯ ಅನುಭವ ತನ್ನಷ್ಟಕ್ಕೆ ತಾನು ತೆರೆದುಕೊಂಡಾಗ ಕೂಡ, ಅಪ್ಪಾ ಪೂರಾ ಹೊರಬರಲಿಲ್ಲ.

ಇಂತಹ ಒಂದು ಬೆಳವಣಿಗೆ, ಪ್ರೇಮಕ್ಕನ ಮದುವೆ ಗೊತ್ತಾಗುವುದಕ್ಕಿಂತ ಎರಡು ವರ್ಷ ಮೊದಲು ನಡೆಯಿತು. ಪ್ರೇಮಕ್ಕ ಮೊದಲ ಮಗಳು, ಅವಳಿಗಾಗ ಹದಿನಾರು ವರ್ಷ. ಅಪ್ಪಾನಿಗೆ ಮೂವತ್ತೆಂಟು-ಮೂವತ್ತೊಂಬತ್ತು ಇರಬೇಕು. ಇನ್ನೊಂದು ಮಾತು ನನ್ನ ಲಕ್ಷ್ಯಕ್ಕೆ ಬಂದಿದೆ. ಅದೇನೆಂದರೆ ಸಂಸ್ಥಾನಿಕರ ಪ್ರತಿನಿಧಿ ಯಾಗಿ ಬಂದ ಖರೆ ಮನೆತನದವರಿಗೆ, ಊರಿನ ಮಾಲಿಕರಿಗೆ ಸಲ್ಲಬೇಕಾದ ಸ್ಥಾನ-ಮಾನ ಎಲ್ಲ ದೊರಕುತ್ತಿತ್ತು. ಆದರೆ ಅವರಿಗೆ, ಈ ಊರಿನ ಪರಂಪರೆಯಲ್ಲಿ, ಉಳಿದವರೊಂದಿಗೆ ಒಂದಾಗಿ, ಆತ್ಮೀಯತೆಯಿಂದೊಡಗೂಡಿದ ಪರಿಚಯಾತ್ಮಕ ಧುರೀಣತ್ವ ಕೊಡುವುದು ಎಂದೂ ಸಾಧ್ಯವಾಗ ಲಿಲ್ಲ. ಮನೆಯಲ್ಲಿ ಈಗಲೂ ಮರಾಠಿಯೇ. ಹೈಸ್ಕೂಲ್‌ವರೆಗೆ ಮಕ್ಕಳ ಶಿಕ್ಷಣ ಯಾವಾಗಲೂ, 'ಶಿಕವಣಿ' ಹೇಳುವ ನುರಿತ ಮಾಸ್ತರರಿಂದ, ಮನೆ ಯಲ್ಲಿಯೇ. ಅವರ ಮನೆಗೆ ಬಣ್ಣ ಹಚ್ಚುವುದಕ್ಕೆ ಕೂಡ, ಅವರ ಜೊತೆಗೆಯೇ ಇಲ್ಲಿಗೆ ವಲಸೆ ಬಂದ ಮೋಹಿತೆ ಮನೆಯವರೇ ಆಗಬೇಕು. ಹೀಗಾಗಿ ಕುರಹಟ್ಟಿ ಮನೆತನ ಇಂತಹ ಅವಕಾಶ ಗಳಲ್ಲಿ ಸಹಜವಾಗಿ ಊರೊಡನೆ ಒಂದಾಗಿ, ಒಂದು ರೀತಿಯ ಯಜಮಾನಿಕೆ ಪಡೆದಿತ್ತು. ಅಪ್ಪಾನ ಸಮಕಾಲೀನ ಈ ಮೋಹಿತೆ ಮನೆತನದ ಶಂಕರ, ಮಾಡಲು ಕೆಲಸ ಕಡಿಮೆಯಾಗಿ, ಉತ್ಪನ್ನ ಕಡಿಮೆಯಾಗಿ ಕುಡಿತದ ಚಟ ಅಂಟಿಸಿಕೊಂಡಿದ್ದ. ಅವನ ತಂಗಿಯರಲ್ಲಿ ಇನ್ನೂ ಒಬ್ಬಳದು ಮದುವೆಯಾಗಬೇಕಿತ್ತು. ಹುಡುಗಿ, ಸರಕಾರ ಖರೆಯವರ ಮನೆಯಲ್ಲಿಯೇ, ಅವರ ಮಗಳು ಶಶಿಯೊಂದಿಗೆ ಮರಾಠಿ ಶಿಕ್ಷಣ ಪಡೆದವಳು. ಅಣ್ಣ, ಇನ್ನು ತನ್ನ ಮದುವೆ ಮಾಡುವುದು ಸಾಧ್ಯ ವಾಗದ ಮಾತು ಎಂದು ತಿಳಿದೂ, ಇಂತಹ ಸಣ್ಣ ಊರಲ್ಲಿ, ತನ್ನಂತಹವಳು ಮತ್ತೇನೂ ಮಾಡಲು ಸಾಧ್ಯವಿಲ್ಲ ಎಂದು ನಸೀಬ ಒಪ್ಪಿಕೊಂಡವಳು. ಅಲ್ಲಿ ಇಲ್ಲಿ ಅಪ್ಪು ಹೊಲಿಗೆಯಿಂದ ಗಳಿಸುತ್ತಿದ್ದಳು.

ಒಂದು ದಿನ, ಅವಳ ಮನೆಗೆ, ಅವಳ ಗೆಳತಿ ಅಕ್ಕ ಸಾಲಿಗರ ಚಿನ್ನವ್ವ ಬಂದು, ಊರಲ್ಲಿ ಕಟ್ಟಲಾಗುತ್ತಿರುವ ಒಂದು ನಾಟಕದ ಕಂಪನಿಯ ಸುದ್ದಿ ಹೇಳಿದಳು. ಪ್ರಭುಸ್ವಾಮಿಮಠರ ನಾಟಕ ಕಂಪನಿಯಲ್ಲಿ ಪೇಟಿ ಮಾಸ್ತರರಾಗಿದ್ದ ಕುಂಟುಕಾಲಿನ ರಾಮೋಜಿ, ಆ ಕಂಪನಿ ಒಡೆದು ಹೋದಮೇಲೆ ಮತ್ತೊಂದು ಕಂಪನಿ ಕಟ್ಟುವ ಹವ್ಯಾಸದಿಂದ ತನ್ನ ಗೆಳೆಯ ಶೇಖರನನ್ನು ಮೊರೆಹೊಕ್ಕಿದ್ದ. ಈ ಶೇಖರನ ತಂದೆ ಅಪ್ಪಾನ ನಿಷ್ಠಾವಂತ, ಆಪ್ತ ರೈತರಲ್ಲೊಬ್ಬ. ಜಡ್ಡಿನಿಂದ ಹಾಸಿಗೆಯಿಂದೇಳಲಾಗದ ತಂದೆಯಿಂದಾಗಿ, ಶೇಖರನಿಗೆ ಅಪ್ಪಾನ ಕಡೆ ಹಲವಾರು ಸಲ ಹೋಗಿಬಂದು ರೂಢಿಯಾಗಿತ್ತು. ಅಪ್ಪಾನಿಗೆ ಅಡಚಣೆಯಾದಾಗ, ಮಡಿವಾಳದ ಉಜ್ಜನ್ನಪ್ಪನಿಂದ ಸಾಲ ಕೊಡಿಸುವಲ್ಲಿಯೂ ಶೇಖರನ ಅಪ್ಪನೇ ಮಧ್ಯಸ್ಥನಾಗಿದ್ದ. ಶೇಖರನಿಗೆ ತನಗೊಬ್ಬನಿಗೇ ನಾಟಕ ಕಂಪನಿ ಕಟ್ಟುವುದು ಸಾಧ್ಯವಿಲ್ಲವೆನಿಸಿತು; ಹಾಗೂ ಹಾಗೆ ಮಾಡುವುದು ಸರಿಯಲ್ಲವೆನಿಸಿತು. ಸಾಕಷ್ಟು ಅನುಮಾನಗಳಿಂದ, ಕೈಯಲ್ಲಿ ಒತ್ತೆ ಇಟ್ಟುಕೊಂಡೇ ಶೇಖರ, ಅಪ್ಪಾನಲ್ಲಿ ಈ ವಿಷಯ ಪ್ರಸ್ತಾಪಿಸಿದ. ''ಓಹೋ! ಅದಕೇನಂತೆ! ಆಗಲಿ. ಕೆಲಸ ಶುರುಮಾಡಿರಿ'' ಎಂದು ಅಪ್ಪಾ, ಕಿಸೆಯಲ್ಲಿದ್ದ ಎರಡುನೂರು ರೂಪಾಯಿಕೊಟ್ಟು ಆ ವಿಚಾರವನ್ನೇ ಮರೆತರಂತೆ. ಕೆಳಗಿನ ಓಣಿಯಲ್ಲಿ, ಶೇಖರನ ಗೆಳೆಯನೊಬ್ಬನ ಖಾಲಿ ಇದ್ದ ಮನೆಯಲ್ಲಿ ನಾಟಕ ಕಂಪನಿ ರೂಪು ಪಡೆಯಲಾರಂಭಿಸಿತು. ಕಥೆ ಹಳೆಯದೇ. ಸಂಗೀತ ರಾಮೋಜಿಯದು. ಈ ರಾಮೋಜಿಗೆ ಪ್ರಭುಸ್ವಾಮಿ ಮಠರ ಕಂಪನಿಯಲ್ಲಿದ್ದಾಗಿನಿಂದಲೂ ಚಿನ್ನವ್ವನ ಗೆಳೆತನ. ಚಿನ್ನವ್ವನ ರೂಪ, ಕಂಠ ಯಾವ ನಾಟಕಕ್ಕೂ ಮಾಡಿಸಿದಂತಹವುಗಳಲ್ಲ. ಕಷ್ಟದಲ್ಲಿದ್ದ ಮೋಹಿತೆಯ ಹುಡುಗಿ ಗೌರಿಗೆ, ದೇವರು ಇವೆರಡನ್ನೂ ಕೊಟ್ಟಿದ್ದ. ಸ್ವಭಾವದಿಂದ, ಗುಣದಿಂದ ಮಾತ್ರ ಇಂತಹ ಕೆಲಸಕ್ಕಲ್ಲ ಗೌರಿ. ಆದರೆ ಚಿನ್ನವ್ವ, ಹಾಗೂ ಹೀಗೂ ಮಾಡಿ ರಿಹರ್ಸಲ್ ನಡೆಯುವಲ್ಲಿಗೆ ಗೌರಿಯನ್ನು ತಂದಳು.

ರಾಮೋಜಿಗೆ ಇಷ್ಟರಿಂದಲೇ ಎಲ್ಲವೂ ಆದಂತಲ್ಲ ಎಂದು ಗೊತ್ತಿತ್ತು. ಶೇಖರನಿಗೆ ಪುಸಲಾಯಿಸಿ, ಅಪ್ಪಾನನ್ನು ಒಂದು ಸಂಜೆಯ ರಿಹರ್ಸಲ್ಲಿನ ಸಮಯದಲ್ಲಿ ಕರೆದುಕೊಂಡು ಬರುವಂತೆ ಹೇಳಿದ. ಅಪ್ಪಾ ಬಂದಾಗ, ಸ್ಟ್ಯಾಂಡಿಗೆ ಸಿಕ್ಕಿಸಿದ ಪೆಟ್ರೋಮ್ಯಾಕ್ಸ್, ಎತ್ತರದ ಕಟ್ಟೆಯ ಕಂಬದ ಹಿಂದೆ, ಪಾತ್ರಗಳಾಗಿ ಬರುವವರ ಮೇಲೆ, ಅವರು ಕೈಯಲ್ಲಿ ಹಿಡಿದು ಓದುವ ಹಾಳೆಯ ಮೇಲೆ ಬೆಳಕು ಚೆಲ್ಲುತ್ತ ಉರಿಯುತ್ತಿತ್ತು. ಹತ್ತು ಫೀಟಿನ ಅಂತರದಲ್ಲಿ, ಸಿದ್ಧೇಶ್ವರ ಕಂಪನಿಯ ಕಬ್ಬಿಣದ ಕುರ್ಚಿಯ ಮೇಲೆ ಕುಳಿತು, ಸಹಜವಾಗಿ ಎಲ್ಲ ವೀಕ್ಷಿಸುತ್ತಿದ್ದ ಅಪ್ಪಾನ ಕಣ್ಣಿಗೆ ಗೌರಿ ಬಿದ್ದಾಗ, ಯಾವುದೋ ತಪ್ಪು ಮಾಡಿ ಸಿಕ್ಕು ಬಿದ್ದ ಭಾವ, ಗೌರಿಯ ಮುಖದ ಮೇಲೆ, ಕಣ್ಣಿನಂಚಿನಲ್ಲಿ ಅಸಹಾಯಕತೆಯ ಕಣ್ಣೀರು ಅವಳ ಮಾರ್ದವತೆ ಹೆಚ್ಚಿಸಿರಬೇಕು. ಸರಿ, ಶುರುವಾಯಿತು ಹೊಸದೊಂದು ಅಧ್ಯಾಯ. ಸರಿ-ರಾತ್ರಿಯವರೆಗೆ, ಕೆಲವೊಮ್ಮೆ ಬೆಳ್ಳಿಮೂಡುವವರೆಗಿನ ರಿಹರ್ಸಲ್ಲಿಗೆ ಅಪ್ಪಾ ತಪ್ಪದೇ ಹೋಗತೊಡಗಿದರು. ಅವರ ಜೊತೆಗೆ ಕಂದೀಲು ಹಿಡಿದುಕೊಂಡು ಚೆನ್ನ ಹೋಗುವವ. ಒಮ್ಮೊಮ್ಮೆ, ಹೊರಗೆ ಹೊತ್ತಾಗಿ, ಆಗಿ ಚೆನ್ನ, ಆತುಕೊಂಡು, ಕೂತ ಕಂಬದಡಿಯಲ್ಲಿಯೇ ಮಲಗಿಕೊಂಡಿದ್ದರೆ, ಅಪ್ಪಾ ಅವನನ್ನು ಎಬ್ಬಿಸದೇ ಹಾಗೆಯೇ ತಿರುಗಿ ಮನೆಕಡೆಗೆ ನಡೆಯುವವ. ಎಚ್ಚರಾದ ಚೆನ್ನ, ಒಂದು ಕೈಯಲ್ಲಿ ಕಂದೀಲು ಹಿಡಿದು, ಮತ್ತೊಂದರಿಂದ ಕಣ್ಣು ತಿಕ್ಕಿಕೊಳ್ಳುತ್ತ ಹಿಂದಿನಿಂದ ದುಡುದುಡು ಓಡಿ ಬರಬೇಕು. ಅವನು ಹಾಗೆ ಓಡಿಬರುವುದನ್ನು ನೋಡಿ ಪ್ರೇಮಕ್ಕ ನಕ್ಕಿದ್ದೂ ಇರಬೇಕು. ಅಪ್ಪಾನಿಗೆ ಮನೆಯಲ್ಲಿ ಬೆಳೆದ ಮಗಳಿದ್ದಾಳೆಂದೂ, ಅವಳಿಗೆ ವರ ನೋಡಿ ಮದುವೆಯ ಪ್ರಯತ್ನ ಮಾಡಬೇಕೆಂದೂ ಹೇಳುವವರಾರು? ಈ

ನಡುವೆ ಮತ್ತೆ, ಮಡಿವಾಳರ ಉಜ್ಜಣ್ಣಪ್ಪನ ಜೊತೆಗೆ ವ್ಯವಹಾರವಾಗಿತ್ತು. ಅಲ್ಲಿಲ್ಲಿ, ಅಂದರೆ ರಿಹರ್ಸಲ್ ನಡೆಯುತ್ತಿರುವಲ್ಲಿ, ರಿಹರ್ಸಲ್‌ಗಿಂತ ಮೊದಲು ಅಥವಾ ನಂತರ ಎರಡು ಆತ್ಮಗಳ ನಡುವೆ ಏನು ನಡೆಯುತ್ತಿತ್ತೋ ತಿಳಿದುಕೊಳ್ಳಬೇಕೆಂಬ ಕುತೂಹಲ ನನ್ನಲ್ಲಿ ಇತ್ತೀಚಿನದು. ಗೌರಿ ಬಹಳ ಒಳ್ಳೆಯ, ಪ್ರೌಢತ್ವಕ್ಕೆ ಕಾಲಿಕ್ಕುತ್ತಿರುವ ಹೆಣ್ಣು ಮಗಳಾಗಿದ್ದಳೆಂದು ನಾನು ಕೇಳಿ ತಿಳಿದಿದ್ದೆ. ಸಾಕಷ್ಟು ತಯಾರಿಯ ನಂತರ, ಅಪ್ಪಾ ಮಾಡಿಸಿಕೊಟ್ಟ ಸೀನು, ಪರದೆ ಉಪಯೋಗ ಮಾಡಿ, ರಾಮೋಜಿ ನಮ್ಮೂರಲ್ಲಿಯೇ 'ಸಂಗೀತ ಸೌಭದ್ರ' ನಾಟಕ ಆಡಿಸಿದ. ನಾಟಕ ನೋಡಲು ಹೋದ ಅಕ್ಕಂದಿರಿಬ್ಬರೂ, ರಾಜಕುಮಾರಿಯ ಪೋಷಾಕಿನಲ್ಲಿದ್ದ ಗೌರಿ ಬಹಳ ಚೆಲುವೆಯಾಗಿ ಕಂಡಳೆಂದು ಹೇಳುತ್ತ ಬಂದರು. ಖರೆ, ಮುಂದೆ ಎಂಟೇದಿನಗಳಲ್ಲಿ ರಾಮೋಜಿ ಗುರ್ಲಹೊಸೂರು ಜಾತ್ರೆಗಾಗಿ ನಾಟಕ ಆಡಿಸಲು, ಕಂಪನಿಯ ಎಲ್ಲರನ್ನೂ ಕರೆದುಕೊಂಡು ಹೋದ.

ಪ್ರೇಮಕ್ಕನ ಮದುವೆ ಗೊತ್ತಾದೊಡನೆ, ಚೆನ್ನ ಕುಣಿದಾಡಿದ. ಚೆನ್ನನಿದ್ದಲ್ಲಿ ಹಾದು ಹೋಗುವಾಗಲೆಲ್ಲ, ಅವನೆಡೆಗೇ ನೋಡುತ್ತ ದಾಟುತ್ತಿದ್ದ ಅಕ್ಕ, ಒಮ್ಮೆ ಅಪ್ಪನ ಕೈಯಲ್ಲಿ ಸಿಕ್ಕುಬಿದ್ದಳು. ಅಪ್ಪಾನಿಗೆ ಸುದ್ದಿ ತಿಳಿದ ಮರುದಿನವೇ, ಮೂಕ ಚೆನ್ನ್ಯಾ ಎಲ್ಲೋ ಊರು ಬಿಟ್ಟು ಹೋದನೆಂದು ಜನ ಮಾತನಾಡತೊಡಗಿದರು. ಮದುವೆಯ ಸಂಭ್ರಮ ಮುಗಿದ ಮೇಲೆಯೇ, ಅಪ್ಪಾನಿಗೆ ತಾನು ಸಿಕ್ಕ ಹುದುಲಿನ ಅರಿವಾದದ್ದು. ಎತ್ತು ಕಡಿಮೆ ಮಾಡಿ, ಹೆಚ್ಚು ಹೊಲ ಲಾವಣಿ ಹಾಕಲಾಯಿತು. ಮದುವೆಗಾದ ಖರ್ಚು, ಅದಕ್ಕಾಗಿ ಮಾಡಿದ ಸಾಲ ಅಪ್ಪಾನನ್ನು ಸ್ವಲ್ಪವಾದರೂ ಅಲುಗಾಡಿಸಿರಬೇಕು. ಆ ವರ್ಷ ನಾನು ಮ್ಯಾಟ್ರಿಕ್‌ಗೆ ಕೂಡುವವ. ಮೈಸೂರು ರಾಜ್ಯದ ಬೋರ್ಡಿನವರು ನಡೆಸಲಿದ್ದ ಮೊದಲನೆಯ ಎಸ್.ಎಸ್.ಎಲ್.ಸಿ. ಅದು. ಅಕ್ಕ ಬಸಿರು; ಮೊದಲ ಬಾಣಂತಿತನಕ್ಕೆ ತೌರುಮನೆಗೆ ಬಂದಿದ್ದಳು. ಕೊಳ್ಳಬೇಕಾದ ಪುಸ್ತಕ, ಮ್ಯಾಗ್‌ಝೀನ್‌ಗಳಿಗಾಗಿ ರೊಕ್ಕ ಕೇಳಿದಾಗ, ಅಪ್ಪಾ ಭಯಂಕರ ಸಿಟ್ಟಿಗೆದ್ದು ಒದರಾಡಿದ. ಅಂದೇ ರಾತ್ರಿ ನಾನು ಮನೆ ಬಿಟ್ಟು ಓಡಿಹೋದೆ.

ಟ್ರೇನಿನಲ್ಲಿ, ತಮ್ಮ ಊರುಗಳಲ್ಲಿ ಸೂಟಿ ಕಳೆದು, ತಿರುಗಿ ಅಹಮ್ಮದನಗರಕ್ಕೆ ತಮ್ಮ ವಿದ್ಯಾಭ್ಯಾಸಕ್ಕೆ ಮರಳುತ್ತಿದ್ದ ವಿದ್ಯಾರ್ಥಿಗಳೊಂದಿಗೆ ಕೂಡಿಕೊಂಡು, ನಗರಕ್ಕೆ ಹೋದೆ. ಭಜಿ ಕರೆದು ಮಾರುವುದರಿಂದ ಹಿಡಿದು, ಅವರ ಅರಿವೆ ಒಗೆದು ಕೊಡುವವರೆಗೆ ಈ ವಿದ್ಯಾರ್ಥಿಗಳ ಸೇವೆ ಮಾಡಿದೆ. ಊರಲ್ಲಿ ನನ್ನನ್ನು ಹುಡುಕಲು ಸಾಕಷ್ಟು ಪ್ರಯತ್ನ ಮಾಡಿದರಂತೆ. ಯಾವುದೋ ಡಾಕ್ಟರರ ಹತ್ತಿರ ಕೆಲಸ ಮಾಡಿ, ಕಲಿತು, ಇಂದು ನಾನು ಸಾಂಗಲಿ ಹತ್ತಿರದ ಖಾನಾಪುರದಲ್ಲಿ ಒಬ್ಬ ಸಾಕಷ್ಟು ರೊಕ್ಕ ಹಾಗೂ ಮರ್ಯಾದೆ ಗಳಿಸಿದ ಡಾಕ್ಟರ್. ಶಾಂತಕ್ಕನ ಮದುವೆಯಾದದ್ದು, ತಮ್ಮ ನಂದೂ, ಮನೆಯಲ್ಲಿ ಕೆಲ ಭಾಗ ಬಾಡಿಗೆ ಕೊಟ್ಟು ಜೀವನ ಸಾಗಿಸುತ್ತಿದ್ದುದು ಎಲ್ಲವೂ ಸುದ್ದಿಯಾಗಿ ಬಂದು ತಿಳಿಯುತ್ತಿದ್ದರೂ ಊರಿಗೆ ಹೋಗಬೇಕೆನಿಸುತ್ತಲೇ ಇರಲಿಲ್ಲ. ಅವ್ವ ಬಹಳ ಹಣ್ಣಾಗಿದ್ದಾಳೆಂದೂ, ಅವಳಿಗೆ ಸ್ವಲ್ಪ ಅರೆವು ಮರೆವು ಆಗಿವೆಯೆಂದು ತಿಳಿದಾಗ ಊರಿಗೆ ಹೋಗಿಬರಲೇಬೇಕೆಂದು ನಿರ್ಧರಿಸಿದೆ. ಆದರೆ ಈಗ ಊರಿಗೆ ಹೊರಟದ್ದು ಅಪ್ಪಾಗೆ ಅರ್ಧಾಂಗವಾಯು ಹೊಡೆದು ದೇಹದ ಬಲಭಾಗವೆಲ್ಲ ನಿಷ್ಕ್ರಿಯವಾಗಿದೆ, ಮಾತು ನಿಂತು ಹೋಗಿದೆ, ತೀವ್ರ ಬರಬೇಕು ಎಂದು ನಂದೂ ಕಳಿಸಿದ ತಾರಿನಿಂದಾಗಿ. ಬಸ್ಸಿನಿಂದಿಳಿದು ಹೆಂಡತಿ-ಮಗನೊಂದಿಗೆ ಮನೆಕಡೆ ಹೊರಟಾಗ, ಎರಡೂ ಮಗ್ಗುಲಲ್ಲಿ ಹುಟ್ಟಿಕೊಂಡ ಅಂಗಡಿಗಳು, ಬೇರೆ ರೀತಿಯ ವೇಷಮಾಡಿದ ಪರಿಚಿತರಲ್ಲದ ತರುಣರು. ಲಾಟೀನುಕಂಬದ ಬದಲಾಗಿ, ಇಲೆಕ್ಟ್ರಿಕ್‌ಕಂಬ ನಿಂತಿದೆ. ಮನೆಯ ಹೊರಗಿನ ನಳದ ಮುಂದೆ ಕೊಡ ಇಟ್ಟು, ದಣಿದು ದುಃಖಿತಳಾದಂತೆ ಕಂಡ ತರುಣಿ,



ನಂದೂನ ಹೆಂಡತಿಯಿರಬೇಕು. ಹುಸೇನ ಸಾಹೇಬರನ್ನೊಬ್ಬರನ್ನು ಬಿಟ್ಟರೆ, ಮನೆಯಂಗಳದಲ್ಲಿ ಕಾಲಿಟ್ಟಾಗ ಮತ್ಯಾರೂ ಕಾಣಲಿಲ್ಲ. ಅಪ್ಪಾನನ್ನು ನೋಡಲು ಬಂದ ಪ್ರೇಮಕ್ಕ, ಗುರುತು ಹಿಡಿದು, ನಂದೂನನ್ನು ಕರಕೊಂಡು ನನ್ನ ಕಡೆಗೆ ಬಂದಳು. ''ಬಾಪಣ್ಣ, ಲಗೂನ ಅಂಕೋಲಾಕ್ಕ ಹೋಗಿ, 'ಪಾರಿವಾಳದ ರಕ್ತ'ದ ಔಷಧಿ ತರಬೇಕು. ಅಂದ್ರನೂ ಅಪ್ಪಗ ಅರಾಮ ಆಗೂದು ಅಂತ''. ಮಿಣ-ಮಿಣ ಉರಿಯುತ್ತಿದ್ದ ಬಲ್ಬಿನ ಬೆಳಕಿನಲ್ಲಿ ಕಂಡ ಅವ್ವನ ಕಡೆಗೆ, ಒತ್ತರದ ಹೆಜ್ಜೆ ಇಟ್ಟು ಹೋದೆ. ಅಂದಿನಂತೆ ಇಂದೂ, ಏನೂ ತಿಳಿಯದೇ ಯಾವ ಭಾವನೆಯನ್ನೂ ವ್ಯಕ್ತ ಮಾಡದೆ ಕುಳಿತ ಅವ್ವನನ್ನು ನೋಡಿ ಕರುಳು ಕಿತ್ತು ಬಂತು. ತತ್‌ಕ್ಷಣ ಹಾಗೂ ಮೊದಲನೇ ಸಲ ತಾನು ಊರು ಬಿಟ್ಟು ಓಡಿಹೋಗಿದ್ದುದು ಅಕ್ಷಮ್ಯ ಅಪರಾಧವೆನಿಸಿತು. ಅಲ್ಲಿಂದ ಹೆಂಡತಿ ಹಾಗೂ ಮಗನೊಂದಿಗೆ ಅಪ್ಪಾ ಮಲಗಿದ್ದ ಕೋಣೆಗೆ ಹೋದೆ. ಈಗಲೂ, ಅಪ್ಪಾ, ಅವನ ಇರುವಿಕೆ, ತನಗೆಲ್ಲೂ ತಾಗದ ಬೇರೆ ಲೋಕವೇ ಅನಿಸಿತು. ಮೈ ಮೇಲೆ ಹಸಿರು ಶಾಲು ಹೊದಿಸಿದ್ದರಿಂದ, ಅಪ್ಪಾನ ಮುಖ ಅಷ್ಟೇ ಕಾಣುತ್ತಿತ್ತು. ಬೆಳೆದ ಗಡ್ಡದ ನಡುವೆಯೂ ಬಾಯಿ, ಬಲಗಡೆಗೆ ಸತ್ವಹೀನವಾಗಿ ಜೋತು ಬಿದ್ದಿತ್ತು. ತೆರೆದ ಕಣ್ಣುಗಳಿಂದ ತನ್ನನ್ನು ಮಿಕಿಮಿಕಿ ನೋಡುತ್ತಿದ್ದ ಅಪ್ಪಾ, ಎನಿಸಿತು. ಈ ಮನುಷ್ಯನಿಗೆ, ಈ ಹೊತ್ತಿನಲ್ಲಾದರೂ ನನ್ನ ಪ್ರೀತಿ ಬೇಕು ಎನಿಸಿತೇ ಎಂಬುದು ತಿಳಿಯಲಿಲ್ಲ. ಹೆಂಡತಿ ಮಗನನ್ನು ಅಕ್ಕನ ವಶಕ್ಕೆ ಕೊಟ್ಟು, ಅಂಕೋಲೆಗೆ ಹೋಗುವ ಧಾರವಾಡದ ಬಸ್ಸು ಹತ್ತಲು ಸ್ಟ್ಯಾಂಡಿಗೆ ಹೋದೆ. ಆ ಕಡೆಯಿಂದ, ಈ ಕಡೆಯಿಂದ ಒಂದೊಂದು ಬಸ್ಸು ಏಕಕಾಲಕ್ಕೆ ಬಂದವು. ನಾನು, ನನ್ನ ಬಸ್ಸು ಹತ್ತಲು ಅವಸರದಿಂದ ಆ ಕಡೆ ನಡೆಯುತ್ತಿದ್ದಾಗ, ಈ ಕಡೆಯಿಂದ ಬಂದ, ಬಸ್ಸಿನಿಂದ ಇಳಿದ ಸುಮಾರು ಐವತ್ತು ವರ್ಷದ ಸ್ಫುರದ್ರೂಪಿ ಹೆಣ್ಣು ಮಗಳೊಬ್ಬಳು, ತಲೆ ತಗ್ಗಿಸಿಕೊಂಡು ಊರ ಕಡೆಗೆ ಹೆಜ್ಜೆ ಹಾಕುತ್ತಿದ್ದುದು ಲಕ್ಷ್ಯಕ್ಕೆ ಬಂತು. ನಾನು ಬಸ್ಸು ಹತ್ತಿ, ಹತ್ತು ಹೆಜ್ಜೆ ಮುಂದೆ ಚಲಿಸುವವರೆಗೂ ಆ ಹೆಣ್ಣು ಮಗಳು ನಡೆಯುತ್ತಿದ್ದುದು ಕಾಣಿಸಿತು. ಬಸ್ಸು ಇನ್ನೂ ಹತ್ತು ಹೆಜ್ಜೆ ಮುಂದೆ ಹೋದಾಗ ಥಟ್ಟನೆ ಹೊಳೆಯಿತು, ಆ ಹೆಣ್ಣುಮಗಳು ಮೋಹಿತೆಯರ ಗೌರಿ ಎಂದು.



ನನ್ನ ಪಾಲಿಗೆ ಕಥೆ ಎಂದರೆ; ವಿಸ್ತಾರವಾದ, ವೈವಿಧ್ಯಮಯ, ಕ್ಷಣ-ಕ್ಷಣಕ್ಕೂ ಬದಲಾಗುವ ಬದುಕಿನ ಕೆಲವೊಂದು ವಿಶಿಷ್ಟ ಅನುಭವಗಳನ್ನು ಹಿಡಿದು, ಅವುಗಳನ್ನು ಭಾಷೆಯಲ್ಲಿ ಮತ್ತೆ ಸೃಷ್ಟಿಸಿ ನೋಡಿ, ಎಲ್ಲಿಯಾದರೂ, ಏನಾದರೂ ಅರ್ಥ ಸಿಗಬಹುದೇ? ಎಂದು ನೋಡುವುದು

ದುಷ್ಯಂತ ನಾಡಗೌಡ



# ಕ್ಯಾನ್ವಾಸ್ ಪ್ಯಾಸರ್

■ ಜಯಂತ



ರವೀಶರ 'ಪೇಂಟೋಗ್ರಾಫ್'

'ಪೇಂಟಿಂಗ್ಸ್'-ಗೊತ್ತು. 'ಫೋಟೋಗ್ರಾಫ್ಸ್' ಗೊತ್ತು. ಆದರೆ 'ಪೇಂಟೋಗ್ರಾಫ್ಸ್'? -ಇದು ಛಾಯಾಗ್ರಾಹಕ ಕಾಸರವಳ್ಳಿ ರವೀಶರ ಸೊತ್ತು.

ಹೌದು. ನಿಪುಣ ಛಾಯಾಗ್ರಾಹಕರೆಂದು ಕನ್ನಡನಾಡಿನಲ್ಲಷ್ಟೇ ಅಲ್ಲ, ದೇಶ ವಿದೇಶಗಳ ತಜ್ಞರಿಂದ ಮನ್ನಣೆ ಪಡೆದ ಡಾ|| ಕಾಸರವಳ್ಳಿ ರವೀಶರು ತಮ್ಮ ''ಡಾರ್ಕ್‌ರೂಮ್''ನಲ್ಲಿ (ಛಾಯಾಗ್ರಹಕರು ನೆಗೆಟಿವ್‌ಗಳನ್ನು ತೊಳೆದು ಚಿತ್ರಗಳ ಪ್ರತಿ ತೆಗೆಯುವ ಕತ್ತಲ ಕೋಣೆ) ಕೂತು ಅಪೂರ್ವ ಕಲಾಕೃತಿಗಳನ್ನು ತಮ್ಮ ಕುಂಚದಿಂದಲ್ಲ, ಕ್ಯಾಮೆರಾದಿಂದ ಚಿತ್ರಿಸುತ್ತಿದ್ದರು. ಫಿಲ್ಮುಗಳನ್ನು ವಿವಿಧ ಬಗೆಯ ನಿಯಂತ್ರಿತ ಕಿರಣಗಳಿಗೊಡ್ಡಿ, ತನಗೆ ಬೇಕಾದ ವರ್ಣವಿನ್ಯಾಸಗಳನ್ನು ಸಂಯೋಜಿಸಿ, ಆಯತ ಗಳಿಗೆಯಲ್ಲಿ ಕ್ಲಿಕ್ಕಿಸುವ ವಿಶಿಷ್ಟ ಪ್ರಯೋಗವನ್ನು, ಎಲ್ಲರಿಗಿಂತ ಮುಂಚಿತವಾಗಿ, ಏಕಾಂಗಿಯಾಗಿ ಕೈಗೊಂಡಿದ್ದ ರವೀಶ್, ತಮ್ಮ ಪ್ರಯೋಗಗಳಿಗೆ ತಕ್ಕ ಮನ್ನಣೆ, ಸ್ಪಂದನ ಸಿಗುವ ಮುನ್ನವೇ 1995ರಲ್ಲಿ, ದುರದೃಷ್ಟಕರ ಪ್ರಸಂಗವೊಂದರಲ್ಲಿ ಸಿಲುಕಿ, ನಲ್ವತ್ತೆರಡರ ಹರೆಯದಲ್ಲೇ ದುರ್ಮರಣಕ್ಕೆ ಈಡಾದರು.

# "ಕತ್ತಲಕೋಣೆಯ ಏಕಲವ್ಯ"

## ಕಾಸರವಳ್ಳಿ ರವೀಶ್







ರವೀಶ್ ಸಂಯೋಜನೆಗಳು

ಎಲ್ಲಿ ನಪ್ಪಳವೂ ಹಸಿರೋ, ಅಂಥ ಮಲೆನಾಡಿನ, ಸುಸಂಸ್ಕೃತ ಕಾಸರವಳ್ಳಿ ಕುಟುಂಬದ ರವೀಶ (ಇವರ ಅಣ್ಣ, ಖ್ಯಾತ ಚಿತ್ರನಿರ್ದೇಶಕ ಗಿರೀಶ್ ಕಾಸರವಳ್ಳಿ), ಹುಟ್ಟಿದ ಕ್ಷಣದಿಂದಲೇ (1952), ಕಾಡಿನ ಋತುವೈಭವಗಳನ್ನು, ನಿಸರ್ಗರಮ್ಯತೆಯನ್ನು ಕಣ್ಣಿನಲ್ಲಿ ತುಂಬಿಕೊಂಡು ಬೆಳೆದವರು. ವಿದ್ಯಾಭ್ಯಾಸದಲ್ಲೂ ಚುರುಕಾಗಿದ್ದ ಹುಡುಗ, ಮೈಸೂರಿನಲ್ಲಿ ಮೆಡಿಕಲ್ ಓದುತ್ತಿದ್ದಾಗ, ಆತನ ಆಸಕ್ತಿ ಕೆರಳಿಸದ ಹವ್ಯಾಸಗಳೇ ಇರಲಿಲ್ಲ. ಮೆಂಡೊಲಿನ್ ಬಾರಿಸುವುದು, ಹಿಂದುಸ್ಥಾನೀ ಶಾಸ್ತ್ರೀಯ ಸಂಗೀತ, ಪಾಶ್ಚಿಮಾತ್ಯ ಸಂಗೀತ, ಭಾವಗೀತೆ, ಪೇಂಟಿಂಗು, ಸಾಹಿತ್ಯ, ಚರ್ಚಾಕೂಟ-ಎಲ್ಲದರಲ್ಲೂ ಮುಂದೆ, ಈ ಮೆಲುನುಡಿಯ, ಸ್ಫುರದ್ರೂಪಿ ತರುಣ.

ಇವನ ಉತ್ಸಾಹವನ್ನು ಗಮನಿಸಿದ ಆತನ ಪುಟ್ಟ ಬಾಡಿಗೆ ಕೋಣೆಯ ಮಾಲಿಕರಾಗಿದ್ದ ಗಣಪಯ್ಯ ಚಡಗ, ಒಂದು ದಿನ ಕರೆದು ತಮ್ಮ ಒಂದು ಕ್ಯಾಮೆರಾ ಕೊಟ್ಟು ಪ್ರೋತ್ಸಾಹಿಸಿದ್ದೇ, ಒಂದು ನೆಳಲು ಬೆಳಕಿನ ಕಲಾನಂಟಿಗೆ ನಾಂದಿಯಾಯಿತು. ಮತ್ತು ಸುಮಾರು ಈ ಸಮಯದಲ್ಲೇ, ಮೆಡಿಕಲ್ ಸಹಪಾಠಿ ನಿವೇದಿತಾರ ಜತೆಗಿನ ಸ್ನೇಹವೂ ಹೊಸ ಬಾಂಧವ್ಯ ಬೆಸೆಯುತ್ತಿತ್ತು.

## ಬಿಂಬ-ಪ್ರತಿಬಿಂಬಗಳ ಹೊರಾಂಗಣದಲ್ಲಿ

''ಆಗ, ಮನೆಯಿಂದ ಬರುತ್ತಿದ್ದ ಹಣದಲ್ಲಿ ಒಂದೂಟ ಕಡಿಮೆ ಮಾಡಿ, ಮಿಗಿಸಿಕೊಂಡು, ಪೇಂಟಿಂಗ್ ಸಾಮಗ್ರಿಗಳಿಗೆ, ಬಳಸಿಕೊಳ್ತಾ ಇದ್ರು. ಕಿಸೆಯಲ್ಲಿ ಉಳಿದಿರೋ ಚಿಲ್ಲರೆ ನಾಣ್ಯಗಳನ್ನು ಒಂದು ಡಬ್ಬಿಯಲ್ಲಿ ಹಾಕುತ್ತ ಆ ಡಬ್ಬಿ ತುಂಬಿದ್ದೇ, ಅದರಿಂದ ಫಿಲ್ಮ್‌ರೋಲ್ ತಗೋಳ್ಳೋರು''-ನೆನೆದ ಕಣ್ಣುಗಳಲ್ಲಿ ಈಗ ಹೇಳುತ್ತಾರೆ, ನಿವೇದಿತಾ. ''ಮೆಂಡೊಲಿನ್ ಬಾರಿಸೋಕೆ ತುಂಬ ಆಸೆ. ಆದರೆ ಕೊಳ್ಳೋಕೆ ಕಷ್ಟ ಅಂತ, ಮೆಂಡೊಲಿನ್ ನುಡಿಸುವಂಥ ಹುಡುಗನನ್ನ ಹುಡುಕಿ, ಆತನ ರೂಮ್‌ಮೇಟ್ ಆಗಿದ್ರು. ಆತ ಹೊರಗಡೆ ಹೋದಾಗ ಅದನ್ನು ನುಡಿಸುತ್ತಿದ್ದರು. ಯಾವ ವಿದ್ಯಾರ್ಥಿಗಳ ಮನೆಗೆ ಹೋದರೆ ಒಳ್ಳೆ ರೆಕಾರ್ಡು ಕೇಳಲು ಅಥವಾ ಒಳ್ಳೆ ಫೋಟೋಗ್ರಫಿ ಪುಸ್ತಕಗಳನ್ನು ನೋಡಲು ಸಿಗಬಹುದೋ-ಅಂಥ ಹುಡುಗರ ಜತೆ ಹಟದಿಂದ ದೋಸ್ತಿ ಮಾಡೋರು. ಸದಾ ನಗುತ್ತ ನಗಿಸುತ್ತ, ತನ್ನ ಬಗ್ಗೆನೇ ಉಡಾಫೆಯಿಂದ ಚೇಷ್ಟೆ ಮಾಡ್ತಾ



ಇರೋ ಅವರ್ನ ಕಂಡ್ರೆ, ಎಲ್ರಿಗೂ ಖುಷಿ ಇತ್ತು. ಇದ್ದಲ್ಲೇ ಹೇಗೋ ಹೊಂದಿಸಿಕೊಂಡು-ನಾವು ಮೈಸೂರಲ್ಲಿ ಕ್ಲಿನಿಕ್ ಶುರುಮಾಡೋ ಹೊತ್ತಿಗೆ-ಚಿತ್ರಗಳನ್ನು ಸ್ವಂತ ಡೆವಲಪ್ ಮಾಡುವ ಡಾರ್ಕ್‌ರೂಮನ್ನೂ ಸಿದ್ಧಮಾಡಿ ಕೊಂಡರು.''

ಅದಾಗಲೇ ರವೀಶ್‌ಗೆ, ನಾಡಿನ ಚಿತ್ರ ಕಲಾವಿದರೊಂದಿಗೆ ಸ್ನೇಹದ ಸಹಯೋಗ ಶುರುವಾಗಿತ್ತು. ಕರಾವಳಿಯಿಂದ ಹೊರಡುತ್ತಿದ್ದ 'ಉದಯವಾಣಿ'ಯ ಸಂಪಾದಕ ವರ್ಗದಲ್ಲಿದ್ದ ಈಶ್ವರಯ್ಯ-ಅವರೂ ಸ್ವತಃ ಛಾಯಾಗ್ರಹಣದಲ್ಲಿ ತೀವ್ರ ಆಸಕ್ತಿ ಇದ್ದವರು-ತುಂಬಾ ಪ್ರೋತ್ಸಾಹ ಕೊಟ್ಟರು. ಹೀಗಾಗಿ ಸ್ಥಿರ ಛಾಯಾಗ್ರಹಣದ ಕುರಿತು, ಜನಸಾಮಾನ್ಯನಿಗೂ ತಿಳಿಯುವಂತೆ ರವೀಶ ಲೇಖನ ಮಾಲಿಕೆಯನ್ನು ಬರೆಯತೊಡಗಿದರು. (ಇದು ಈಗ ಲಲಿತಕಲಾ ಅಕಾಡಮಿಯಿಂದ ವಿಸ್ತೃತವಾದ ಉಪಯುಕ್ತ ಪುಸ್ತಕವಾಗಿ ಹೊರಬಂದಿದೆ). ಮೈಸೂರಿನಿಂದ ಲಲಿತ ಕಲೆಗಳ ಬಗ್ಗೆ 'ನಿಷಾದ' ಎಂಬ ಖಾಸಗಿ ಮಾಸಪತ್ರಿಕೆಯೊಂದನ್ನು ಸ್ವತಃ ಸಂಪಾದಿಸಿ, ವಿನ್ಯಾಸಗೊಳಿಸಿ, ಬರೆದು-ಹೊರಡಿಸಿದರು. 'ನಿಷಾದ' ಆ ಕಾಲದ, ನಾಡಿನ ಎಲ್ಲ ಚಿತ್ರಕಲಾವಿದರ ಅಭಿವ್ಯಕ್ತಿಯ ಏಕಮೇವ ಆಪ್ತ ವೇದಿಕೆಯಾಯಿತು. ಮನಸ್ಸು ಮಾಡಿದ್ದರೆ ಪೇಂಟರ್, ಸಾಹಿತಿ, ಪೂರ್ಣಾವಧಿ ಸಂಗೀತಗಾರ ಏನೆಲ್ಲ ಆಗಬಹುದಾಗಿದ್ದ ರವೀಶ್ ಈಗ ವೈದ್ಯಕೀಯ ವೃತ್ತಿಯ ಜತೆ ತಮ್ಮ ಸರ್ವಸ್ವವನ್ನು ಪೂರ್ತಿಯಾಗಿ 'ಛಾಯಾಗ್ರಹಣ''ಕ್ಕೆ ಧಾರೆಯೆರೆದು ಕೊಂಡರು. ಗಂಡಹೆಂಡತಿ ಇಬ್ಬರೂ ಚಿಕ್ಕಮಗಳೂರಿನಲ್ಲಿ ಕ್ಲಿನಿಕ್ ಆರಂಭಿಸಿದಾಗ-ಅಲ್ಲಿನ ಅದ್ಭುತ ಹೊರಾಂಗಣ ರವೀಶರನ್ನು ಸೆಳೆಯತೊಡಗಿತು. ದಿನವಿಡೀ, ಗುಡ್ಡ, ಬೆಟ್ಟ, ಮರ, ಕಾಡು, ಕಾಲುವೆ, ಮೋಡ, ಬಿಂಬ-ಪ್ರತಿಬಿಂಬಗಳ ತಮ್ಮ ಪ್ರಪಂಚದಲ್ಲಿ, ಬೆಳಕಿನ ಪರಿಳಿತಗೊಳೊಂದಿಗೆ, ವಿಧವಿಧ ಆಟಗಳನ್ನು ಆಡುತ್ತ ರವೀಶ, ತಮ್ಮ ಕ್ಯಾಮೆರಾ ಕಣ್ಣಿನಲ್ಲಿ ಪ್ರಕೃತಿಯನ್ನು ಸೆರೆ ಹೊಡೆಯತೊಡಗಿದರು. ದಿನವಿಡೀ ಹೊರಾಂಗಣದಲ್ಲಿ ಅಲೆದು, ಮನೆಗೆ ಬಂದು, ತಮ್ಮ 'ಕತ್ತಲ ಕೋಣೆ' ಸೇರಿದರೆಂದರೆ ನಡುರಾತ್ರಿಯತನಕ 'ಡೆವಲಪಿಂಗ್'ನಲ್ಲಿ ತೊಡಗಿರುತ್ತಿದ್ದರು. ಕನ್ನಡದ ಪತ್ರಿಕೆಗಳಲ್ಲಂತೂ, ಛಾಯಾಚಿತ್ರಗಳ ಸಂಯೋಜನೆ ನೋಡಿಯೇ ಇದು ರವೀಶ್ ಚಿತ್ರ ಎಂದು ಹೇಳಬಹುದಾದಷ್ಟು ಅವರ ಛಾಪು ನೆಲೆಯಾಯಿತು. ಅವರ 5,000ಕ್ಕೂ ಮಿಕ್ಕಿದ ಛಾಯಾಚಿತ್ರಗಳು, ಕನ್ನಡ, ಇಂಗ್ಲಿಷಿನ ವಿವಿಧ ಪತ್ರಿಕೆಗಳಲ್ಲಿ, ಪ್ರದರ್ಶನಗಳಲ್ಲಿ ಪ್ರಕಟಗೊಂಡವು.

## 'ಪೇಂಟೋಗ್ರಫಿ'ಯ ಆವಾಹನೆ

''ಛಾಯಾಗ್ರಹಣದಲ್ಲಿ ತೊಡಗಿದ್ದಾಗ ಅಗಾಧ ತಾಳ್ಮೆ, ಸಹನೆ, ಮೌನದ ಮೂರ್ತಿಯಾದರೂ ರವೀಶರ ಒಳಗೊಬ್ಬ ತೀವ್ರ ಚಡಪಡಿಸುವ, ಹೊಸತನಕ್ಕೆ ಹಾತೊರೆಯುವ ಅಲೆಮಾರಿ ಇದ್ದ. ಹೀಗಾಗಿಯೇ ನಾವು ಬೆಂಗಳೂರಿಗೆ ಬಂದೆವು. ಇಲ್ಲಂತೂ, ಸ್ಕ್ರೀನ್‌ಪ್ರಿಂಟಿಂಗು, ಕಂಪ್ಯೂಟರು, ಗ್ರಾಫಿಕ್ಸ್ ಅಂತ ಅವರು ನಡೆಸದ ಪ್ರಯೋಗಗಳೇ ಇರಲಿಲ್ಲ. ಅವರ ಕಾಲಕ್ಕಿಂತ ಅವರೆಷ್ಟೋ ಮುಂದಿದ್ದ ಹಾಗಿತ್ತು. ಏನೋ

ನಮ್ಮ ವಿನಂತಿಯನ್ನು ಮನ್ನಿಸಿ, ರವೀಶರ ಕಲಾಕೃತಿಗಳನ್ನು ಬಳಸಿಕೊಳ್ಳಲು ಕೊಟ್ಟು, ನಮ್ಮೊಂದಿಗೆ ಮಾತನಾಡಿದ ಡಾ|| ನಿವೇದಿತಾ, ಸುಶ್ರುತ ಮತ್ತು ಈ ಭೇಟಿಗೆ ನೆರವಾದ ಎಸ್. ದಿವಾಕರ್ ಅವರಿಗೆ ಧನ್ಯವಾದಗಳು.



ನಿವೇದಿತಾ ಮತ್ತು ಸುಶ್ರುತನೊಂದಿಗೆ



'ನನ್ನ ಕುಟುಂಬ' - ರವೀಶರ ಕಂಪ್ಯೂಟರ್ ಕಲಾಕೃತಿ

ಭಾವಂತ ಇತ್ತು. 'ಇದಲ್ಲ', 'ಇದಲ್ಲ' ಅನ್ನುತ್ತ ಅವರ ಮನಸ್ಸು ಹೊಸ ರೂಪಗಳನ್ನರಸುತ್ತಿತ್ತು. ಒಂದು ದಿನ ಹಠಾತ್ತನೆ ''ಪೇಂಟೋಗ್ರಾಫ್''ನ ಸಾಧ್ಯತೆ ಅವರನ್ನು ಕೆರಳಿಸಿದಾಗಂತೂ, ಹೊಸ ಆಟಿಗೆ ಸಿಕ್ಕ ಮಗುವಿನಂತೆ, ಪೂರ್ತಿ ಅದಕ್ಕೇ ಶರಣಾದರು. ಡಾರ್ಕ್‌ರೂಮಿನಲ್ಲಿ ಕೂತುಕೊಂಡು, ಅನ್ನ ನಿದ್ರೆಗಳ ಪರಿವೆಯಿಲ್ಲದೆ, ಚಿತ್ರ-ವಿಚಿತ್ರ, ವರ್ಣಮಯ ಪ್ರಿಂಟುಗಳನ್ನು ತೆಗೆಯತೊಡಗಿದರು. ಅಜ್ಞಾತನಾಗಿದ್ದ ಅವರೊಳಗಿನ 'ಪೇಂಟರ್' ಈಗ ಜಾಗ್ರತನಾಗಿದ್ದ. ಯಾವ ತರಬೇತಿ, ಶಿಕ್ಷಣ, ಗುರುಗಳ ಮಾರ್ಗದರ್ಶನವಿಲ್ಲದೆ, ಎಡವುತ್ತ, ತಪ್ಪುಗಳನ್ನು ತಿದ್ದಿಕೊಳ್ಳುತ್ತ, ಅಸಂಖ್ಯ 'ಪೇಂಟೋಗ್ರಾಫ್'ಗಳನ್ನು ಮಾಡಿದರು. ಅವರ ಸಹಕಲಾವಿದರಿಂದ ನಿರೀಕ್ಷಿತ ಪ್ರತಿಸ್ಪಂದನ ಸಿಗದೇ ನಿರಾಸೆಗೊಂಡರೂ, 'ಒಂದು ದಿನ ನನ್ನ ಈ ಪ್ರಯತ್ನ ಜನಕ್ಕೆ ಗೊತ್ತಾಗುತ್ತೆ. ಆಗ ನಾನಿರೋದಿಲ್ಲ' ಎಂದು ತಮಾಷೆ ಮಾಡುತ್ತಿದ್ದರು''- ಎನ್ನುವ ಡಾ॥ ನಿವೇದಿತಾ ಪತಿ ಮತ್ತು ಹನ್ನೆರಡರ ಹರೆಯದ ಮುದ್ದು ಮಗ ಸುಶ್ರುತನೊಂದಿಗಿನ ತಮ್ಮ ಬೆಚ್ಚಗಿನ ಸಂಸಾರಕ್ಕೆ ಕಿಚ್ಚುಬಿದ್ದ ಅಧ್ಯಾಯವನ್ನು ಹೇಳುವಾಗ ಅಳುಕುವುದಿಲ್ಲ.

## ಕ್ಯಾಮೆರಾ ಹಿಂದಡಗಿದ ನೆರಳು

ಫೋಟೊಗ್ರಫಿಗೆ ಸಂಬಂಧಿಸಿದ ಉಪಕರಣವೊಂದರ ವಿಲೇವಾರಿಯ ನಿಮಿತ್ತ ಒಂದು ಮುಂಜಾನೆ ಮನೆಯಿಂದ ಹೋದ ರವೀಶ, ದಾರುಣ ರೀತಿಯಲ್ಲಿ ಹತ್ಯೆಗೊಳಗಾದರು. ಇದರ ಪರಿವೆಯೇ ಇಲ್ಲದೆ, ಶಾಲೆಯಿಂದ ಬರಲಿದ್ದ ಮಗನಿಗಾಗಿ ಮನೆಯಲ್ಲಿ ಕಾಯುತ್ತಿದ್ದ ನಿವೇದಿತಾರ ಮೇಲೂ ಭೀಕರ

### ನನ್ನ ಕ್ಷಣ

'ಕಂಡದ್ದ'ನ್ನೆಲ್ಲಾ ಗೆರೆ ಕೊರೆದಂತೆ ದಾಖಲಿಸುವ ಕ್ಯಾಮರಾ, 'ಕಾಣದ್ದ'ನ್ನೂ ಸೆರೆ ಹಿಡಿಯುವಂತಾದರೆ?... ನಿಸರ್ಗದ ಅಮೂರ್ತ ಚಿತ್ರಗಳನ್ನು ಮನಸ್ಸಿನ ರೀಲುಗಳಲ್ಲಿ ತುಂಬಿಟ್ಟುಕೊಂಡ ನನಗೆ ಒಂದೇ ಗೀಳು: ನಿರ್ಜೀವವಾಗಿ, ಚಲನಶೀಲತೆಯಿಲ್ಲದೆ ಮೈದಾಳುವ ಛಾಯಾಚಿತ್ರಗಳಲ್ಲಿ ಸಮಕಾಲೀನ ಚಿತ್ರಕಲೆಯ ತಂತ್ರಗಳನ್ನು, ವಿಧಾನಗಳನ್ನು ಬಳಸಿ ಅವನ್ನು ಅಮೂರ್ತವಾಗಿ 'ಮೂರ್ತೀಕರಿಸುವುದು'! ನನ್ನ ಮನಸ್ಸಿನ ಚಿತ್ರಗಳಿಗೆ ತಾಳೆಯಾಗುವಂತೆ ಸಂಯೋಜಿಸುವುದು.

ಫೋಟೋಗ್ರಫಿ ಕೈಲಾಗದೆ ನಾನು ಈ ಎಲ್ಲಾ ಹುಚ್ಚಾಟಗಳಿಗೆ ಮುಂದಾದೆನೆ?... ಖಂಡಿತಾ ಅಲ್ಲ. ಅತ್ಯಾಧುನಿಕ ಕ್ಯಾಮರಾದ ಶಟರ್‌ಗಳು ಸೆಕೆಂಡ್‌ನ ಸಾವಿರದ ಒಂದನೆ ಪಾಲಿನಲ್ಲಿ 'ಏನನ್ನೋ' ಸೆರೆಹಿಡಿದು ನನ್ನ 'ಪೇಂಟೋಗ್ರಫಿ'ಗೆ ಸಹಕರಿಸಿವೆ. ಬಣ್ಣ, ಸಂಯೋಜನೆಗಳನ್ನು ಮುಂದಾಗಿಯೇ ನಿರ್ಧರಿಸಿ, ಖಾತ್ರಿಪಡಿಸಿಕೊಳ್ಳುವ ತಾಂತ್ರಿಕ ವಿಧಾನಗಳು ನನ್ನ ಸಹಾಯಕ್ಕೆ ಬಂದಿವೆ. ನೆಗೆಟಿವ್‌ಗಳನ್ನು ಸಾಂದ್ರೀಕರಿಸುವ ವಿಧಾನದಲ್ಲಿ ನನಗೆ ಬೇಕೆನಿಸಿದ ಬಣ್ಣ, ಬೆಡಗು, ಬೆರಗು, ಮೈದಾಳಿದೆ... ಹೀಗಾಗಿ ಈ ನನ್ನ ಕೃತಿಗಳು ನಾನೇ ಆರಿಸಿ, ಅಕ್ಕರೆಯಿಂದ ರೂಪಿಸಿ ಜೀವ ತುಂಬಿದವುಗಳೇ ಹೊರತು ಆಕಸ್ಮಾತ್ ಸಂಭವಿಸಿದ ಕಾಕತಾಳೀಯ ಅದ್ಭುತಗಳಂತೂ ಎಂದಿಗೂ ಅಲ್ಲ.

- ರವೀಶ್




ಪೇಂಟೋಗ್ರಾಫ್‌ಗಳು

ಹಲ್ಲೆಯಾಯಿತು. ಸುತ್ತಿಗೆ ಏಟಿನಿಂದ ಮುಖದ ಬಲಭಾಗ ಪೂರ್ತಿ ಜಜ್ಜಿ, ಅರಿವು ಕಳಕೊಂಡ ಅವರನ್ನು ಯಾರೋ ಆಸ್ಪತ್ರೆಗೆ ಸಾಗಿಸಿದರು. ಹತ್ತು ದಿನ ಕತ್ತಲು ಬೆಳಕುಗಳ ನಡುವೆ ಓಲಾಡಿದ ನಿವೇದಿತಾ, ಮುದ್ದು ಸುಶ್ರುತನನ್ನು ಬೆಳೆಸುವ ಏಕಮೇವ ಸಂಕಲ್ಪದಿಂದ ಕ್ರಮೇಣ ಚೇತರಿಸಿಕೊಂಡರು.

ಇತರರಿಗೆ ಒಳಿತನ್ನೇ ಹಾರೈಸಿದ, ತನ್ನ ಪ್ರತಿಭೆಯನ್ನು, ಜ್ಞಾನವನ್ನು ಇತರರೊಂದಿಗೆ ಹಂಚಿಕೊಳ್ಳಲು ಎಂದೂ ಹಿಂಜರಿಯದ, ರವೀಶರ ದುರ್ಮರಣ, ನಾಡಿನ ಸೂಕ್ಷ್ಮಜ್ಞರನ್ನೆಲ್ಲ ಅಲ್ಲಾಡಿಸಿಬಿಟ್ಟಿತು.

## ಮರಳಿ ಕಟ್ಟಲೇ ಬೇಕು ಗೂಡು

ಇದಾಗಿ ಈಗ ಐದುವರ್ಷ. ''ನನಗಿನ್ನೂ ನ್ಯಾಯ ದೊರಕಿಲ್ಲ. ಕೇಸು ಇನ್ನೂ ನಡೀತಾನೇ ಇದೆ. ನಮಗೆ ಆಜನ್ಮ ಶಿಕ್ಷೆ ವಿಧಿಸಲಾಗಿದೆಯೇನೋ ಅನಿಸ್ತಾ ಇದೆ'' ಎನ್ನುವ ನಿವೇದಿತಾ, ಥಟ್ಟನೆ ಹೊಸ ಆವೇಶದಿಂದ ''ಸುಶ್ರುತ ತುಂಬಾ ಜಾಣ, ಅಪ್ಪನ ಪ್ರತಿಭೆ, ವಿವೇಕ ಎಲ್ಲಾ ಅವನಲ್ಲಿದೆ. ಎಸ್ಸೆಸೆಲ್ಸಿಯಲ್ಲಿ ಶೇ.95 ತೆಗೆದ. ಸಂಗೀತವೂ ಅವನಿಗೆ ಸಲೀಸಾಗಿ ಬರುತ್ತಾ ಇದೆ. ಅವನು ಇಂಜನಿಯರಿಂಗ್ ಅಭ್ಯಾಸವನ್ನು ಶ್ರದ್ಧೆಯಿಂದ ಮಾಡಬೇಕು. ಹವ್ಯಾಸಗಳನ್ನೆಲ್ಲ ಸೆಕೆಂಡರಿಯಾಗಿ ಇಟ್ಟುಕೊಳ್ಳಬೇಕು. ಭವಿಷ್ಯ ನೆಲೆಗೊಂಡ ಮೇಲೆ ಅವುಗಳನ್ನು ಬೆಳೆಸಿಕೊಳ್ಳಬಹುದು. ಹವ್ಯಾಸವನ್ನೇ ವೃತ್ತಿಯಾಗಿಸುವ ಸ್ಥಿತಿ, ಅದೃಷ್ಟ ನಮಗಿಲ್ಲ. ಯಾಕೋ ಧೈರ್ಯವೂ ಇಲ್ಲ'' ಎಂದು ಗಂಭೀರವಾಗುತ್ತಾರೆ. ಎಂಥ ತಳಮಳಗಳನ್ನೂ ಅವಿತಿಟ್ಟುಕೊಂಡ ವಿಚಿತ್ರ ತಾಟಸ್ಥ್ಯದಲ್ಲಿ, ಮರಳಿ ಬದುಕನ್ನು ಕಟ್ಟುವ ದಿಟ್ಟತನದ ಪ್ರತಿರೂಪವಾಗಿ ಕಾಣಿಸುತ್ತಾರೆ.



ಅಪ್ಪನ ಜತೆ ಸದಾ ಡಾರ್ಕ್‌ರೂಮಿನಲ್ಲಿ ಕೂತು ವಿಸ್ಮಯಗಳನ್ನು ನೋಡುತ್ತಿದ್ದ ಹುಡುಗ, ಅಂದು ಶಾಲೆಯಿಂದ ಬಂದ ಮಧ್ಯಾಹ್ನ, ಮನೆ ತುಂಬ ರಕ್ತ ಕಂಡು ಬಿಳಚಿಕೊಂಡಿದ್ದ ಪೋರ-ಈಗೊಬ್ಬ ಉಜ್ವಲ ಇಂಜನಿಯರಿಂಗ್ ವಿದ್ಯಾರ್ಥಿ. ಶೇಷಾದ್ರಿ ಗವಾಯಿಗಳ ಶಾಲೆಯಲ್ಲಿ ಹಿಂದುಸ್ತಾನಿ ಸಂಗೀತ ಕಲಿಯುತ್ತಿದ್ದಾನೆ. ಅಪ್ಪನ ಕೀಬೋರ್ಡಿನಲ್ಲಿ 'ದೇಶ್' ರಾಗದ ತನ್ನದೇ ಸಂಯೋಜನೆಯನ್ನು ನುಡಿಸುತ್ತಾನೆ.

ಬಿರುಗಾಳಿ, ಮಳೆಗೆ ಗೂಡು ಧ್ವಂಸಗೊಂಡು ಉದುರಿದ, ತೊಯ್ದ ಹಕ್ಕಿಯೊಂದು, ತನ್ನ ಮರಿಗಾಗಿ ಮೆಲ್ಲಗೆ ಹೊಸ ಕಡ್ಡಿಗಳನ್ನು ಹೆಕ್ಕುತ್ತಿದೆ. ಮರಿಯ ಇಂಚರದಲ್ಲಿ ಬಾನಿಗೆ ಹೊಸ ಬಣ್ಣಗಳು ಮೂಡುತ್ತಿವೆ.




# ನೀಡುವ ಕೈ

ಸುನಂದಾ ಬೆಳಗಾಂವಕರ

-ಪೂರ್ವಾರ್ಧ-

ಮಂಜರಿ ಮಾವಿನವೃಕ್ಷದಂತೆ ನನ್ನ ತಲೆ ಬಾಗಿತ್ತು. ವಿಚಾರಗಳು ಗುಯಿಂಗುಟ್ಟುತ್ತಿದ್ದವು. ದಿನತುಂಬಿದ ಬಸರಿ ಹೆಂಗಸಿನಂತೆ ಅದು ತೇಕುತ್ತಿತ್ತು. ಇಂದು ಬರೆಯಲೇ ಬೇಕು ಎಂದು ನಿರ್ಧರಿಸಿ ಬರೆಯಲು ಕುಳಿತೆ. ಬರೆಯುವುದು ನಮ್ಮಪ್ಪನ ಮನೆಯದಲ್ಲ. ಅದು ಅಷ್ಟು ಸುಲಭದ ಕೆಲಸವಲ್ಲ. ನನಗೆಂದೋ ತಿಳಿದಿತ್ತು. ಆದರೆ ಬರೆಯಬಲ್ಲೆ ಎಂಬ ಮನಸ್ಸಿನ ಘಮಿಂಡಿ ಬಂದಿದೆಯಲ್ಲ, ಅದು ಕೇಳೀತೇ? ತಾಸುಗಟ್ಟಲೇ ಹಾಳೆಗಳೆದುರು ಪೆನ್ಸಿಲ್ ಹಿಡಿದು ಕುಳಿತರೂ, ಒಂದಕ್ಷರ ಮೂಡಲಿಲ್ಲ. ತುಳಸಿ ವೃಂದಾವನ, ಬಿಲ್ವಪತ್ರೆ, ತೆಂಗಿನಕಾಯಿ, ಶಂಖ, ಚಕ್ರ, ಪದ್ಮ, ಗೋಪಾದಗಳ ಅಕ್ಕಿಯಿಟ್ಟು ರಂಗವಲ್ಲಿ ಬಿಡಿಸಿದೆ. ವಿಘ್ನೇಶ್ವರ, ಪ್ರಾಣದೇವರ ಮೂರ್ತಿ ಚಿತ್ರಿಸಿದೆ. ಗಣಪನ ಕೈಯಲ್ಲಿ ಮೋದಕವಿಟ್ಟೆ. ಸೊಂಡಿಲ 'ತಿನ್ನೋ' ಎಂದೆ. ಹಣಮಪ್ಪನ ಬಾಲಕ್ಕೆ ಗಂಟೆ ಕಟ್ಟಿದೆ. 'ಬಾಲಣ್ಣ ಬಾರಿಸೋ' ಎಂದೆ.

ಸೊಂಡಿಲ ಗಬಗಬ ಮೋದಕ ತಿಂದಂತಾಗಿ, ಬಾಲಣ್ಣ ಗಣ ಗಣ ಗಂಟೆ ಬಾರಿಸಿದಂತಾಗಿ, ನನ್ನಷ್ಟಕ್ಕೆ ನಾನೇ ಕಿಲಿಕಿಲಿ ನಕ್ಕೆ. ಆಗ ಕಣ್ಣೆದುರು ಭಂಡಿವಾಡದ ಕಿಟ್ಟದ ಹಣಮಪ್ಪ ಮಿಂಚಿನಂತೆ ಮಿಂಚಿದ. ಅಜಾನುಬಾಹು, ಮಣ್ಣು ಬಣ್ಣದ, ತುಂಬು ವ್ಯಕ್ತಿತ್ವದ ನಿಂಗನಗೌಡರು ಆತನ ಹಿಂದೆಯೇ ನುಸುಳಿ ಬಂದು ಸರಸರನೇ ಸರಿದು ಹೋದರು. ನಾನು ನಿಂಗನಗೌಡರನ್ನು ನೋಡಿದಾಗ ಬಹಳ ಚಿಕ್ಕವಳಿದ್ದೆ. ಆದರೆ ಅವರ ನೆನಪು ಮಾತ್ರ, ಈ ದಿನದವರೆಗೂ ಮಾಸಿಲ್ಲ. ಕಾರಣ, ಅವರನ್ನು ಒಮ್ಮೆ ನೋಡಿದವ ಮರೆಯುವುದೇ ಅಸಾಧ್ಯ. ಅಂಥ ಹಿರಿಜೀವ ಅವರು! ನಮ್ಮ ಮನೆಯಲ್ಲಿ ಎಲ್ಲರಿಗೂ ಅವರು ಪೂಜನೀಯರು, ಹಿರಿಯರು. ನನ್ನ ಅಜ್ಜಿಯನ್ನು ಮೊದಲುಗೊಂಡು ನಾವೆಲ್ಲರೂ ಅವರ ಪಾದಮುಟ್ಟಿ ನಮಸ್ಕರಿಸುತ್ತಿದ್ದೆವು. ನಮ್ಮ ಮನೆಯ ಯಾವುದೇ ಶುಭಕಾರ್ಯವಿರಲಿ, ಅಜ್ಜಿ ತಂದೆಯವರನ್ನು ಭಂಡಿವಾಡಕ್ಕೆ ಕಳಿಸಿ, ನಿಂಗನಗೌಡರಿಗೆ ನಮಸ್ಕಾರ ಮಾಡಿ ಆಶೀರ್ವಾದ ಪಡೆದುಬರಲು ಆದೇಶಿಸುತ್ತಿದ್ದಳು.

ಹುಬ್ಬಳ್ಳಿ ತಾಲೂಕಿನ ಭಂಡಿವಾಡ ನಿಂಗನಗೌಡರ ಊರು. ಆ ಊರಿನ ಅಧಿದೇವತೆ ಹಣಮಪ್ಪನ ಪರಮಭಕ್ತರು. ವಾಯುದೇವರು ತ್ರೇತಾಯುಗದಲ್ಲಿ ಹಣಮಂತನ ಅವತಾರ ತಾಳಿ, ಶ್ರೀರಾಮ

ದಾಸನಾಗಿ ಸೇವೆಸಲ್ಲಿಸಿದ. ವಾಯುದೇವರ ಸರಿಸಮಾನರು ಯಾರೂ ಇಲ್ಲ. ಕಾರಣ ಅವರು ಜೀವೋತ್ತಮರು. ಭಂಡಿವಾಡದ ಹಣಮಪ್ಪನ ಗುಡಿ ಬಹಳ ಪುರಾತನದ್ದು. ಶಿರಗುಪ್ಪಿಯ ಮುದುಕಿಯೊಬ್ಬಳಿಗೆ, ಆಕೆಯ ಹಿತ್ತಲಿನ ಕುಳ್ಳುಬಾನದಲ್ಲಿ ದರ್ಶನ ನೀಡಿದನಂತೆ. ಆತ 'ಕಿಟ್ಟದ ಹಣಮಪ್ಪ'ನೆಂದು ಪ್ರಸಿದ್ಧ.

ಭಂಡಿವಾಡದಿಂದ ತುಸು ದೂರವಿದ್ದ ಈ ಮುದುಕಿ, ಪ್ರತಿದಿನ ಹಣಮಪ್ಪನ ದರ್ಶನಕ್ಕೆ ನಡೆದು ಬರುತ್ತಿದ್ದಳು. ಅವನ ದರ್ಶನವಾಗದೇ ಅವಳು ತುತ್ತು ಎತ್ತುತ್ತಿರಲಿಲ್ಲ. ಒಂದು ದಿನ ಹಳ್ಳ ತುಂಬಿದ ಕಾರಣ, ದಾಟಲಾಗದ ಆ ಮುದುಕಿಯ ಕನಸಿನಲ್ಲಿ ಹಣಮಪ್ಪ ಕಾಣಿಸಿಕೊಂಡನಂತೆ. ನಿನ್ನ ಹಿತ್ತಲ ಕುಳ್ಳು ಬಾನದಲ್ಲಿಯೇ ಇದ್ದೇನೆಂದು ಹೇಳಿದನಂತೆ. ಹೀಗಾಗಿ ಆ ಮುದುಕಿ ಸೆಗಣಿಯ ಏಳು ಮುಟಿಗೆಗಳನ್ನು ಮಾಡಿಟ್ಟಾಗ ಅಲ್ಲಿಯೇ ದರ್ಶನ ನೀಡಿದನಂತೆ. ಜನ ಈಗಲೂ ಆ ಮಾತು ವಿಶ್ವಾಸದಿಂದ ನಂಬುತ್ತಾರೆ. ಪ್ರತಿ ಯುಗಾದಿ, ದಸರಾ, ರಾಮನವಮಿ, ಹಣಮಜಯಂತಿಗಳಲ್ಲಿ ಇಲ್ಲಿ ವಿಶೇಷ ಪೂಜೆ ನಡೆಯುತ್ತವೆ.

ನಾನು ಚಿಕ್ಕವಳಿದ್ದಾಗ ಅದೆಷ್ಟೋ ಸಾರಿ ಅವರ ಮನೆಯ ಪೂಜೆಗಳಿಗೆ, ಅಜ್ಜಿ, ತಂದೆ ತಾಯಿಯರೊಡನೆ ಭಂಡಿವಾಡಕ್ಕೆ ಹೋದ ನೆನಪು ನಿಚ್ಚಳವಾಗಿದೆ. ನಾವು ಆಗ ನಿಂಗನಗೌಡರ ಮನೆಯಲ್ಲಿಯೇ ಇರುತ್ತಿದ್ದೆವು. ಅವರಿಗೆ ವಯಸ್ಸಾಗಿತ್ತು. ಮೇಲಿಂದ ಮೇಲೆ, ಮೊದಲಿನಂತೆ ಧಾರವಾಡಕ್ಕೆ ನಮ್ಮ ಭೆಟ್ಟಿಗೆ ಬರಲಾಗುತ್ತಿರಲಿಲ್ಲ. ಅವರ ಜೀವ ನೆನಸಿದಾಗ ಹೇಳಿಕಳಿಸುತ್ತಿದ್ದರು. ತಂದೆಯವರು ಭಂಡಿವಾಡಕ್ಕೆ ಹೋಗಿ ಅವರನ್ನು ಭೆಟ್ಟಿಯಾಗಿ ಬರುತ್ತಿದ್ದರು.

'ನೀಡುವ ಕೈ ನಿಂಗನಗೌಡ'ರಿಗೆ ನೀಡುವ ಕೈ ಅವರ ಧರ್ಮಪತ್ನಿ ರತ್ನವ್ವ. ರತ್ನದಂಥ ಹೆಣ್ಣುಮಗಳು. ನಿಂಗನಗೌಡರು ರತ್ನವ್ವನನ್ನು 'ನೀಡುವ ಕೈ'ಯೆಂದೇ ಕರೆಯುತ್ತಿದ್ದರು. ಅವರು ತಮ್ಮ ಜೀವನದಲ್ಲಿ ಆ ಕೈಯನ್ನು ಪೂಜಿಸಿದರು. ಮಾನವನಿಗೆ ಸೃಷ್ಟಿಯ ವರದಾನ, ಕೈ. ಅದು ಅವನ ದೇಹದ ಮಹತ್ವದ ಅವಯವ. ಅದು ನಿಸರ್ಗದ ಅದ್ಭುತ. ನಮ್ಮ ಎಲ್ಲ ಕಾರ್ಯಗಳಿಗೆ ಕೈ ಮುಖ್ಯ ಸಾಧನ. ಅದಕ್ಕೆ ಗೌರವವಿದೆ. ಧರ್ಮದಲ್ಲಿ ಅದಕ್ಕೆ ವಿಶೇಷ ಮಾನ್ಯತೆಯಿದೆ.

ಹಿರಿಯರು ಹೇಳುತ್ತಾರೆ. 'ಕೈತುದಿಯಲ್ಲಿ ಲಕ್ಷ್ಮಿ, ಕೈ ಮಧ್ಯದಲ್ಲಿ ಸರಸ್ವತಿ, ಕೈ ಮೂಲದಲ್ಲಿ ಗೌರಿ, ಪಾತಃಕಾಲದಲ್ಲಿ ಕರದರ್ಶನ ಮಾಡಿರಿ'.

ಕೈಯಲ್ಲಿ ಕೈಯಿಟ್ಟರೆ ಪಾಣಿಗ್ರಹಣ, ಕೈಕೈ ಸೇರಿದರೆ ಜಗಳ, ಕೈ ಕೈ ಕುಲುಕಿದರೆ ಸ್ನೇಹ, ಕೈ ಕೈ ಕೂಡಿಸಿದರೆ ನಮಸ್ಕಾರ.

ಪ್ರೀತಿ, ಸಿಟ್ಟು ಎಲ್ಲಕ್ಕೂ ಕೈ ಬೇಕು. ದೇವರಿತ್ತ ಈ ಸುಂದರ, ಪೂಜ್ಯ ಕೈ ಇರುವುದು ಎತ್ತಲಿಕ್ಕಲ್ಲ, ಪ್ರೀತಿಸಲಿಕ್ಕೆ. ಕೈಯೊಡ್ಡುವುದು ಅವಹೇಳನ, ಕೈಯಿರುವುದು ದಾನಕ್ಕೆ. ಸೃಜನಶೀಲತೆ, ವಿಶ್ವಾಸಕ್ಕೆ. ಕರ್ಣ, ಬಲಿಯರದು ದಾನಿಯ ಕೈಗಳು, ಏಕಲವ್ಯನದು ಗುರುದಕ್ಷಿಣೆ ಕೈ. ನಮ್ಮ ನಿಂಗಣ್ಣಗೌಡರದೂ ಅಂತಹದೇ ದಾನಿಯ ಕೈ. ಅವರ ಸಹಧರ್ಮಿಣಿ ರತ್ನವ್ವನದು ಮಹಾದಾನಿ ಪತಿಗೆ, ಪ್ರೀತಿಯಿಂದ ಅನ್ನ ನೀಡುವ ಮಾತೃ ವಾತ್ಸಲ್ಯದ ಕೈ.





ಅಂಥ 'ನೀಡುವ ಕೈ'ಗೆ ನೀಡುವ ಕೈ ದೊರೆತದ್ದು ಸಾಮಾನ್ಯದ ಮಾತೇ? ನಿಂಗನಗೌಡರ ಬಾಳಿಗೆ ರತ್ನವ್ವ ವಿಧಿ ತಂದ ವಧು.




ನಿಂಗನಗೌಡರು ನನ್ನ ತಂದೆಯ ತಂದೆ-ನನ್ನಜ್ಜನ ಲಂಗೋಟಿ ಗೆಳೆಯರು. ಅವರು ಆಗರ್ಭ ಶ್ರೀಮಂತರು. ಭಂಡಿವಾಡದ ಶ್ರೀಮಂತ ಸಂಗನಗೌಡ ಮತ್ತು ಗೌರಕ್ಕನವರ ಏಕಮಾತ್ರ ಪುತ್ರರು. ನನ್ನ ಅಜ್ಜನೋ ಬಡ ಬ್ರಾಹ್ಮಣ ದಂಪತಿಗಳ ನಾಲ್ಕು ಗಂಡು ಮಕ್ಕಳಲ್ಲಿ ಕಿರಿ ಮಗ. ನನ್ನ ಅಜ್ಜನ ತಂದೆಯವರು ಅವರು ಚಿಕ್ಕ ಮಗುವಿರುವಾಗಲೇ ತೀರಿಕೊಂಡಿದ್ದರು. ಹೀಗಾಗಿ, ಅವರ ತಾಯಿ ಗಂಗವ್ವ, ಬಡತನವನ್ನು ಹಾಸಿ ಹೊದ್ದವಳು. ತಿಂದು, ಕುಡಿದು ಅರಗಿಸಿಕೊಂಡವಳು. ಅವಳ ಬಳಿಯಿದ್ದ ಸಂಪತ್ತು ಅವಳ ನಾಲ್ಕು ಗಂಡು ಮಕ್ಕಳು, ಮತ್ತು



ಒಬ್ಬ ಹೆಣ್ಣುಮಗಳು. ಐವರೂ ಮೇಧಾವಿಗಳು, ಕಲಾವಂತರು. ಓದು, ಕಲೆ, ಅವರಿಗೆ ನೀರು ಕುಡಿದಂತೆ.

ವಿಧವೆ ಗಂಗವ್ವ, ಧಾರವಾಡದ ವಿಠ್ಠಲ ದೇವರೆದುರು ಕುಳಿತು ಶ್ರೀಪುರಂದರದಾಸರ ಕೀರ್ತನೆಗಳನ್ನು ಹಾಡಿ, ಶ್ರೀಮಂತರ ಮನೆಗಳಲ್ಲಿ ಅಡಿಗೆ ನೀರು ಮಾಡಿ, ತನ್ನ ಮಕ್ಕಳನ್ನು ಓದಿಸಿದ್ದಳು.

ಒಂದು ದಿನ ತನ್ನ ಕಿರಿಯ ಮಗನಿಗೆ ಗಂಗವ್ವ ಹೇಳಿದಳಂತೆ,

''ರಾಮು ನೀ ಬಡವ, ನಿಂಗು ಶ್ರೀಮಂತ. ಗೆಳೆತನ ಸರೀಕದವರ ಜೋಡಿ ಮಾಡಬೇಕಪ್ಪಾ'' ಎಂದು.

''ಅವ್ವಾ ನಿಂಗು ಕೃಷ್ಣ, ನಾ ಸುಧಾಮ'' ಎಂದು ನನ್ನಜ್ಜ, ತಾಯಿ ಹೇಳಿದ ಕೃಷ್ಣ ಸುಧಾಮರ ಮೈತ್ರಿಯ ಕಥೆಯನ್ನು ಸೂಕ್ಷ್ಮವಾಗಿ ಅವರಿಗೆ ತಿಳಿಸಿದ್ದರಂತೆ.

ನಿಂಗಣ್ಣ, ರಾಮಣ್ಣ ಧಾರವಾಡದ ಒಂದೇ ಶಾಲೆಯಲ್ಲಿ ಮುಲ್ಕೀ ಪರೀಕ್ಷೆಯವರೆಗೆ ಕಲಿತರು. ರಾಮಣ್ಣನಿಗೆ ಮುಲ್ಕಿ ಪರೀಕ್ಷೆಯಲ್ಲಿ ಬಂಗಾರದ ಪದಕ ಬಂದಿತ್ತು. ನಿಂಗಣ್ಣ ಒಳ್ಳೆಯ ಗುಣಗಳನ್ನು ಪಡೆದು ಪಾಸಾಗಿದ್ದ.

''ರಾಮು ನಿನ್ನ ಜತಿ ಸ್ನೇಹ ಮಾಡಿದ್ದಕ್ಕ ನಾಲ್ಕು ಅಕ್ಷರರ ಹತ್ತಿದ್ವು, ಇಲ್ಲಾಂದ್ರ ನಾ ಅಕ್ಷರ ಶತ್ರೂನ ಆಗತಿದ್ದೆ'', ನಿಂಗಣ್ಣ ಗೆಳೆಯನಿಗೆ ತನ್ನ ಕೃತಜ್ಞತೆ ಸಲ್ಲಿಸಿ ಹೇಳಿದ್ದ.

ಆ ಅಕ್ಷರ ಋಣಭಾರ ನಿಂಗನಗೌಡರು ತಮ್ಮ ಜೀವನದುದ್ದಕ್ಕೂ ಹೊತ್ತಿದ್ದರು. ಗೆಳೆಯನನ್ನು ಸ್ಮರಿಸುತ್ತಲೇ ಕಳೆದಿದ್ದರು.

ನಿಂಗಣ್ಣನಿಗೆ ದುಡ್ಡಿನ ಗರ್ವ ಇರಲಿಲ್ಲ. ಅವನ ತಂದೆ ತಾಯಿಯಿಬ್ಬರೂ ನಿಗರ್ವಿಗಳು. ಸಂಗಪ್ಪಗೌಡರಿಗಂತೂ ಜಾಣ ವಿದ್ಯಾರ್ಥಿಗಳನ್ನು ಕಂಡರೆ ಬಹಳ ಖುಷಿ. ಸದಾ ಓದುತ್ತಲೇ ಇರುತ್ತಿದ್ದ ರಾಮಣ್ಣನ ಮೇಲೆ ಅವರಿಗೆ ಮಮತೆ. ಗಂಗವ್ವ ಆಗಿನ ಕಾಲದಲ್ಲಿ ಓದು ಬರಹ ಬಲ್ಲವಳು. ರಾಮಣ್ಣನ ಅಕ್ಕ ಬಾಳವ್ವನೂ ಮುಲ್ಕಿ ಪರೀಕ್ಷೆಯಲ್ಲಿ ಮೊದಲಿಗಳಾಗಿ ಪಾಸಾಗಿ, ಬಂಗಾರದ ಗೆಜ್ಜೀಟೀಕೆ, ಕರಿಚಂದ್ರಕಾಳಿ ಸೀರೆ ಪಡೆದವಳು. ಅವಳು ಮದುವೆಯಾಗಿ ಮದ್ರಾಸಿಗೆ ಹೋದಮೇಲೆ ಅಲ್ಲಿ ತಮಿಳು ಭಾಷೆ ಓದಲು, ಬರೆಯಲು ಕಲಿತಿದ್ದಳಂತೆ. ಅವಳು ಕವಯತ್ರಿ.

ರಾಮಣ್ಣನ ಅಣ್ಣಂದಿರಿಬ್ಬರೂ ಬ್ರಿಟಿಶ್ ಅಧಿಕಾರಿಗಳಿಗೆ ಕನ್ನಡ ಭಾಷೆಯನ್ನು ಇಂಗ್ಲಿಷಿನಲ್ಲಿ ಕಲಿಸುತ್ತಿದ್ದರಂತೆ. ಒಟ್ಟಿನಲ್ಲಿ ಅವರ ಮನೆತನದಲ್ಲಿ ವಿದ್ಯೆ, ವೈದ್ಯಕೀಯ ವೃತ್ತಿ ಇತ್ತು. ಗಂಗವ್ವ ಗಿಡಮೂಲಿಕೆ ಔಷಧಿಗಳಲ್ಲಿ ಸಿದ್ಧಹಸ್ತಳು. ನನ್ನ ಅಜ್ಜ ತಾಯಿಯಿಂದ ಆ ವಿದ್ಯೆ ಕಲಿತಿದ್ದರು. ಮುಂದೆ ಸಂಶೋಧನೆ ನಡೆಸಿ ಅನೇಕ ಸಿದ್ಧೌಷಧಿಗಳನ್ನು ತಯಾರು ಮಾಡಿದ್ದರು.

ನಿಂಗಣ್ಣ ಶಾಲೆಗೆ ಹೋಗುವಾಗ, ಬರುವಾಗ ರಾಮಣ್ಣನ ಜೊತೆಗೂಡಿಯೇ ಹೋಗುತ್ತಿದ್ದ. ಅವನಿಗೆ ಮನೆಯಲ್ಲಿ ಮೃಷ್ಟಾನ್ನವಿದ್ದರೂ ರಾಮಣ್ಣನ ಮನೆಯ ಭಕ್ಕರಿ, ಹುಳಿಯೆಂದರೆ ತುಂಬಾ ಪ್ರೀತಿ. ಗೌರಕ್ಕ ಗಂಗವ್ವನಿಗೆ,

''ಗಂಗಕ್ಕಾರ, ನಮ್ಮ ನಿಂಗುಗ ನಿಮ್ಮ ಮನಿ ಊಟಬ್ಯಾಳಿ ಅಂದ್ರ ಭಾಳ ಪ್ರೀತೆ ಯಕ್ಕಾ. ದಿನಾ ಒಂದೆರಡ ಬಟ್ಟಲ ಕಳಿಸಿ ಕೊಡ. ನಿನ್ನ ಮನಿಗೆ ಅದಕ್ಕ ಬೇಕಾದ್ದ ಎಲ್ಲಾ ಸಾಮಾನ ಹಚ್ಚತೀನಿ''

''ಆಗಲ್ರೀ ಗೌರಕ್ಕಾ ಕಳಸ್ತೀನಿ ಆದ್ರ ನನ್ನ ಮನಿಗೆ ಸಾಮಾನ ಮಾತ್ರ ಕಳಸಬ್ಯಾಡ್ರಿ. ನನ್ನ ಮಕ್ಕಳ ಜತಿ ಅವನೂ ಒಬ್ಬ ಉಣ್ಣತಾನ''

''ಹಾಂಗಿದ್ರ ಬ್ಯಾಡ ಯಕ್ಕಾ. ಗಂಡ ದಿಕ್ಕಿಲ್ಲದ ನಿನ್ನ ಬಾಳು. ನೀನ, ಹಗಲರಾತ್ರಿ ದುಡುದು ಮಕ್ಕಳ ಹೊಟ್ಟಿ ತುಂಬತಿ. ನಮ್ಮ ಮನ್ಯಾಗ ಅಷ್ಟ ತೊಗರಿ, ಎಲ್ಲೋ ಬಿದ್ದ ಹೊಕ್ಕಾವ, ತಿಳೀತ. ನಾ ಸಾಮಾನ ಕಳಸ್ತೀನಿ, ಬ್ಯಾಡಾ ಅನ್ನಬ್ಯಾಡ. ನನ್ನ ಮಗನ ಜತಿ ನಿನ್ನ ಮಕ್ಕಳು ಉಣ್ಣಲಿ. ಕೊಡೋ ದೇವರಿಗೇನ ಬಡತನೇನ ಯಕ್ಕಾ''

''ಹೌದ್ರಿ ಗೌರಕ್ಕಾ, ನೀವ ಹೇಳಿದ್ದ ಅಗದಿ ಖರೇ. ಆನಿ ಬಾಯಾಗಿಂದ ಬಿದ್ದ ಒಂದ ಅಗಳ ಅನ್ನದಿಂದ, ಆನಿಗೇನ ಲುಕ್ಸಾನ ಆಗತದೇನು? ಆದ್ರ, ಅದ ಒಂದ ಅಗಳು, ಇರುವಿ ಇಡೀ ಪರಿವಾರದ ಹೊಟ್ಟಿ ತುಂಬಿಸ್ತದ. ಪರಮಾತ್ಮನ ಕೃಪಾ ಅಂದ್ರ ಹಿಂಗ ಇರ್ತದ ನೋಡ್ರೀ ಗೌರಕ್ಕಾ''

''ಗಂಗಕ್ಕಾ ನಿಮ್ಮ ಜತಿ ಮಾತ ಆಡೋದ ನನಗ ಸಂತೋಷ. ನೀವು ಓದಿದವರು. ನಮ್ಮದೇನ್ರೀ ದುಡ್ಡನ್ಯಾಗ ದಡ್ಡ ಆಗಿ ಬಾಳೇವು''

''ಬದುಕಬೇಕಂದ್ರ ದುಡ್ಡಿನ ಅವಶ್ಯಕತಾನೂ ಮುಖ್ಯ ಅಲ್ಲರಿ. ಈ ಜೀವನ ಏನೂ ಇಲ್ದ ನಡಿಯೂದಿಲ್ಲ ನೋಡ್ರಿ.''-

ಹೀಗೆ ಸಾಗುತ್ತಿತ್ತು ಅವರ ಸಂಭಾಷಣೆ.

ಅಂತೂ, ಅಂದಿನಿಂದ, ಸಂಗಪ್ಪಗೌಡರ ಪರಿವಾರ ಧಾರವಾಡ ಬಿಟ್ಟು ತಮ್ಮೂರಾದ ಭಂಡಿವಾಡಕ್ಕೆ ಹೋಗುವವರೆಗೆ, ಗಂಗವ್ವ ನಿಂಗಣ್ಣನಿಗೆ ತಪ್ಪದೇ ಹುಳಿ ಕಳಿಸುತ್ತಿದ್ದಳು. ಅವರಿಬ್ಬರ ಮನೆತನದ ಸ್ನೇಹ ಮಕ್ಕಳಿಂದ ಗಾಢವಾಗುತ್ತ ನಡೆದಿತ್ತು.

ಅ

ಗೆಳೆಯರಿಬ್ಬರೂ ದೂರವಾದರು. ಹೀಗಾಗಿ ಇನ್ನೂ ಹತ್ತಿರವಾದರು. ಸ್ನೇಹದ ರುಚಿ, ಶುಚಿ ಎರಡೂ ಅನುಭವಿಸಿದರು. ಸ್ನೇಹ ಪ್ರೀತಿ ಬೇಡುತ್ತದೆ. ತ್ಯಾಗ ಕೇಳುತ್ತದೆ. ಹೊಂದಾಣಿಕೆ ಬಯಸುತ್ತದೆ. ಸ್ನೇಹ ಜೀವನದ ಅಮೂಲ್ಯ ಸಂಪತ್ತು. ಸ್ನೇಹಕ್ಕೆ ಸ್ನೇಹವೇ ಒರೆಗಲ್ಲು. ಅದು ಬಂಗಾರದಂತೆ ಮೇಲಿಂದ ಮೇಲೆ ಪರೀಕ್ಷೆಗೆ ಒಳಗಾಗುತ್ತಲೇ ಇರುತ್ತದೆ. ಬಂಧು ಬಾಂಧವರು ನಮ್ಮ ಬೆನ್ನಿಗೆ ಬಿದ್ದವರು. ಆದರೆ ಸ್ನೇಹ ನಮ್ಮ ಆಯ್ಕೆ. ಸ್ನೇಹ ಸಂಬಂಧಕ್ಕಿಂತಲೂ ದೊಡ್ಡದು. ಅದರಲ್ಲಿ ಪ್ರೀತಿ ವಿಶ್ವಾಸಗಳೇ ಮುಖ್ಯ.

ಸ್ನೇಹದಲ್ಲಿ ಮೋಸವಿಲ್ಲವೇ? ಇದೆ. ಯಾಕಿಲ್ಲ? ಒಂದು ಕಾಲದ ಪರಮಮಿತ್ರರು

ಶತ್ರುಗಳಾಗುವರು. ಆಗ ಅಂತಹ ಸ್ನೇಹದಲ್ಲಿ ಒಬ್ಬ ಸ್ವಾರ್ಥಿ ಇರುತ್ತಾನೆ. ಮಿತ್ರನ ಕುತ್ತಿಗೆ ಕೊಯ್ದು ತನ್ನ ಲಾಭ ಗಳಿಸಿಕೊಳ್ಳುತ್ತಾನೆ. ಆತ ಕಾರ್ಯಸಾಧಕನಿರುತ್ತಾನೆ.

ಆದರೆ ಜೀವನದ ಎಲ್ಲ ಆಕರ್ಷಣೆಗಳನ್ನು ದೂರತಳ್ಳುವ ಸ್ನೇಹ, ಅಪರಂಜಿ. ಅಲ್ಲಿ ಹೃದಯಕ್ಕೆ ಹೃದಯದ ಆಕರ್ಷಣೆ. ಅಂತಹ ಸ್ನೇಹದಲ್ಲಿ ತಮ್ಮನ್ನು ಬೆಸೆದುಕೊಂಡು ಆದರ್ಶ ಗೆಳೆಯರೆಂದೆನಿಸಿಕೊಂಡವರು ರಾಮಣ್ಣ ಮತ್ತು ನಿಂಗಣ್ಣ.

''ರಾಮು-ನಿಂಗುರಂಥಾ ಗೆಳ್ಯಾರಿಲ್ಲ'' ಎಂದು ಅವರನ್ನು ಬಾಲ್ಯದಲ್ಲಿ ನೋಡಿದವರು, ಅವರ ಯೌವನದವರೆಗೂ ಹೊಗಳಿದರು. ಯೌವನದಿಂದ ವೃದ್ಧಾಪ್ಯದವರೆಗೆ ನೋಡಿದವರು, ಅದೇ ಮಾತನಾಡಿದರು. ಅವರಿಬ್ಬರನ್ನು ಕೃಷ್ಣ-ಸುಧಾಮರಿಗೆ ಹೋಲಿಸಿದರು.

ನಿಂಗನಗೌಡರು ತಮ್ಮ ಕೊನೆಯ ಕಾಲದವರೆಗೂ ಲಕ್ಷ್ಮಿಪುತ್ರರಾಗಿಯೇ ಉಳಿದರು. ನನ್ನ ಅಜ್ಜ ವಿದ್ಯೆ ಸಂಪಾದಿಸಿದರು. ಗಿಡಮೂಲಿಕೆಗಳ ಸಂಶೋಧನೆ ನಡೆಸಿ ಹೆಸರುವಾಸಿ ವೈದ್ಯರೆನಿಸಿದರು. ಶಾಲೆ, ಕಾಲೇಜುಗಳು ಪ್ರಾಚಾರ್ಯರಾಗಿ ಕೆಲಸ ಮಾಡಿ ವಿದ್ಯಾರ್ಥಿವೃಂದ ಗಳಿಸಿದರು. ಕಷ್ಟಪಟ್ಟು ದುಡಿದು, ಮೇಲಕ್ಕೇರಿ, ಶ್ರೀಮಂತರಾದರು.

ನನ್ನ ಅಜ್ಜಿ ಸೀತಕ್ಕ, ಇದ್ದುಳ್ಳವರ ಮನೆಯಿಂದ ಬಂದು, ಪತಿಯ ಮನೆಯಲ್ಲಿ ದಾರಿದ್ರ್ಯ ಅನುಭವಿಸಿದಳು. ಆ ಅತ್ತೆ ಮನೆ ಸರಸ್ವತಿಯ ವಾಸಸ್ಥಾನ. ಅಲ್ಲಿ ಲಕ್ಷ್ಮಿಗೆ ಪ್ರವೇಶವೇ ಇರಲಿಲ್ಲ. ಅಜ್ಜಿ, ಮನೆಯಲ್ಲಿ ಅನ್ನವಿದ್ದಾಗ ಉಂಡಳು, ಇಲ್ಲದಾಗ ಉಪವಾಸವಿದ್ದಳು. ಆದರೆ 'ದೇಹಿ' ಅನ್ನಲಿಲ್ಲ. ದುಡಿದಳು. ಕಷ್ಟದ ಬಾಳುವೆಗೆ ಎಂದೂ ಬೆನ್ನು ತಿರುಗಿಸಲಿಲ್ಲ. ಜೀವನವನ್ನು ಮಹಾ ಯಜ್ಞದಂತೆ ನಡೆಸಿದಳು. ಪತಿಯ ಗಳಿಕೆಯ ಒಂದೂ ದುಡ್ಡು ಅಪವ್ಯಯವಾಗದಂತೆ ಸಂಸಾರ ಸಾಗಿಸಿ, ಅವರ ಗುಡಿಸಲನ್ನು ಅರಮನೆಯಾಗಿಸಿದಳು. ಮಕ್ಕಳನ್ನು ಶಿಸ್ತಿನಿಂದ ಬೆಳೆಸಿದಳು. ವಿದ್ಯಾವಂತರನ್ನಾಗಿ ಮಾಡಿದಳು.

ನಿಂಗಣ್ಣ ರಾಮಣ್ಣರ ಸ್ನೇಹವುಳಿಸಲು ಅವರಿಬ್ಬರ ಪತ್ನಿಯರೂ ಕಾರಣರು. ಅವರಿಬ್ಬರೂ ತಮ್ಮ ಮನೆಯಲ್ಲಿ ಅವರ ಸ್ನೇಹ ಪೂಜಿಸಿದರು. ನಿಂಗಣ್ಣಗೌಡರು ಮನೆಗೆ ಬಂದರಾಯಿತು, ನನ್ನಜ್ಜಿ ಸೀತಕ್ಕ,

''ನಿಂಗನಗೌಡರ, ಬಡವರ ಮನಿಗೆ ಭಾಗ್ಯ ನಿಧಿ ಬಂದ ಹಾಂಗಾತು'' ಅನ್ನಬೇಕು.

''ವಿದುರನ ಮನಿಗೆ ಶ್ರೀಕೃಷ್ಣ ಪರಮಾತ್ಮ ಊಟಕ್ಕ ಬಂದಹಾಂಗಾತು'' ಎಂದು ಸ್ಮರಿಸಬೇಕು.

ಆಗ ನಿಂಗನಗೌಡರು, ''ರಾಮನಂಥಾ ಗೆಳ್ಯಾ ಸಿಕ್ಕದ್ದು ಒಂದ ಜನ್ಮದ ಪುಣ್ಯಾ ಇದ್ರ, ಸೀತಾ ಮಾತಾನಂಥಾ ಅತ್ತಿಗಿ ಸಿಕ್ಕದ್ದು ಎಷ್ಟ ಜನ್ಮದ್ದ ಪುಣ್ಯಾನೋ'' ಅನ್ನುತ್ತಿರಬೇಕು.

ಅಂತೂ ಅವರಿಬ್ಬರ ಗೆಳೆತನ ಅಸೂಯೆ ಪಡುವಂಥಹದು. ಅದು ಬಹಶಃ ಈ ಜನ್ಮದ ಬಂಧನವಿರಲಿಕ್ಕಿಲ್ಲ, ಸಂಚಿತಾರ್ಥದ ಪುಣ್ಯದಿಂದಲೇ ಲಭಿಸಿರಬೇಕು.

ನಿಂಗಣ್ಣಗೌಡರ ಆಮಂತ್ರಣ ಸ್ವೀಕರಿಸಿ, ರಾಮಣ್ಣನ ಮದುವೆಯಾದ ಹೊಸದರಲ್ಲಿ ಗಂಗವ್ವ, ಸೊಸೆ-ಮಗನೊಂದಿಗೆ ಭಂಡಿವಾಡದ ಹಣಮಪ್ಪನ ದರ್ಶನಕ್ಕೆ ಹೋಗಿ ಬೇಡಿಕೊಂಡಿದ್ದಳಂತೆ. 'ಮೊಮ್ಮಗ ಹುಟ್ಟಿದರೆ, ಹಣಮ, ನಿನ್ನ ಹೆಸರಿಡುವೆ' ಎಂದು. ಹೀಗಾಗಿ ನನ್ನ ತಂದೆಗೆ ಅವನದೇ ಹೆಸರು. ಆದರೆ ಮೊಮ್ಮಗನನ್ನು ನೋಡುವ ಭಾಗ್ಯ ಗಂಗವ್ವನಿಗಿರಲಿಲ್ಲ.

ನಿಂಗನಗೌಡರಿಗೆ ಮಾತ್ರ ಸಂತಾನ ಭಾಗ್ಯ ಬೇಗ ಒದಗಿ ಬರಲಿಲ್ಲ. ತಾಯಿ ಗೌರಕ್ಕ ಬಹಳ ಮನಸ್ಸಿಗೆ ಹಚ್ಚಿಕೊಂಡಿದ್ದಳು. ತನ್ನ ಬಾಳಿಗೆ ಬಾಳೆಯಂತೆ ಒಂದೇ ಕುಡಿ, ಮಗನಿಗೆ ಹತ್ತಾಗಲಿ ಎಂಬ ಹರಕೆ

ಹೊತ್ತಿದ್ದಳು. ಆದರೆ ಕಿಟ್ಟದ ಹಣಮಪ್ಪ ಯಾಕೋ ಅವರ ಮೇಲೆ ಕಣ್ಣು ತೆಗೆದಿರಲಿಲ್ಲ. ನಿಂಗನಗೌಡರಿಗೆ ಮದುವೆ ಹದಿನಾರನೆಯ ವರ್ಷಕ್ಕೆ ಆಗಿತ್ತು. ಮದುವೆಯಾಗಿ ಹತ್ತು ವರುಷಗಳಾದರೂ ಮಕ್ಕಳಿರಲಿಲ್ಲ. ಮದುವೆಯಾದಾಗ ರತ್ನವ್ವ ಇನ್ನೂ ನೆರತಿರಲಿಲ್ಲ. ಹತ್ತು ವರ್ಷದ ಹುಡುಗಿ.

ಗೌರಕ್ಕ ಇಪ್ಪತ್ತು ವರುಷದ ಸೊಸೆಯನ್ನು ಬಂಜೆ ಎಂದು ನಿರ್ಧರಿಸಿಬಿಟ್ಟಳು. ಪತಿಯೊಡನೆ ಮಗನಿಗೆ ಇನ್ನೊಂದು ಮದುವೆ ಮಾಡುವ ಮಾತೆತ್ತಿದ್ದಳು. ಸಂಗನಗೌಡರು, ಮಗನ ಅನುಮತಿ ಕೇಳದೇ ಯಾವುದೇ ನಿರ್ಧಾರ ತಾವು ತೆಗೆದುಕೊಳ್ಳುವುದಿಲ್ಲವೆಂದು ಖಡಾಖಡಿಯಾಗಿ ಹೇಳಿಬಿಟ್ಟರು.

ಗೌರಕ್ಕ ಹಿಡಿದ ಪಟ್ಟು ಬಿಡಲಿಲ್ಲ. ಎರಡನೆಯ ಮದುವೆಗೆ ಒಪ್ಪದ ಮಗನ ಮೇಲೆ ಕೋಪ ಮಾಡಿಕೊಂಡು ಮಾತು ಬಿಟ್ಟಳು. ನಂತರ ಊಟ ಬಿಟ್ಟಳು. ನಿಂಗಣ್ಣಗೌಡರು ನೇರ ಕಾರವಾರಕ್ಕೆ ಬಂದರು. ಆಗ ನನ್ನಜ್ಜ ಅಲ್ಲಿಯ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದರು. ಗೆಳೆಯನ ಸಲಹೆ ಕೇಳಿದರು.

''ನಿಂಗು, ಮೊದ್ಲ ನೀವಿಬ್ರು ಗಂಡಾ-ಹೆಂಡ್ತಿ, ವೈದ್ಯರ ಕಡಿಂದ ಪರೀಕ್ಷಾ ಮಾಡಿಸಿಕೋಬೇಕು. ಮಕ್ಕಳಾಗದೇ ಇರೋದಕ್ಕ ಹೆಣ್ಣ ಒಬ್ಬಳ ಕಾರಣ ಇರೋದಿಲ್ಲ; ಗಂಡೂ ಇರ್ತದ''

ಮೊದಲೇ ಸೂಕ್ಷ್ಮವಾಗಿದ್ದ ಗೌರಕ್ಕನ ಮನಸ್ಸು ಈ ಮಾತು ಕೇಳಿ ಅಸ್ವಸ್ಥವಾಯಿತು. ಸಿಟ್ಟಿನಲ್ಲಿ ಬಯ್ದುಬಿಟ್ಟಿದ್ದಳು.

''ರಾಮು ನಾಲ್ಕ ಬುಕ್ಕಾ ಹೆಚ್ಚಾ ಕಲ್ತಾನಂತ ನಿನಗ ಇದೆಲ್ಲಾ ಬುದ್ಧಿ ಹೇಳ್ತಾನೇನ? ಎಲ್ಲಾ ಬಿಟ್ಟ ಅವನ್ಯಾಕ ಕೇಳಾಕ ಹೋಗಿದ್ದಿ. ಗೆಳ್ಯಾ ಆದ್ರೇನಾತ, ಮನೀ ಮಾತ ಅವನ ಮುಂದ ಹೇಳಬೇಕ. ತಲಿಮ್ಯಾಗಿನ ಮಾಸ ಹಾರಿಲ್ಲ, ಬುದ್ಧಿ ಹೇಳಾಕ ಬಂದಾನ, ಬಿಕನಾಶಿನ್ನ ತಂದು. ಇಲ್ನೋಡ ನಿಂಗು, ಗಂಡಸು ಗಂಡಸ, ಹೆಣ್ಣು ಬಂಜಿ ಇರ್ತೈತಿ''

ಗೌರಕ್ಕನ ಹಠ ಹೆಚ್ಚಾಯಿತು. ಸಂಗನಗೌಡರು ರತ್ನವ್ವನ ಅನುಮತಿ ಕೇಳಲಿಲ್ಲ. ಅನಾಥೆಯಾದ ಅವಳಿಗೆ ತೌರು ಮನೆಯಿರಲಿಲ್ಲ. ಸೋದರ ಮಾವನ ಮನೆಯಲ್ಲಿಯೇ ಬೆಳೆದಿದ್ದಳು. ಅವರೇ ಮದುವೆ ಮಾಡಿಕೊಟ್ಟಿದ್ದರು. ಹೀಗಾಗಿ ಅವರ ಅನುಮತಿಯ ಪ್ರಶ್ನೆ ಅವರನ್ನು ಕಾಡಲಿಲ್ಲ. ಒಂದು ಶುಭ ಮುಹೂರ್ತದಲ್ಲಿ, ತಮ್ಮ ಸೋದರತ್ತೆಯ ಮಗ, ಹುಬ್ಬಳ್ಳಿಯ ಶ್ರೀಮಂತ ವ್ಯಾಪಾರಸ್ಥರಾದ ಶಿವಪ್ಪಶೆಟ್ಟರ ಮತ್ತು ಸುಶಿಲವ್ವರ ಏಕಮಾತ್ರ ಪುತ್ರಿ ಕಮಲವ್ವನ ಜೊತೆ ಮಗನ ಎರಡನೆಯ ಮದುವೆ ವಿಜೃಂಭಣೆಯಿಂದ ಮಾಡಿಬಿಟ್ಟರು.

ರತ್ನವ್ವನ ಗೋಳು ಹೇಳತೀರದಾಗಿತ್ತು. ಅವಳನ್ನು ಮದುವೆಗೂ ಕರೆದುಕೊಂಡು ಹೋಗಲಿಲ್ಲ. ರತ್ನವ್ವ ಅತ್ತು, ಅತ್ತು ಅನ್ನ ನೀರಿಲ್ಲದೇ ಹಾಸಿಗೆ ಹಿಡಿದಳು. ಆಗ ಮನೆಯಾಳು ಪಾರೆವ್ವ ಮಾತ್ರ ಅವಳನ್ನು ತನ್ನ ಹೊಟ್ಟೆಯ ಮಗಳಂತೇ ನೋಡಿಕೊಂಡಿದ್ದಳು.

ಹೊಸ ಸೊಸೆ ಮನೆ ತುಂಬಿದ ಸಂಭ್ರಮದಲ್ಲಿ ಗೌರಕ್ಕನ ಪ್ರಕೃತಿ ಸುಧಾರಿಸಿತು. ನಿಂಗನಗೌಡರು ರೂಪವತಿ, ಸುಶಿಕ್ಷಿತ ಹೊಸ ಹೆಂಡತಿಗೆ ಬಲು ಬೇಗ ಹೊಂದಿಕೊಂಡರು. ಆದರೆ ಅವರ ಮನದಲ್ಲಿ ರತ್ನವ್ವನಿಗಾಗಿ ಬಹಳ ಕನಿಕರವಾಗುತ್ತಲೇ ಇರುತ್ತಿತ್ತು. ಅವಳನ್ನು ಮಾತನಾಡಿಸುವುದಕ್ಕಾಗಿ ಕಾಯುತ್ತಿರುತ್ತಿದ್ದರು. ಆದರೆ ರತ್ನವ್ವ ಅವರಿದ್ದಲ್ಲಿ ಇರುತ್ತಿರಲಿಲ್ಲ. ತಲೆತುಂಬ ಸೆರಗು ಹೊದ್ದು ಊಟಕ್ಕೆ ನೀಡುವ ಕೆಲಸ ಮಾತ್ರ ಗೌರಕ್ಕ ಅವಳಿಗೆ ವಿಧಿಸಿದ್ದಳು.

ಒಂದು ದಿನ ಹಿತ್ತಲ ಕತ್ತಲಕೋಣೆಯಿಂದ ಅವಳು ಧಡಧಡನೆ ಹೊರಗೆ ಓಡಿ ಬರುವುದನ್ನು ಅವಳನ್ನು ಹಿಂಬಾಲಿಸಿದ ನಿಂಗಣ್ಣಗೌಡರನ್ನೂ ನೋಡಿದ ಗೌರಕ್ಕ, ಸೊಸೆಯನ್ನು ಕಸಬರಿಗೆಯಿಂದ ಝಾಡಿಸಿದಂತೆ ಬಯ್ದಿದ್ದಳು.



''ನೋಡ ರತ್ನವ್ವ, ಈ ಮನ್ಯಾಗ ದುಡದ ತಿಂದ, ಬಿದ್ದ ಇರ್ತಿದ್ರ ಇರು. ಇಲ್ಲಾಂದ್ರ ನಿನ್ನ ನಿಮ್ಮ ಸ್ವಾದರಮಾವನ ಮನಿಗೆ ಅಟ್ಟತೀನಿ. ನನ್ನ ಮಗನ ಮುಂದ, ಚಂದ ಸೀರಿವುಟ್ಟು, ಮೈಮಾಲಿನ ಸೆರಗ ಬಿಟ್ಟು, ಹೂ ಹಾಕ್ಕೊಂಡು, ನವಿಲಿನ್ಹಾಂಗ ಮೈ ನೋಡಿಕೋತ ತಿರಗೋ ಹಾಂಗಿಲ್ಲ, ಹಿತ್ತಲ ಕ್ವಾಣ್ಯಾಗ ಏನ ಮಾಡ್ತಿದ್ರಿ ಹೇಳ''

''ಏನಿಲ್ಲಿರಿ ಅತ್ತೆವ್ವಾ''

''ಮತ್ತ ನಿಂಗು ಅಲ್ಲ್ಯಾಕ ಬಂದಿದ್ದ?''

''ನನಗ ಗೊತ್ತಿಲ್ಲರಿ''

''ಗೊತ್ತ ಯಾಕ ಇಲ್ಲ ಮಳ್ಳಿ, ಮಲಗಾಕ ಕರಿದಿರಬೇಕು''

ರತ್ನವ್ವ ಅಳಹತ್ತಿದಳು.

''ಅತ್ರ ನಾ ಯೇನ ಕೇಳುವಾಕೆ ಅಲ್ಲ. ಕಿಟ್ಟದಪ್ಪನ ಆಣಿ ಮಾಡ''

''ನಾ ಮಾಡುದಿಲ್ಲರಿ''

''ಹಾಂಗಿದ್ರ ಏನೋ ಗದ್ದಲಾ ಎಬ್ಬಿಸೀರಿ. ತಡೀ, ಇವರ ಮುಂದ ಹೇಳಿ, ನಿನ್ನ ಮನಿ ಬಿಟ್ಟ ಹೊರಗ ಹಾಕ್ಕೇನಿ''

ರತ್ನವ್ವ ಅಳುತ್ತ, ಊಟ ಮಾಡದೇ ಮಲಗಿದಳು. ಆದರೆ ಮರುದಿನದಿಂದ ಅವಳ ಜೀವನ ಹೊಸ ತಿರುವು ತೆಗೆದುಕೊಂಡಿತು. ಸಂಗನಗೌಡರು ತಲೆ ತಿರುಗಿಬಿದ್ದದ್ದೇ ನೆವವಾಗಿ, ಹೋದ ಎಚ್ಚರ ಬರಲಿಲ್ಲ. ಮರುದಿನ ನಸುಕಿನಲ್ಲಿಯೇ ನಿಧನ ಹೊಂದಿದ್ದರು. ಗೌರಕ್ಕ ಪತಿಯ ಮರಣದ ಆಘಾತ, ಮಾನಸಿಕ ತೊಳಲಾಟದಿಂದ ಹಾಸಿಗೆ ಹಿಡಿದಳು. ಈಗ ಮನೆಯ ಸಂಪೂರ್ಣ ಜವಾಬ್ದಾರಿ ರತ್ನವ್ವನದು. ಅಡಿಗೆ ಮನೆ, ಉಳಿದೆಲ್ಲ ಕೆಲಸದಲ್ಲೂ ಅವಳ ಬಲಗೈ ಪಾರೆವ್ವ. ಗೌರಕ್ಕ ಆ ದುಃಖದಲ್ಲೂ ಮೊಮ್ಮಗನಿಗಾಗಿ ದಾರಿಕಾಯುತ್ತ, ಕಾಲ ಕಳೆಯಹತ್ತಿದಳು. ಪ್ರತಿ ತಿಂಗಳು, ಕಮಲವ್ವನ ಮುಟ್ಟಿನ ಸುದ್ದಿ ಅವಳ ಮನಸ್ಥಿತಿಯನ್ನು ಹದಗೆಡಿಸುತ್ತಿತ್ತು.

''ಗೌರಕ್ಕಾಗ, ಹುಣ್ಣಿಮಿ, ಅಮವಾಶಿಗೊಮ್ಮೆ ಹುಚ್ಚ ಬರ್ತೈತಿ'', ಭಂಡಿವಾಡದ ಜನ ಆಡಿಕೊಳ್ಳಹತ್ತಿದರು.

ಗೌರಕ್ಕನ ತಲೆ ಸರಿಯಿಲ್ಲದಾಗ ರತ್ನವ್ವನನ್ನು ಬಹಳ ಬಯ್ಯುತ್ತಿದ್ದಳು. ಕಮಲವ್ವನ ಮೇಲೆ ಅಕ್ಕರೆ ಸುರಿಸುತ್ತಿದ್ದಳು.

''ಕಮಲಾ ನೀಯೇನ ಕೆಲಸಾ ಮಾಡಬ್ಯಾಡ. ಚಂದ ಸೀರಿ ಉಟಕೋ, ಹೂ ಮುಡಕೋ, ಮೈ ತುಂಬ ದಾಗೀನಾ ಇಟಕೋ, ನಿಂಗಣ್ಣನ ಬಿಟ್ಟು ಎಲ್ಲೂ ಹೋಗಬ್ಯಾಡ. ಆ ರತ್ನವ್ವಗ ನಿಂಗನ ಮ್ಯಾಲ ಭಾಳ ಮೋಹ ಐತಿ, ಎಲ್ಲ್ಯಾರ ನಿನ್ನ ಸಂಸಾರ ಹಾಳ ಮಾಡ್ಯಾಳ'' ಎಂದು ಹೇಳುವ ಅವಳ ಮಾತನ್ನು ಕೇಳಿಸಿಕೊಂಡ ನಿಂಗನಗೌಡರು ಆ ದಿನ ತಾಯಿಗೆ ಛೀಮಾರಿ ಹಾಕಿದ್ದರು.

''ಅವ್ವಾರ, ಹಿರೇ ಮನಸ್ಯಾರ ಆಗಿ ಸಣ್ಣವರಿಗೆ ಏನ ಕಲಸ್ತಿರಿ? ದೊಡ್ಡಾಕೇನ ನನ್ನ ಜತಿ ಓಡಿ ಬಂದಾಕೇ? ಏನ ನಾ ಇಟ್ಟಾಕೆ? ಆಕಿನೂ ನನ್ನ ಮದವಿ ಆದಾಕಿ. ಈ ಮನಿ ಮೊದ್ಲ ಸೊಸಿ, ಆಕಿನ್ನ ಹೊಟ್ಟಿಲೇ ಹುಟ್ಟಿದ ಮಗಳ ಹಾಂಗ ನೋಡತಿದ್ರಿ, ಈಗ ನಿಮ್ಮ ಬುದ್ಧಿಗೆ ಏನಾಗೇತ್ಯೋ?''

''ನಿಂಗು, ನನ್ನ ಮ್ಯಾಲ ಕಣ್ಣ ತಗೀಬ್ಯಾಡ. ನಿಮಗೆಲ್ಲಾ ಬ್ಯಾಡ ಆಗಿದ್ರ ಹೇಳಿಬಿಡ. ಹಳ್ಳಾ ಮುಣಗಿ ಸಾಯತೀನಿ. ಹಡದ ತಾಯಿನ್ನ ಬಿಟ್ಟು ಆ ಕೆಂಪ ತೊಗಲಿಗೆ ಮೆಚ್ಚ್ಯಾನ. ಆ ಮಹಾಮಾಯಿ, ತಾ ನೋಡಿದ್ರ ಬಂಜಿ. ನನ್ನ ಮಗನ ತಲೀಗೆ ಏನ ತಿಕ್ಕ್ಯಾಳೋ'' ಎಂದು ಅಳುತ್ತ ಗೌರಕ್ಕ, ಇಡೀ ದಿನ ವಟಗುಟ್ಟುತ್ತಲೇ ಇದ್ದಳು.

೧೨

ಕಮಲವ್ವನ ಮದುವೆಯಾಗಿ ಎರಡು ವರುಷಗಳಾದರೂ ಅವಳ ಉಡಿಯೂ ತುಂಬಿರಲಿಲ್ಲ. ಗೌರಕ್ಕನ ತಲೆ ಸುಧಾರಿಸಲಿಲ್ಲ. ರತ್ನವ್ವನಂತೂ ಸನ್ಯಾಸಿನಿ. ಏಳು ಪೀಳಿಗೆಗಳು ಕೂತುತಿಂದರೂ ಸಾಕಾಗುವಷ್ಟು ಸಂಪತ್ತು ಇದ್ದ ನಿಂಗನಗೌಡರು ದುಡ್ಡಿದ್ದೂ ದರಿದ್ರರು. ರಾಮಣ್ಣನ ಮದುವೆ ಅವರಗಿಂತಲೂ ತಡವಾಗಿ ಆಗಿದ್ದರೂ, ಆಗಲೇ ಅವರಿಗೆ ಇಬ್ಬರು ಗಂಡುಮಕ್ಕಳು. ಗೆಳೆಯನ ಮಕ್ಕಳೆಂದರೆ ನಿಂಗನಗೌಡರಿಗೆ ಬಹಳ ಪ್ರೀತಿ.

ಆ ಕಾಲದಲ್ಲಿ ಸ್ತ್ರೀರೋಗ ತಜ್ಞರೆಂದರೆ ಸೂಲಗಿತ್ತಿಯರು ಇಲ್ಲವೇ ಅನುಭವಸ್ಥ ಹಿರಿಯ ಹೆಣ್ಣುಮಕ್ಕಳು. ಕಮಲವ್ವನನ್ನು ಪರೀಕ್ಷಿಸಿದ ಅವರು, ಅವಳಲ್ಲಿ ಯಾವ ದೋಷವಿಲ್ಲವೆಂದು ಹೇಳಿದ್ದರು. ಈ ಸುದ್ದಿ ಕೇಳಿದ ನಿಂಗನಗೌಡರು ಒಬ್ಬರೇ ಕುಳಿತು ಬಿಕ್ಕಿ ಬಿಕ್ಕಿ ಅತ್ತಿದ್ದರು. ಒಂದು ದಿನ ತಾಯಿಯೊಡನೆ ಮನಬಿಚ್ಚಿ ಮಾತನಾಡಿದರು.

''ರಾಮು ನನಗ ಹೇಳಿದ್ದ. ನೀವು ಅವನ್ನ ಬಯ್ದಿರಿ. ಪಾಪ, ಆ ಅನಾಥ ಹುಡುಗಿ ಬಾಳ್ವಿ ಹುಳ ಆತ. ದೋಷ ನನ್ನಾಗ ಐತಿ, ಶಿಕ್ಷಾ ಆಕಿಗೆ. ಶಿವಾ ಈ ಜನ್ಮದಾಗ ನನ್ನ ಕ್ಷಮಾ ಮಾಡೂದಿಲ್ಲ. ಆಕಿನ್ನ ನನ್ನ ಹತ್ರ ಬರಾಕಬಿಡೂದಿಲ್ಲ. ಉಡಾಕ ಇಲ್ಲ, ಉಣ್ಣಾಕ ಇಲ್ಲ, ಸಣ್ಣಾಕಿ ಸನ್ಯಾಸಿ ಆಗಿ ಹೋದ್ಲ. ಅವ್ವಾರ, ನಿಮ್ಮ ನಂತರ, ಅದ ನನ್ನ ನೀಡೋ ಕೈ, ಇನ್ನಮ್ಯಾಲ ಆಕಿಗೆ ಏನ ಅನ್ನಬ್ಯಾಡ್ರಿ. ನಿಮ್ಮ ಕಾಲಿಗೆ ಬಿದ್ದ ಬೇಡತೀನಿ. ನೀವು ನನ್ನ ಜನ್ಮಾ ಕೊಟ್ಟ ತಾಯಿ ಅದೀರಿ. ನಿಮ್ಮ ಮ್ಯಾಲ ನನಗ ಭಾಳ ಪ್ರೀತಿ ಐತಿ. ಆದ್ರ ಆಕಿನ್ನ ನಾ ಕೈ ಹಿಡದೇನಿ. ಆಕಿನ್ನ ಸುಖದಿಂದ ಇಟ್ಟು ಜ್ವಾಪಾನ ಮಾಡೋದ ನನ್ನ ಕರ್ತವ್ಯ ಐತಿ. ಹೌದೋ ಅಲ್ಲೋ ನೀವ ಹೇಳ್ರಿ,'' ಎಂದು ಧೋತರ ಚುಂಗನ್ನು ಮುಖಕ್ಕೆ ಮುಚ್ಚಿಕೊಂಡು ದೊಡ್ಡ ಧ್ವನಿ ತೆಗೆದು ಅಳಹತ್ತಿದರು.

ಅವರ ಆ ಮಾತನ್ನು ಕೇಳಿ ಪಾರೆವ್ವ, ರತ್ನವ್ವ, ಕಮಲವ್ವ ಮೂವರೂ ಅತ್ತಿದ್ದರು. ಗೌರಕ್ಕನಿಗೆ ಅತ್ತು ಅತ್ತು ಜ್ವರ ಬಂದಿದ್ದವು. ಒಂದು ವಾರ ಸತತವಾಗಿ ಬಂದ ಜ್ವರದಿಂದ ಗೌರಕ್ಕ ತುಂಬಾ ನಿತ್ರಾಣಳಾದಳು. ವೈದ್ಯರ ಔಷಧಿ ನಡೆದಿತ್ತು. ಯಾವ ಔಷಧಿಗೂ ಮಣಿಯದಂಥ ಮನೋರೋಗ ಅವಳದು.

ರಾಮಣ್ಣ, ಸೀತಕ್ಕ ಸುದ್ದಿ ತಿಳಿದು ಅವಳನ್ನು ನೋಡಲು ಬಂದಿದ್ದರು. ಆ ದಿನ ಗೌರಕ್ಕ ಒಂದು ಮಾತೂ ಆಡದೇ ರಾಮಣ್ಣನ ಕೈ ಹಿಡಿದು ದುಃಖಿಸಿ ದುಃಖಿಸಿ, ಅತ್ತಿದ್ದರಂತೆ. ಆದರೆ ಪಾರೆವ್ವ ಸೀತಕ್ಕನೆದುರು,

''ರತ್ನವ್ವ, ರೂಪಾ, ಗುಣದಾಗ ರತ್ನದಂಥ ಹುಡುಗಿ, ಅವರ ಮನಸ್ಸ ಮುರದ ಮಗ್ಗ ಎರಡನೇ ಮದವಿ ಮಾಡಿದ್ರು. ಮಾಡಿದ್ರ ಮಾಡಲಿ. ಮಗನ ಜತಿ ಸಂಸಾರ ಮಾಡಾಕ ಬಿಡಲಿಲ್ಲ. ಒಂದ ಚಂದನ್ನ ಸೀರಿ ಉಟ್ರ ಬಯ್ಯಬೇಕು. 'ನನ್ನ ಮಗನ್ನ ಒಲಿಸಿಕೊಳ್ಳಾಕ ಡೌಲ ಮಾಡತಾಳ' ಅಂತ ತಿವದ ಆಡಬೇಕ. ಕಮಲವ್ವ ತೌರಮನಿಗೆ ಹೋದ್ರೂ, ರತ್ನವ್ವಾರ್ನ ತಮ್ಮ ಕ್ವಾಣಿಯೊಳಗ ಮಲಗಿಸಿಕೋಬೇಕ.

ಸಣ್ಣಗೌಡ್ರು ಹತ್ತ ಸಾರೆ ಒಳಗ, ಹೊರಗ ಅಡ್ಡಾತಿದ್ರು. ಸಣ್ಣ ಸೊಸಿ ಮಹಾರಾಣಿ, ರತ್ನವ್ವ ಜೀತದಾಳು. ಮನ್ಯಾಗ ಇಷ್ಟ ಜನ ಆಳಗೋಳ ಇದ್ರು ಸಣ್ಣಗೌಡರ ಅರಿವಿ ರತ್ನವ್ವಾರ ಒಗೀಬೇಕು. ಮಡಚಿ ತಂದು ಇಡಬೇಕ. ಅವರಿಲ್ಲದ್ದ ನೋಡಿ ಅವರ ಕೋಣಿ ಕಸಾ ಉಡುಗಿ, ಒರಸಿ, ಹಾಸಿಗಿ ಹಾಸಬೇಕ. ಅಡಿಗಿ ಮಾಡಿ ಅತ್ತಿ, ಗಂಡಾ, ತಂಗಿನ್ನ ಕೂಡಿಸಿ ಊಟಕ್ಕ ನೀಡಬೇಕ. ಮೂರು ಮಂದಿಗೆ ಹಂಚಿನ ಮ್ಯಾಗಿನ ರೊಟ್ಟಿ ಕೊಡಬೇಕ. ಇಡೀ ದಿನ ಗಾಣದೆತ್ತಿನ್ಹಾಂಗ ದುಡೀತೈತಿ. ಮಗಳ, ತಿಂದ್ಯಾ, ಉಂಡ್ಯಾಂತ ಒಂದ ದಿನಾ ಕೇಳೂದಿಲ್ಲ. ಸಣ್ಣ ಸೊಸಿನ್ನ ಶೃಂಗಾರ ಮಾಡಿಸಿಕೊಂಡ, ಆಕಿ ಮಾರಿ ನೋಡಕೊಂತ ಕುಂದರತಾರ. ಸಣ್ಣ ಹುಡುಗಿ ರತ್ನವ್ವ, ಸನ್ಯಾಸಿ ಆಗಿಹೋಗ್ಯಾರ. 'ಯಾವ ಹೊತ್ತಿನ್ಯಾಗ ಈ ಬಂಜಿ ನಮ್ಮ ಮನ್ಯಾಗ ಕಾಲ ಹಾಕಿದ್ಲೊ. ಸಣ್ಣಾಕಿಗೂ ವಿಧಿ ಶಾಪ ಬೆನ್ನಹತ್ತೇತಿಂತ' ಒಂದ ದಿನ ಅಂದಬಿಟ್ರು.

ಆದ ದಿನದಿಂದ ರತ್ನವ್ವಾರ ಒಂದ ಹೊತ್ತ ಉಣತಾರ. ದಿನಾ ಕಿಟ್ಟದ ಹಣಮಪ್ಪಗ ನಸಿಕಿನ್ಯಾಗ ಹೊಕ್ಕಾರ. ಅವನ ದರ್ಶನ ಆಗದ ದಿನಾ ಬಾಯಿಗೆ ನೀರ ಹಾಕೂದಿಲ್ಲ. ಸಣ್ಣಗೌಡ್ರು ಒಳಗಿಂದೊಳಗ ಭಾಳ ಮರಗತಾರ'' ಎಂದೆಲ್ಲ ಪಾರೆವ್ವ ಅಳುತ್ತ ಹೇಳಿದ್ದಳು.

ಒಂದು ತಿಂಗಳು ಕಳೆಯಿತು. ಗೌರಕ್ಕನ ಪ್ರಕೃತಿ ಹದಗೆಡುತ್ತ ನಡೆದಿತ್ತು. ಒಂದು ದಿನ ಮಗ ಮತ್ತು ಇಬ್ಬರೂ ಸೊಸೆಯಂದಿರನ್ನು ಹತ್ತಿರ ಕೂಡಿಸಿಕೊಂಡು ಕಣ್ಣಲ್ಲಿ ನೀರು ತಂದು,

''ರತ್ನವ್ವ, ನನ್ನ ಕ್ಷಮಾ ಮಾಡ ಮಗಳ, ನಾ ಸ್ವಾರ್ಥಿ ತಾಯಿ. ನನ್ನ ಮಗನ ಸುಖಾ ಅಟ ನೋಡಿದೆ. ನಿನಗೆ ದುಃಖ ಕೊಟ್ಟೆ. ಕಮಲವ್ವ ನಿನ್ನ ತಂಗಿ, ಪ್ರೀತಿಯಿಂದ ನೋಡಿಕೋ ನನ್ನ ಮಗಳ. ನಿಂಗು, ರತ್ನವ್ವನ ಜತಿ ಸಂಸಾರ ಮಾಡ ಮಗಾ. ನನಗ ಈ ಮನಿ ಆಶಾ ಮುಗದಿಲ್ಲ. ನಿನ್ನ ಹೊಟ್ಟ್ಯಾಗ ಹುಟ್ಟಿ ಬರೋದೈತಿ. ಈ ಮನ್ಯಾಗ ಇನ್ನ ರತ್ನವ್ವ ಉಸರ ಹಾಕದ್ಹಾಂಗ ನೋಡಿಕೋ. ಕಮಲವ್ವ, ನಿನ್ನ ಅಕ್ಕನ ಮಾತ ಮೀರಿ ನಡಿಬ್ಯಾಡ ಮಗಳ. ಆಕಿ ಈ ಮನಿ ನೀಡೋ ಕೈ'' ಎಂದು ಹೇಳಿ ಬಿಕ್ಕಿ ಬಿಕ್ಕಿ ಅಳುತ್ತ, ತನ್ನ ಸೊಂಟದಲ್ಲಿದ್ದ ತಿಜೋರಿಯ ಬೀಗದ ಕೈ ರತ್ನವ್ವನಿಗೆ ಕೊಟ್ಟು, ಮಗನ ಕೈಯಲ್ಲಿ ರತ್ನವ್ವನ ಕೈಯಿಟ್ಟು, ಕಮಲವ್ವನ ಕೈ ಅವರಿಬ್ಬರ ಕೈ ಮೇಲೆ ಇಟ್ಟು, ಆಯಾಸದಿಂದ ಕಣ್ಣುಮುಚ್ಚಿ ಮಲಗಿದಳು.

ಆ ದಿನ ರಾತ್ರಿ, ಅವಳ ಮೈಯಲ್ಲಿ ವಿಪರೀತ ಜ್ವರತುಂಬಿತು, ವಾಂತಿಯಾಗಹತ್ತಿತ್ತು. ಬಾಯಿಗೆ ಹಾಕಿದ ಒಂದು ಹನಿ ನೀರೂ ಹೊಟ್ಟೆಯಲ್ಲಿ ಉಳಿಯಲಿಲ್ಲ. ಮರುದಿನ ಒಂದು ದಿನ ಹೇಗೋ ಡಾಕ್ಟರರ ಔಷಧೋಪಚಾರದಿಂದ ಉಸಿರಾಡುತ್ತಿತ್ತು. ನಾಡಿಗಳು ಬಿಡುತ್ತ ಹೊರಟಿದ್ದವು. ಮೂಡಣ ಹರಿಯುವ ಹೊತ್ತಿಗೆ ಶಿವ ಕಣ್ಣು ತೆರೆದ ಗೌರಕ್ಕ ಕಣ್ಣು ಮುಚ್ಚಿದಳು. ಗೌಡರ ಮನೆ ಗೋಳಿಟ್ಟಿತ್ತು.

ಶಿವಗಣಾರಾಧನೆ ಮುಗಿದು ನೆಂಟರಿಷ್ಟರೆಲ್ಲ ಹೋದ ಮೇಲೆ, ಒಂದು ದಿನ ಮಧ್ಯಾಹ್ನ, ಕಮಲವ್ವ ಮತ್ತು ನಿಂಗನಗೌಡರ ಊಟ ಮುಗಿಯುತ್ತ ಬಂದಿತ್ತು. ರತ್ನವ್ವ, ಗೌರಕ್ಕ ಕೊಟ್ಟ ಬೀಗದ ಕೈ ಗೊಂಚಲು ನಿಂಗನಗೌಡರ ಎದುರಿಟ್ಟು,

''ತಂಗಿ ಇದರ ಮ್ಯಾಲ ಅಧಿಕಾರ ನಿಂದಯವ್ವಾ'' ಎಂದಿಷ್ಟೇ ಹೇಳಿ ಅಲ್ಲಿಂದ ಹೊರಟುಹೋದಳು.

ನಿಂಗನಗೌಡರು ಎರಡನೆಯ ಮದುವೆಯಾದ ಮೇಲೆ ಅವಳು ಮೊದಲು ಸಾರೆ ಅವರೆದುರು ನಿಂತು ಮಾತನಾಡಿದ್ದಳು. ಕಾರಣ, ಗೌರಕ್ಕ ಅವಳ ಮೇಲೆ ಹೊರಿಸಿದ ಈ ಜವಾಬ್ದಾರಿ ನಿಂಗಗೌಡರ ಹಾಗೂ ಕಮಲವ್ವನ ಸಮಕ್ಷಮವೇ ಆಗಿತ್ತು. ಅದರಿಂದ ಮುಕ್ತಿ; ಅವರಿಬ್ಬರ ಸಮಕ್ಷಮವೇ ಆಗಬೇಕೆಂಬ ತೀರ್ಮಾನ ಅವಳದಾಗಿತ್ತು.

(ಮುಂದುವರೆಯುವುದು)



# ದೇವನೂರು ನಂಜಕ್ಕನ ಸಿರಿ ಮಹಾದೇವ



ಮಾತಾಡಿಸಿದವರು: ವೇದಾವತಿ ಮತ್ತು ಸುಮಾ ಎಂಬಾರ್
ಬರಹ: ಮಹೇಶ್ ಹರವೆ

ಮಾದೇವ್ನ ತಂದ ಊರು ದ್ಯಾವನೂರು. ನಮ್ತಂದ ಊರು ಕವಲಂದೆ. ನಮ್ಮ ಮನಲಿ ಗಂಡಮಕ್ಕ ಇಲ್ದೆ ಇದ್ದ್ಕ ಮನವಾಳ್ತನಕ್ಕ ಇವ್ರ ಅಪ್ಪ ಕವಲಂದೆಗ ಬಂದ್ರು, ಕವಲಂದೇಲೇ ಮಾದೇವ ಹುಟ್ಟಿದ್ದು. ಆಗ ಎಂಟು ದಿನದ ಹೊಟ್ಟೆ ನೋವು, ಎಲ್ರೂ, ಕೂಸು ಎದೆಗೇರು ಬುಟ್ಟದ ಅಂತಿದ್ರು. ಆಸ್ಪತ್ರಿಲ್ಲ, ನರ್ಸಿರಿಲ್ಲ. ಯಾರಂದರ ಯಾರಿಲ್ಲ. ಮನಲಿಯ ಹೆರಿಗ ಆಯ್ತು. ಆಗ ಬಂದ್ರು ಇವರ ತಂದ. ಆಗ ಪೋಲಿಸ ಕೆಲ್ಸದಲ್ಲಿದ್ರು. ನಮ್ತಪ್ರು ದನಗಳು, ಎಮ್ಮಗಳು ಎಲ್ಲಾ ಇತ್ತು. ಮನೆ ಜನವೆಲ್ಲ ಬಾಣ್ತೆ ಅಂತ ನನ್ ದಿಕ್ಕ ನಿಂತ್ಕಂಬುಟ್ಲು ದನ, ಎಮ್ಮೆಗಳ ಕಸಕಡ್ಡಿಯೆಲ್ಲ ಮನೇಲೆ ಗುಡ್ಡ ಹಾಕ್ಕೋಯ್ತು. ಇವ್ರ ತಂದೆಯವರು, ಬಂದವರು, ಪೋಲಿಸ್ ಬಟ್ಟೆನ್ನೆಲ್ಲ ಬಿಚ್ಚಾಕ್ಬುಟ್ಟು ಕಸನೆಲ್ಲ ಗುಡ್ಸಿ ಜಮೀನ್ಗ ಸುರುದ್ರು.

ಮಾದೇವ ಆದ ಮೇಲ ಮೂರು ಮಕ್ಕ ತೀರ್ಕಂಬುಟ್ರು. ಆಗ ಜನ, 'ಮೂರು ಮಕ್ಕ ಹೋಗವ ಮುಕ್ಕಣ್ಣನ ಬೇಡ್ಕಂಡ್ರೂ, ಮಕ್ಕಳಾಗಲ್ಲ' ಅಂದ್ರು. ಆಗ ಮಾದೇಶ್ವರ್ನ ಬೆಟ್ಟಕ್ಕ ನಾನು ಹೋದಿ. ಆಗ ಮಾದೇಶ್ವರ್ನ ಬೆಟ್ಟಕ್ಕ ಐದು ರೂಪಾಯ್ನು ಚಾರ್ಜು. ಮಾದೇವ್ನ ಕೈಲಿ ಕೊಡಾಕ ಹತ್ ಪೈಸೂವಿ ಕೈಲಿಲ್ಲ. ಆಗ ಬಸ್ಗೂವಿ ಕಾಸಿಲ್ಲ. ಮೂರು ರಾತ್ರ ಮೂರು ಹಗಲು ನಡೆದಿವಿ. ಆಗ ಜೋಳದ ಮುದ್ದ ಕಟ್ಕಂಡು ಹೋಗಿ ಅವ್ನ ಸೇವೆ ಮಾಡ್ದಿ.

ಮಾದೇವ್ನಗ ಐದು ತಿಂಗ. ಆ ಐದು ತಿಂಗ್ಳ ಮಗೂಗ, ಒಂದು ಜೋಳ್ದಾಗ ಒಂದು ಗುಳ್ಳೆ, ನೆತ್ತಿ ಮೇಲೆ ಕಾಣುಸ್ತು. ಹಳ್ಳೀಲಿ ಇದ್ದ ಇಸಬ್ಲು ಅಂದ್ಬುಟ್ಟು ಬೆಳ್ಳುಳ್ಳಿ ಅರ್ದು ಆ ಗಾಯ್ಕ ಮೆತ್ತುಬುಟ್ಟರು. ಆ ಗುಳ್ಳೆ ಸ್ವಲ್ಪ ಕೆಂಪ್ಗ ಕಂಡ್ಬುಡ್ತು. ಕಾಣಗಂಟ ಅದೆಲ್ಲಾ ಮ್ಯಾಕ್ ಮೊಕ್ಕ ಉಬ್ಕಂಡ್ ಬಂದ್ಬುಡ್ತು. ಅದ್ರ ಒಳ್ಗೆ ಮಿದುಳ ಕಂಡ್ಬುಡ್ತು, ಗಾಯ ತೊಳ್ದಬುಟ್ಲಲ್ಲ ನಂ ತಾಯಿ, ನೀರಾಡಿ ಇಷ್ಟಿಷ್ಟುದ್ದಕ ನೆತ್ತಿ ದೋಬಾಗೋಯ್ತು. ಒಳ್ಗಿಂದ ಮಿದುಳ ಬಂದ್ಬುಡ್ತು. ನಂ ಕವಲಂದಲಿ ಆಸ್ಪತ್ರ ಇರ್ಲಿಲ್ಲ ಆಸ್ಪತ್ರ ಇದ್ದದ್ದು ದ್ಯಾವನೂರ್ನಲ್ಲಿ. ನಮ್ತಾಯಿ ಕೂಸ ಹಿಡ್ಕಂಡಿರಕ, ನಾನು ಕೂಸ್ನ ನೆತ್ತು ಉಫ್ ಉಫ್ ಅಂತ ನೆತ್ತಿ ಉರಬ್ಕಂಡು ನಡ್ಕಂಡು ಹೋಗಾಕ, ಕೂಸು ಅಲಾಕ. ದ್ಯಾವನೂರ್ಗ ಹೋದ್ರ ಅಲ್ಲಿ ಚೀಟಿ ಸೀರ್ಗಳ್ನೆಲ್ಲ ನರ್ಸಿರು ಒಣಾಕ್ಕಂಡು ಇದ್ರಲ್ಲ, ಆ ಸೀರ್ಗಳ ನೋಡಿ ಕೂಸು ಅಳು ನಿಲ್ಲುಸ್ತು

ಇಂಗಿದ್ದಾಗ ಅವರ್ತಂದ ಬಂದ್ರು. ಮೈಸೂರಲ್ಲಿ ಕಿರಸ್ತಾನದ ಆಸ್ಪತ್ರ ಅದ ಅಲ್ಲಿ. ಅಲ್ಲಿ ತೋರುಸ್ತು. ಅಶೋಕಪುರಂ ನಾಕನೇ ಕ್ರಾಸ್ಲಿ ಮನಮಾಡ್ತು. ಅಲ್ಲಿ ನೀರ್ಗ ಹೊಡದಾಟ. ನೀರ್ಗೊ ಡ್ಲೊಲ್ಲು. ಬೀದಿ ನಲ್ಲಿಗಳು, ಗುಡ್ಡಾಕ ಬುಡರು



**ಅಗಾಧ ಪ್ರತಿಭೆ, ಅಪರೂಪದ ಒಳನೋಟ ಮತ್ತು ಮುಟ್ಟಿದ್ದನ್ನು 'ಕತೆ'ಯಾಗಿಸಬಲ್ಲ ಮಾಂತ್ರಿಕತೆ ಹೊಂದಿರುವ ದೇವನೂರು, ಸಾಹಿತ್ಯದಲ್ಲಷ್ಟೇ ಅಲ್ಲದೆ ನಿತ್ಯಜೀವನದಲ್ಲೂ ಅಖಂಡತೆ, ಪ್ರಾಮಾಣಿಕತೆಗಳಿಗೆ ಪ್ರತಿರೂಪವಾದವರು. 'ಸಂತ'ನಾಗಿ, ಅರೆಬೆಳಕಿನಲ್ಲಿ ಮಿಂಚುವ ಜೀವಂತ ದಂತಕತೆಯಾಗಿ, ಸುತ್ತಲಿನವರಿಗೆ ಕಂಡವರು. ಈ 'ಕುಶಾಗ್ರಮತಿ ಕೂಸು' ಬಡತನ, ಅಭದ್ರತೆ, ಸಾಮಾಜಿಕ ಅಸಮಾನತೆಗಳ ಮಧ್ಯದಲ್ಲೂ ತನ್ನ ವಿಶಿಷ್ಟಗುಣಗಳಿಂದಾಗಿ ಲಕಲಕಿಸಿದ್ದನ್ನು ಅವರ ತಾಯಿ ನಂಜಮ್ಮ ಇಲ್ಲಿ ಅಕ್ಕರೆಯಿಂದ ಹೇಳಿದ್ದಾರೆ.**

ಅದ್ನೆಲ್ಲಾವಿ ಹಿಡ್ಕಳಗಂಟ ತಾವು ಕೊಡೊಲ್ರು. ನಾವು ಬಿಂದ್ಗ ಹಿಡ್ಕಂಡು ನಿಂತರದು. 'ಪೋಲಿಸನವನಾದ್ರ, ಅವ್ನ ಮನಗ ನೀರ ಬುಡದಿಲ್ಲ' ಅನ್ನರು. 'ಆಯ್ತಪ, ಮಗು ಮನಗ್ಸಬುಟ್ಟು ಬಂದೀನಿ' ಅಂದ್ರೂ, ನೀರು ಬುಡೊಲ್ರು. ಬಾಡ್ಗ ಮನವ್ರು ಸ್ವಲ್ಪ ನೀರು ಕೊಟ್ರ, ಮೈ ತೊಳದು, ಆಗ ಆ ಆಸ್ಪತ್ರ ಈ ಆಸ್ಪತ್ರ ಅಂತೆಲ್ಲ ತಿರಗದು. ಈಗ್ಲೂ ನನ್ಮಗನ್ಗ ಬುಂಡೆ ನೆತ್ತಿ ಮ್ಯಾಲ ಮುಚ್ಚ

ಸಂಗ್ರಹ: ಕರೀಗೌಡ ಬೀಚನಹಳ್ಳಿ

ಅದ. ಯಾನೇಳ್ಲಿ? ಅಷ್ಟು ಕಷ್ಟ ಬಿದ್ದೀನಿ ಆ ಮಗ್ನಾಗ. ನಮ್ಮ ಅಪ್ಪೋರ ಮನಲಿ ಗಂಡು ಮಕ್ಳಿಲ್ಲ. ಇವ್ನೆ ದೊಡ್ಡವ. ನಮ್ಮಾಯಿ, 8-9 ತಿಂಗಳಗಂಟೂವ, ನೋಡ್ತಿನಿ ಅಂದವರ್ಗ ಇವ್ನ ತೋರ್ಸ್ಲಿ ಕೊಡ್ತಿರಲಿಲ್ಲ.

**ಇನ್ನ್ಯಾವ ಚಾವ್ಡಿಗ್ಯಾ ಕರ್ಕಂಡೋಗಾದು?**

ಸಣ್ಣಂವನಿದ್ದಾಗ ಇಂವ ಮಾದೇವ, ಹೊಲ್ಕ ಮನ್ಸ್ಗೋಗದು, ದನಕರು ಎಲ್ಲಾನೂ ನೋಡ್ಕತಿದ್ದ. ಹೊಲದಲ್ಲಿ ಹೇರು ಕಟ್ಟಿದ್ದ, ಬಿತ್ತನ ಜೋಳ ಬುಡನು. ಹೊಲಕ್ಕೋಗಾದು ಅಂದ್ರ ತುಂಬಾ ಪ್ರೀತಿ. ಎದ್ದೇಟಗ್ಲಿಯ ಹೊಲ್ಕ ಹೋಗಾದು ಅಣಬ, ಅವಲ್ಲ ಅಣಬ ಅವ ಕಿತ್ಕ ಬಂದು ಸಾರ ಮಾಡವ್ಯೆ ಅನ್ನದು. ಸಣ್ಣಂವನಾಗಿದ್ದಾಗಿಂದೂವಿ ತಾನಾಯ್ತು, ತನ್ನ ಕೆಲ್ಸವಾಯ್ತು, ಪೂಜ ಮಾಡ್ತಿರಲಿಲ್ಲ. ತನ್ನ ಅಕ್ಷರುಂಟು ತಾನುಂಟು. ಯಾರ ಜೊತಲೂವಿ ಸೇರ್ತಾವನಲ್ಲ.

ಮಾದೇವ (ಕೈತೋರಿಸಿ) ಇಷ್ಟಿದ್ದ, ಚಿಕ್ಕವ. ನಂ ಜಮೀನ್ನಿ ಜೋಳ ಮಟ್ಟಾಗಿ ಬೆಳ್ದಿತ್ತು. ಒಬ್ಬ ಲಿಂಗಾಯತ್ರವ ಹೋಗಿ, ಜೋಳ್ದ ತೆನೆ ಮುರ್ದು, ಜೇಲಿ ಮರಲಿ ಮಡಗಿದ್ದ. ಮಾದೇವ ನನ್ನೊಂದ್ಗ ಬಂದಿದ್ದ. ಆ ಲಿಂಗಾಯತ್ರವ ಇಷ್ಟು ನಮ್ಮ ತೆನೆ ಕದ್ದು ಮುರ್ದು ಇಟ್ಟವನಲ್ಲಾ ಅಂದ್ಬುಟ್ಟು, ಪಂಚಾಯಿತಿಗೆ ಹಾಕ್ಬವ ಅಂದ್ಬುಟ್ಟು, ನಾನೇ ಇನ್ನಷ್ಟು ತೆನೆ ಮುರ್ದು ಅದರ್ಜೊತಲಿ ನೇರಿಸಿ ಆಮ್ಯಾಲ ಪಕ್ಕದ ಬಸಪ್ಪನೋರು ಅನ್ನವರ್ನ ಕರ್ಕಬಂದು, 'ನೋಡಿ, ಇಷ್ಟು ತೆನ ಕದ್ದು ಮುರ್ದ್ವರಲ್ಲ' ಅಂದಿ. ಅದ್ಕ ಅವ್ರು, 'ಚಾವ್ಡಿ ತವಕ ಕರಕೊಂಡೋಗು ನಂಜೆ, ತಪ್ಪು ಮಡಗ್ನಾವು' ಅಂದ್ರು. ತೆನೆ ಮುರ್ದವ 'ನನ್ಗ ಹೊಟ್ಗ ಇರ್ಲಿಲ್ಲ ಮುರ್ದ್ದಿ' ಅಂದ. ಮಾದೇವ 'ನಮ್ಮಪ್ಪನೂ ಒಸಿ ತೆನೆ ಮುರ್ದು ಸೇರ್ಸ್ಲಿ ಹೆಚ್ಚು ಮಾಡವ್ನೆ' ಅಂದ. ಇನ್ನ್ಯಾವ ಚಾವ್ಡಿಗ್ಯಾ ಕರ್ಕಂಡೊಗೋದು?

ಆ ಥರವಾಗಾಯ್ತು. ಈಗ್ಲೂವಿ ಕಷ್ಟದವರ್ಗ ಜೀವ ಬುಡುತಾನ. ನಮ್ದು ಕುಟುಂಬ ದೊಡ್ಡಾಗ.



ಎಲ್ಲೂವಿ ಅವ್ನಕಂಡ್ರ ಅಂಜ್ಕಂಡು ನಡಗ್ತಾರ
ಎಲ್ಲೂವಿ ಅವ್ನ ಎದ್ರ ನಿಂತು ಮಾತಾಡಲ್ಲ. ನಾ
ಹೆತ್ತ ತಾಯಲ್ವ? ಆದ್ರೂವಿ ಅವ್ವಾ ಅಂದ್ಬುಟ್ರೆ
ತೀರೋಯ್ತು. ಮಾತಾಡಲ್ಲ. ಅಂವ ಮನೆ
ಓತ್ರ, ಬರಿತಿದ್ರ ನಾ ಟೀ ತಕ್ಕೊಂಡು
ಹೋದ್ರೂವಿ ಮಾತಾಡಾಂಗಿಲ್ಲ-ಸುಳ್ಳಾಡಾಕಿಲ್ಲ.

**ಲಾರಿ ಹತ್ಕಂಡು ಮೈಸೂರ್ಗೋದ ಮಗ**

ಮಾದೇವ ತಂದಗೆ ಹೆದರ್ತಿದ್ದ. ಒಬ್ಬ ಮಗ
ಹಲ್ಲು ನೋವಾಗಿತ್ತು. ಮಜ್ಗ ತರ್ಲಕ ಅಂ
ಅವರಪ್ಪ ದುಡ್ಡಿಟ್ಟಿದ್ದರ, ಮಾದೇವ ಅದ್ಕ ಬೀ
ತಕ್ಕಂಬುಟ್ಟ. ಮದ್ಗಿಲ್ಲ. ಅದ್ಕ ತಮ್ಮ, 'ಅಪ್ಪ ಅ
ಮದ್ಗಿಲ್ಲ. ದುಡ್ಡಗ ಅಣ್ಣ ಬೀಡಿ ತಕ್ಕಂಬುಟ್ಟ
ಅಂದ. ಇದ್ನ ಮಾಡೋದು ಅಂತೇ
ಎರಡೇಟ್ನಗ ಹೊಡದ್ಬುಟ್ರು ಮಾದೇವ್ನಗ. ಇಂ
ಅದೇ ಮೊಕ್ಕ ಮೈಸೂರ್ಗ ಬಂದ್‌ಬುಟ್ಟ. ಆ
ನಾನು ಬತ್ತಾನೀಗ ಜೇಯ್ಲಿ ಆರಾಂಕಂಬುಟ್ಟಿದ್ದಿ
ನಿಮ್ಮ ಮಗ ಲಾರಿ ಹತ್ಕಂಡು ಮೈಸೂರ್ಗೋ
ಅಂತ ಎಲ್ಲಾ ಅಂದ್ರು. ನಾ ರೋಧನಾ ಮಾಡ
ಇರ್ವಾಗ ಅದ್ಕ ಬಸ್ ಹತ್ಕಂಡು ಮೈಸೂರ್
ಬಂದು, ಒಂದ ಹೋಟ್ಲಲ್ಲಿ ಮಾದೇ
ಹಿಂದಿಯೇ ಹೋಗಿ ಕೂತರ ಇವ್ರ ತಂದ. ಬ
ಅಂತ ಕರ್ಕಂಡು ಬರೋತನಕ ನಾ ಮೋ
ತೊಳ್ಡಿಲ್ಲ. ಊಟ ಮಾಡಿಲ್ಲ. ಬರೀ ಅ

ೂತಿದ್ದಿ. ಮನಗ ಕರ್ಕ ಬಂದ್ರು. ಆಗ ಊಟ ಾಡ್ಕಂಡು ಖುಷಿಯಾಗಿದ್ವು.

**ಾರುವಿಗೆ ಮಡಗಿದ್ದ ಬುಡುಸ್ಗತ್ತಾರ ನನ್ಮಕ್ಕ**

ಅವ್ರ ತಂದ ತೀರ್ಕಂಡಾಗ ಮಾದೇವ .ಯು.ಸಿ. ಓದ್ತಿದ್ದ. ಬಸುರಾಜು, ಶಂಕ್ರ, ಈ ುಕ್ಕೆಲ್ಲ (ಕೈತೋರಿಸಿ) ಇಷ್ಟಿಷ್ಟ ಇದ್ರು. ನಮಗಾಗ 6 ರೂಪಾಯಿ ಪಿಂಚಣಿ ಬತ್ತಿತ್ತು. ಈ ಮೂವತ್ತಾರು ೂಪಾಯ್ಲಿ ಇವರ್ನೆಲ್ಲಾನುವಿ ನಾ ಯ್ಯಾಗ ಸಾಕದು?

ಹಳ್ಳೀಲಿ ಯಾರಂದ್ರ ಯಾರೂ ಇಲ್ಲ. ಎಲ್ರೂ ಕೂಲಿಗ ಗುಳಗಳ್ನ ಹೋಗಾರು. ನಾನೂ ಂದ್ನಿಂದ ಹೋಗಾನು. ಇದ್ದದ್ದ ಪಾತ್ರ ಪನ್ನಂಗ, ಅವರಪ್ಪ ತಂದಿದ್ದೆಲ್ಲಾ ಗಿರುವ್ಗಿಟ್ಟು ಮಾರ್ದಿ, ಮುಂದ್ಕ ನನ್ಮಕ್ಕ ತಕ್ಕತ್ತರ, ಕಟ್ಸಕತ್ತಾರ ಅಂತ. ಂದ್ಸಾರಿ ಮೂರು ಜೇನ್ಗಂಟ ತಿನ್ನಕ್ಕ ಏನೂ ಇಲ್ಲ. ಅರ್ವಾಣ, ತಪ್ಪಲ ಕಂಚ್ನವು ತಕ್ಕಂಡು ಂಜನಗೂಡು ರೈಲಸ್ಟೇಷನ್ ತಾವ್ಕ ಬಂದಿ. ನನ್ನ ಅಳಿಯನವ್ರು ನಂಜನಗೂಡ್ಲಿ ಆಸ್ಪತ್ರೆಯಲ್ಲಿ ಇದ್ರು, ಕಾಂಪೌಂಡ್ರಾಗಿ. ಆಗ ಪಾತ್ರ ಪಗಡ ಜೊತಗ ವಾಲಾನುವಿ ಬಿಚ್ಚಿ ಬರಿ ಐವತ್ತು ರೂಪಾಯ್ಗ ಮಡುಗ್ಬುಟ್ಟಿ. ನನ್ನ ಮಕ್ಕಳ್ಗಿಂತಲೂ ಹೆಚ್ಚ ಅಂತ ಅಳಿಯನ ಕೈಲಿ ಮಡುಗ್ಸಬುಟ್ಟಿ. ಅವ್ರ ತಂದ ಮಾಡಿಸಿದ ವಾಲ ಸಾಲಗ್ರಾಮದಲ್ಲಿ. ಆಗ ಐವತ್ತು ರುಪಾಯ್ಗ ಮುನ್ನೂರು ರುಪಾಯಿ ಬಡ್ಡಿ, ಐವತ್ರುಪಾಯ್ನ ಅಸ್ಲು ಅಂದ್ಬುಟ್ಟು ನೋಟೀಸ್ ಕಳ್ಸಿದ್ರು. ನೋಟೀಸ್ನ ಚೀಟಿ ತಕ್ಕೊಂಡೋಗಿ ನಮ್ಮ ಕವಲಂದ ಮನಲಿ ಟ್ರಂಕ್ನಲ್ಲಿ ಮಡಗಿದ್ದಿ. ಈ ಮಗ ಬಸುರಾಜ 'ನಮ್ಮವ್ನ ವಾಲ ನಾಳ ಹರಾಜಾಗ್ತದ' ಅಂತಿದ್ದ. ಅದ್ಕ ವಾಸ, ಸುಮ್ಕಿರಪ್ಪ ಅಂದ್ರ, ಇವ ಚಿಕ್ಕವ ಶಂಕ್ರ ಅಳಕ್ಕೇರಿಕಂಡ. ಷ್ಟಪ್ಪ ಮಾಡ್ಸಿದ ವಾಲ ನಾಳ ಹರಾಜಾಯ್ತದ ಅಂತ. ಇನ್ನೇನಾಗೋಯ್ತು ಅಷ್ಟೊತ್ಗ ಮಾದೇವ ಬಂದ. ಈ ಮಗ ಚೀಟಿ ತಕ್ಕಂಡು ಬಂದ. ಮುನ್ನೂರು ರುಪಾಯಿ ಬಡ್ಡಿ ಐವತ್ತು ರುಪಾಯಿ ಅಸ್ಲು. ಇವ ಅದ ತಕ್ಕೊಂಡೋಗಿ, ನೂರು ರುಪಾಯ್ನ ಬಡ್ಡಿ ಐವತ್ತು ರುಪಾಯ್ನ ಅಸ್ಲು ಕೊಟ್ಬಿಟ್ಟು ಬುಡ್ಸಗಂಡು ಬಂದ್ಬುಟ್ಟ.

**ಬಾನದ್ ಸೆರಗ ತನ್ನೂವಿ ಹೆಸರ ಪಡ್ದನ**

ಮಾದೇವ ಉದ್ದಕ್ಕೂ ಕತ ಬರಿಯೋದು, ಓದಾದು. ಪುಸ್ತಕ ತಕ್ಕಳದು. ಕತ ಬರಿಬ್ಯಾಡಪ್ಪ, ಬ್ಯಾಡಪ್ಪ ನೀ ಓದು ಓದು ಅಂತಿದ್ರು ಅವರಪ್ಪ. ಆದ್ರೂವಿ ಕತ ಬರ್ದು ಬರ್ದು ಮುಂದುವರ್ದ್ ಕಂಡ. ಈಗ ಕತಾ ಬರ್ದು ಬಾನದ್ ಸೆರಗ ತನ್ನೂವಿ ಹೆಸರ ಪಡ್ದಾನ. ಅಮೆರಿಕಾಗೆ ಹೋದಾಗ ಮೂರು ತಿಂಗ್ಳಗಂಟ ಬರ್ನಿಲ್ಲ. ನಂಗ ಭಯ ಆಗೋಯ್ತು. ಒಂದಿನ ಫೋನ್ಮಾಡಿ, 'ಮಾದೇವ' ಅಂದ್ಬುಟ್ಟು ಅಳಕೆರಿಕಂಡಿ.

ಈಗ ಪರಸ್ಥಳದಲ್ಲು ದೇವನೂರ ಮಾದೇವ ಅಂದ್ರ ಯಾವ ನನ್ತಾಯಿ ಹೆತ್ತಿದ್ದಳಪ್ಪಾ ಅಂದರಂತ. ಇವತ್ತು ಅಂತಾರ. ಅವತ್ತು ಅವರಪ್ಪ ಸತ್ತಮ್ಯಾಲ ಇವ್ರ ಸಾಕಾಕ ಎಷ್ಟು ಕಷ್ಟಪಟ್ಟನಿ. ನಾನು ದುಡ್ದು ಎದಬಗ್ದು ಮುರ್ದು ಸಾಕಿನಿ. ಸೊಪ್ಪ ಕುಯ್ಕಂಡು ಬಂದ್ರ ಅದಕ್ಕಾಕಕ ಉಪ್ಪಿಲ್ಲ. ಒಂದಿನ ಹೊಲ್ದಿಂದ ಬತ್ತೀನಿ, ಉಸ್ಸೋ ಅಂದ್ಕಂಡು, ಮಳಬಂದ್ಬಿಡ್ತು. ಸಿಳ್ಳು ಗುಡುಗ್ನ ಜೊತೆ ನೆನ್ಕಂಡು ಮನ್ಗ ಬಂದೀನಿ. ಈ ಮಗ್ನೂ ಬಂದ ಆ ಮಗ್ನೂ ಬಂದ, ಎಲ್ರೂ ಬಂದ್ರು. ಈ ಪಾಟಿ ಮಳಲಿ ನೆನ್ಕಂಡು ಬಂದಾಳಲ್ಲ ಅಂತ ಎಲ್ರೂ ಅತ್ತರು. 'ಅಯ್ಯೋ ಬುಡಪ್ಪ, ಶಿವ ನಮ್ಗ ಇದೇ ಕಷ್ಟಾ ಕೊಟ್ಟಾನ' ಅಂದಿ. ಇಂದು ಆ ಕಷ್ಟ ಕೊಟ್ಟಿಲ್ಲ. ಹಿಂದೆ ನಾ ಬತ್ತಿದ್ರ ಜನ ದಾರಿ ತಪ್ಸರು, ಯಾನಾರು ಕೇಳಾಳು ಅಂತ, ಈಗ ತಬ್ಕತಾರ. ಈಗ ಜನ ಏನಂತಾರ ನೋಡಿ. ನನ್ನ ಉಜ್ವಲ್ನ ಮದ್ನೇಲಿ ಮೂರು ಸಾವಿರ ರೂಪಾಯ್ನ ಸೀರ ತಂದರ, ರೇಸ್ಮ ಸೀರ. ಇಲ್ಲಿ ಮಡ್ಸಿ ಮಡ್ಗಿದೀನಿ. ನಾನು ನನ್ನ ಕಷ್ಟಾನೆಲ್ಲಾ ನೆನಸ್ಕತಿನಿ. ಅದ್ಕ ನನ್ಮಕ್ಕ ಮಣ್ಣು ಹಿಡಿದ್ರು ಅದು ಚಿನ್ನ ಆಯ್ತದ.

(ಕೃಪೆ: ''ಅಭಿನವ'' ಚಾತುರ್ಮಾಸಿಕದ ದೇವನೂರು ವಿಶೇಷಾಂಕ)

ವಿಶ್ವ ಭಾರತಿ - 9



## ಕಾಲ್‌ಮೇನ್ ಮಿಕ್ಸ್‌ಜಥ್

# ಹಸಿರು ನೊಣ




ಹಳ್ಳಿಯಲ್ಲಿ ಅತಿಹೆಚ್ಚು ಶ್ರೀಮಂತನಾಗಿದ್ದ ವೃದ್ಧ ರೈತ ಖಾಯಿಲೆ ಬಿದ್ದಿದ್ದ. ಸಾವಿನ ಅಂಚಿನಲ್ಲಿದ್ದಂತಿತ್ತು ಅವನ ಸ್ಥಿತಿ. ಯಮಧರ್ಮರಾಜ ಅವನ ಪಾಪ- ಪುಣ್ಯದ ಬಗ್ಗೆ ಹೇಳುತ್ತಿದ್ದ:

''ಜಾನನನ್ನು ನೋಡಿ. ಮನುಷ್ಯರಾದ ನೀವು ನಿಮ್ಮನ್ನು ಏನೆಂದು ತಿಳಿದುಕೊಂಡಿದ್ದೀರಿ? ನೀವೇನೂ ಅಲ್ಲವೇ ಅಲ್ಲ. ಆದರೆ ಜಾನ್, ವಾಸ್ತವವಾ ಏನಾದರೂ ಸ್ವಲ್ಪ ಆಗಿದ್ದಾನೆ. ನಗರದ ನ್ಯಾಯ ಧೀಶರೂ ಅವನೊಂದಿಗೆ ಕೈ ಕುಲುಕುತ್ತಾರೆ. ಪ್ರದೇಶದ ಒಡತಿ ಅವನನ್ನು ನೋಡಲು ಬರುತ್ತಾ ಅವನು ನಿಮ್ಮೆಲ್ಲರಿಗಿಂತ ಶ್ರೀಮಂತ. ಆದರೂ ನಾ ಅವನನ್ನು ಸೋಲಿಸಿದೆ. ಇದಕ್ಕಾಗಿ ಅವನಿಗೆ ಕಚ್ಚ

ನಾನ್ಯಾವ ಹಸಿದ ತೋಳವನ್ನೂ ಕಳಿಸಲಿಲ್ಲ; ಅವನ ಮೇಲೆ ದೊಡ್ಡ ಮರವನ್ನು ಉರುಳಿಸಬೇಕಾದ ಅಗತ್ಯವೂ ಉಂಟಾಗಲಿಲ್ಲ. ಅವನಿಗೆ ಒಂದು ಚಿಕ್ಕ ನೊಣವೇ ಸಾಕಾಗಿತ್ತು.''

ವಾಸ್ತವವಾಗಿ ಆಗಿದ್ದೂ ಹೀಗೆಯೇ. ನೊಣವೊಂದು ಅವನ ಕೈಗೆ ಕಚ್ಚಿತ್ತು; ನೋಡು-ನೋಡುತ್ತಲೇ ಆ ಕೈ ಬಾತುಕೊಂಡಿತು. ಅವನು ಕಪ್ಪು ಮತ್ತು ಕೆಂಪಗಾಗುತ್ತಾ ಹೋದ.

ಹಳ್ಳಿಯ ಪಾದರಿಗಳು ಮತ್ತು ಪ್ರದೇಶದ ಸರ್ಕಾರ ಅವನು ವೈದ್ಯರಿಗೆ ತನ್ನ ಕೈ ತೋರಿಸಲು ಮನವೊಲಿಸಿತು.

ನಗರದ ಓರ್ವ ಸಾಮಾನ್ಯ ವೈದ್ಯರನ್ನು ಕರೆಸಿದರೆ ಸಾಕೆಂದು ಅವನು ಬಯಸುತ್ತಿದ್ದ. ಆದರೆ ಎಲ್ಲರೂ ಅವನಿಗೆ ತಂತಿ ಕಳುಹಿಸಿ, ರಾಜಧಾನಿಯಿಂದ ಶ್ರೇಷ್ಠ ವೈದ್ಯರನ್ನು ಕರೆಸುವಂತೆ ಆಗ್ರಹಿಸಿದರು. ಡಾಕ್ಟರ್ ಬಿರಲಿಯವರ ಹೆಸರು ಪ್ರಸ್ತಾಪಕ್ಕೆ ಬಂದಿತು. ಅವರು ಒಮ್ಮೆ ಬಂದು ನೋಡಿದರೆ, ನೂರು ರೂಪಾಯಿಗಳ ಫೀಸ್ ತೆಗೆದುಕೊಳ್ಳುತ್ತಾರೆ. ಆದರೆ ಹಣ ವ್ಯರ್ಥವಾಗುವುದಿಲ್ಲ.

''ಎಂಥಾ ತಮಾಶೆ! ಒಂದು ಸಣ್ಣ ನೊಣಕ್ಕೆ ನೂರು ರೂಪಾಯಿಯನ್ನು ಖರ್ಚು ಮಾಡಬೇಕಾಗುತ್ತೆ'', ವೃದ್ಧ ರೈತ ಗೊಣಗಿದ.

'ನಾವೇ ಹಣ ಕೊಡ್ತೀವಿ' ಅಂತ ಸರ್ಕಾರ ಹೇಳಿತು. ಈ ವರಸೆ ಫಲಪ್ರದವಾಯಿತು. ಜಾನ್ ಓರ್ವ ಆತ್ಮಾಭಿಮಾನಿಯಾಗಿದ್ದ. ರಾಜಧಾನಿಗೆ ತಂತಿ ಕಳುಹಿಸಲಾಯಿತು. ವೈದ್ಯರನ್ನು ಕರೆತರಲು ಸ್ಟೇಷನ್‌ಗೆ ವಾಹನವನ್ನು ಕಳುಹಿಸಲಾಯಿತು. ಕಾರಿನಿಂದ, ಕನ್ನಡಕಧಾರಿ ಯುವಕನೊಬ್ಬ ಇಳಿದುಬಂದ. ಅವನ ಮುಖದಲ್ಲಿ ಕಿಂಚಿತ್ತೂ ದರ್ಪವಿರಲಿಲ್ಲ.

ವೃದ್ಧ ರೈತನ ಪ್ರಾಯದ ಪತ್ನಿ, ಬಾಗಿಲಬಳಿ ಅವನನ್ನು ಸ್ವಾಗತಿಸಿದಳು.

''ನೀವು ವೈದ್ಯರಲ್ವ, ಬನ್ನಿ, ನನ್ನ ಪತಿಯನ್ನು ನೋಡಿ. ಅವರ ಕೈಗೆ ಒಂದು ನೊಣ ಕಚ್ಚಿತ್ತು. ಆದರೆ ಈಗ ಅವರು ಆನೆ ಕಚ್ಚಿದಂತೆ ರಂಪಾಟ ಮಾಡ್ತಿದ್ದಾರೆ.''

ಅವಳ ಈ ಮಾತುಗಳು ಖಂಡಿತ ಸುಳ್ಳಾಗಿದ್ದವು. ಜಾನ್‌ನ ಬಾಯಿಯಿಂದ ಒಂದು ಶಬ್ದವೂ ಬಂದಿರಲಿಲ್ಲ. ನೊಣ ಕಚ್ಚಿದ ವಿಚಾರವನ್ನು ಅವನೆಂದೂ ಯಾರಿಗೂ ಹೇಳಿರಲಿಲ್ಲ. ಕೇಳಿದಾಗ ಮಾತ್ರ ಬಹುಮೆಲ್ಲನೆ ಹೇಳುತ್ತಿದ್ದ. ಅವನು ಹಾಸಿಗೆ ಮೇಲೆ ಬಿದ್ದುಕೊಂಡು ಸದಾ ಪ್ರಸನ್ನಚಿತ್ತದಿಂದಿರಲು ಪ್ರಯತ್ನಿಸುತ್ತಿದ್ದ. ಬಾಯಿಯಲ್ಲಿ ಸದಾ ಗುಡಗುಡಿಯ ಪೈಪ್ ಇರುತ್ತಿತ್ತು.

''ಸ್ವಾಮಿ, ನಿಮಗೇನು ತೊಂದ್ರೆಯಾಗ್ತಿದೆ? ನೊಣ ಕಚ್ಚಿದೆ ಅಂತ ಕೇಳಿದೆ...'', ವೈದ್ಯರು ಅವನ ಸಮೀಪಕ್ಕೆ ಬಂದರು.

''ಹೌದು'', ವೃದ್ಧ ಮೆಲ್ಲನೆ ಹೇಳಿದ.

''ನೊಣ ಹೇಗಿತ್ತು?''

''ಒಂದು ಹಸಿರು ನೊಣ...''

''ಡಾಕ್ಟರ್ ಸಾಹೇಬ್ರೆ, ನೀವು ಇವರನ್ನು ವಿಚಾರಿಸುತ್ತಿರಿ'', ಜಾನ್‌ನ ಹೆಂಡತಿ ಅವನ ಮಾತನ್ನು ತಡೆದು ಹೇಳಿದಳು, ''ನಾನು ಸ್ವಲ್ಪ ಅಡುಗೆ ಮನೆಗೆ ಹೋಗ್ತೀನಿ. ಚಪಾತಿ, ಕಾವಲಿಯ ಮೇಲಿದೆ''

''ಒಳ್ಳೆಯದಮ್ಮ!'', ವೈದ್ಯರು ನಿರ್ಲಕ್ಷ್ಯದಿಂದ ಹೇಳಿದರು. ಅವಳಿಗೆ ಯಾರೋ ಕುಟುಕಿದಂತಾಯಿತು.

''ಓಹೋ, ನೀವು ನನ್ನ ತಂದೆಯ ವಯಸ್ಸಿನವರು'', ಹೆಂಡತಿ ಸ್ವಲ್ಪ ರೇಗುತ್ತಾ, ನಗುಮುಖ ಮಾಡಿ ಹೇಳಿದಳು, ''ಬಹುಶಃ ನೀವು ಹಾಕಿಕೊಂಡ ಕನ್ನಡಕದಿಂದ ಅಸ್ಪಷ್ಟವಾಗಿ ಕಾಣಿಸುತ್ತಿರಬಹುದು.'' ಹೀಗೆಂದು, ಕೂಡಲೇ ಅವಳು ಹೊರಟುಹೋದಳು. ಅವಳ ಶರೀರ ಸೆಟೆದುಕೊಂಡಿತ್ತು-ಅವಳಿಗೆ ತನ್ನ ಯೌವನದ ಬಗ್ಗೆ ಪೂರ್ಣ ಅರಿವು ಇದ್ದಂತಿತ್ತು.

ವೈದ್ಯರ ಕಣ್ಣುಗಳು ಅವಳನ್ನೇ ಹಿಂಬಾಲಿಸಿದವು. ಅವಳು ತುಂಬಾ ಸುಂದರಿಯಾಗಿದ್ದಳು. ವೈದ್ಯರಿಗಿಂತ ಕಿರಿಯವಳಾಗಿದ್ದಳು. ವೈದ್ಯರು ಅವಳಲ್ಲಿ ಕ್ಷಮೆ ಯಾಚಿಸಲು ಬಯಸಿದರು, ಆದರೆ ಅವಳಾಗಲೇ ಹೊರಟು ಹೋಗಿದ್ದಳು.

''ಸ್ವಲ್ಪ ನಿಮ್ಮ ಕೈಯನ್ನು ತೋರಿಸಿ, ನೋವಾಗುತ್ತಾ?'' ''ತುಂಬಾ ನೋಯುತ್ತೆ'', ವೃದ್ಧ ನರಳಿದ.

ವೈದ್ಯರು ಬಾವು ಬಂದಿದ್ದ ಅವನ ಕೈಯನ್ನು ನೋಡಿದರು. ಅವರ ಮುಖ ಗಂಭೀರವಾಯಿತು.

''ಓಹ್, ಅದು ವಿಷಕ್ರಿಮಿಯಾಗಿತ್ತು.''

''ಇರಬಹುದು'', ಜಾನ್ ಸಹಜವಾಗಿಯೇ ಹೇಳಿದ, ''ಅದು ಸಾಮಾನ್ಯ ನೊಣವಾಗಿತ್ತು ಅಂತ ನನಗನ್ನಿಸಲ್ಲ.''

''ಆ ನೊಣ ಒಂದು ಸತ್ತ ಶರೀರದಲ್ಲಿತ್ತು'', ಜಾನ್ ಮನಸ್ಸಿನಲ್ಲೇ ಆ ನೊಣಕ್ಕೆ ಶಪಿಸಿದ.

''ನಾನು ಸರಿಯಾದ ಸಮಯಕ್ಕೆ ಬಂದೆ, ಒಳ್ಳೆಯದಾಯಿತು. ಈಗ್ಲೂ ಪ್ರಯತ್ನ ಮಾಡಬಹುದು. ಅದೇ ನಾಳೆಯಾಗಿದ್ದರೆ ಹೇಳಲು ಬರುತ್ತಿರಲಿಲ್ಲ, ಅಷ್ಟರಲ್ಲಿ ನೀವು ಇಹಲೋಕ ತ್ಯಜಿಸಿರುತ್ತಿದ್ದಿರಿ.''

''ಇದು ವಿಚಿತ್ರವಾಯ್ತು'', ವೃದ್ಧ ಜಾನ್ ಗುಡಗುಡಿಗೆ ತಂಬಾಕು ತುಂಬಿದ.

''ವಿಷ, ಶೀಘ್ರ ಹರಡುತ್ತೆ, ಈಗ ಸಮಯ ಕಳೆಯುವುದು ಸರಿಯಲ್ಲ. ನೀವು ಮನಸ್ಸನ್ನು ಗಟ್ಟಿ ಮಾಡಿಕೊಳ್ಳಿ, ನಿಮ್ಮ ಈ ಕೈಯನ್ನು ಕತ್ತರಿಸ ಬೇಕಾಗುತ್ತೆ.''

''ಕೈಯನ್ನು ಕತ್ತರಿಸಬೇಕಾಗುತ್ತೆ?'' ಅವನಿಗೆ ಆಶ್ಚರ್ಯವಾಯಿತು. ಅವನ ಧ್ವನಿಯಲ್ಲಿ ಜಿಗುಪ್ಸೆ ಯಿತ್ತು, ನಿರಾಸೆಯಿತ್ತು.

''ಹೌದು, ವಿಧಿಯಿಲ್ಲ.''

ಜಾನ್ ಒಂದು ಮಾತನ್ನೂ ಆಡಲಿಲ್ಲ, ತಲೆ ಯಾಡಿಸಿ ತಂಬಾಕು ಸೇದಿದ.

''ನೋಡಿ, ನೀವೇ ಅರ್ಥಮಾಡಿಕೊಳ್ಳಿ'' ವೈದ್ಯರು ತಮ್ಮ ಮಾತನ್ನು ಅವನಿಗೆ ಮನದಟ್ಟು ಮಾಡುವ ವಿಚಾರದಿಂದ ಹೇಳಿದರು. ''ನಿಮಗೆ ಸ್ವಲ್ಪವೂ ತೊಂದರೆಯಾಗಲ್ಲ. ಎಚ್ಚರಗೊಂಡಾಗ ನೀವು ಬದುಕಿರ್ತೀರ. ಇಲ್ಲದಿದ್ರೆ, ನಾಳೆ ಈ ವೇಳೆಗ ನೀವು ಇರಲ್ಲ, ದೇವರೂ ನಿಮ್ಮನ್ನು ರಕ್ಷಿಸಲಾರ''

''ನೀವು ನನ್ನನ್ನು ಸ್ವಲ್ಪ ಒಂಟಿಯಾಗಿರಲು ಬಿಡಿ'', ಜಾನ್ ಈ ಎಲ್ಲಾ ಮಾತುಗಳಿಂದ ದಣದಂತಿತ್ತು. ಅವನು ಗೋಡೆಯೆಡೆಗೆ ಮುಖ ಮಾಡಿಕೊಂಡು, ಕಣ್ಣುಗಳನ್ನು ಮುಚ್ಚಿಕೊಂಡ.

ವೈದ್ಯರು ಅವನ ಈ ಹಟಕ್ಕೆ ಸಿದ್ಧರಿರಲಿಲ್ಲ. ಅವರು ಅವನ ಹೆಂಡತಿಯ ಬಳಿಗೆ ಹೋದರು. ''ನನ್ನ ಪತಿ ಹೇಗಿದ್ದಾರೆ?'', ಅವಳು ತನ್ನ ಕೆಲಸದಲ್ಲಿ ತಲ್ಲೀನಳಾಗಿಯೇ ವಿಚಾರಿಸಿದಳು. ವೈದ್ಯರ ಬಗ್ಗೆ ತನ್ನ ಜಿಗುಪ್ಸೆಯನ್ನು ವ್ಯಕ್ತಪಡಿಸಲಿಕ್ಕಾಗಿಯೇ ಅವಳು ಈ ರೀತಿ ಅಸಡ್ಡೆಯನ್ನು ತಾಳಿದ್ದಳು.

''ಪರಿಸ್ಥಿತಿ ಚೆನ್ನಾಗಿಲ್ಲ. ನೀವು ಅವರಿಗೆ
ಕತ್ತರಿಸಿಕೊಳ್ಳಲು ಒಪ್ಪಿಸಿ; ಈ ಮಾತನ್ನು ಹೇಳ
ನಾನಿಲ್ಲಿಗೆ ಬಂದಿರುವೆ''

''ಇದೊಂದೇ ಈಗಿರುವ ಉಪಾಯವೇ?
ಅವಳ ಮುಖ ಬಿಳುಚಿಕೊಂಡಿತು.

''ಇಲ್ಲದಿದ್ರೆ ಇಪ್ಪತ್ನಾಲ್ಕು ಗಂಟೆಯೊಳಗೆ ಅವ
ಇಹಲೋಕ ತ್ಯಜಿಸುತ್ತಾರೆ''.

ಅವಳ ಮುಖ ಕೆಂಪಗಾಯಿತು. ಅವಳು ವೈದ
ಭುಜವನ್ನು ಹಿಡಿದುಕೊಂಡು ರೋಗಿಯ ಕೋಣ
ಬಂದಳು. ತನ್ನೆರಡೂ ಕೈಗಳನ್ನು ತನ್ನ ತೊಡೆ
ಮೇಲಿಟ್ಟುಕೊಂಡು ಹೇಳಿದಳು, ''ನಾನು ಒ
ಹೆಳವನ ಹೆಂಡತಿಯಾಗಿರಬೇಕೇ? ನಾಚಿಕೆಯಿ
ನಾನಂತೂ ಸತ್ತೇ ಹೋಗ್ತೀನಿ''. ಅವಳು ತ
ಪತಿಯೆಡೆಗೆ ಹೊರಳಿ ಹೇಳಿದಳು, ''ನೀವು ನಿ
ಕೈಯನ್ನು ಕತ್ತರಿಸಿಕೊಳ್ಳಬೇಡಿ, ನೀವು ಡಾಕ್ಟ
ಮಾತನ್ನು ಕೇಳಬೇಡಿ''

ವೃದ್ಧ ರೈತ ಅವಳೆಡೆಗೆ ಸ್ನೇಹದಿಂದ ನೋಡಿ
''ಚಿಂತಿಸಬೇಡ, ಕ್ರಿಸ್ಟಾ! ನಾನು ನನ್ನ ಕೈಯ
ಕತ್ತರಿಸಿಕೊಳ್ಳುವುದಿಲ್ಲ''

ಸಾವಿನ ಭಯಾನಕತೆ ಮತ್ತು ಬದು
ಸೌಂದರ್ಯದ ಬಗ್ಗೆ ವೈದ್ಯರ ಭಾಷಣ ವ್ಯರ್ಥವಾಯಿ
ಏನೇ ಹೇಳಿದರೂ ವೈದ್ಯರ ಉದ್ದೇಶ ಈಡೇರಲಿ
ಪಾದರಿ ಹಳ್ಳಿಯಲ್ಲಿ ನ್ಯಾಯವಂತ ಎಂದು ಹೆಸ
ಗಳಿಸಿದ್ದರು, ಆದರೆ ಅವರ ಮಾತೂ ನಡೆಯಲಿ
ಜಾನ್ ತನ್ನ ಹಟದಲ್ಲಿದ್ದ. ಅವನಿಗೆ ತನ್ನ ಸಾವಿನ ಬ
ಭಯವಿರಲಿಲ್ಲ. ತನ್ನ ಅಂತ್ಯಕಾಲ ಬಂದರೆ ಅವ
ತನ್ನ ತಂದೆ ಮತ್ತು ಅಜ್ಜನಂತೆ ಇಹಲೋಕ ತ್ಯಜಿಸ
ಸಿದ್ಧನಾಗಿದ್ದ. ಆದರೆ ವೈದ್ಯರು ತನ್ನ ಬಗ್ಗೆ ಇಷ್ಟೊಂ
ಕಾಳಜಿ ವಹಿಸುವುದನ್ನು ಕಂಡು ಅವನ ಮನ
ಕರಗಿತು. ಅವರ ವ್ಯಗ್ರತೆ ಕಂಡು ಚಿಂತಿತನಾ
ಅವನು ವ್ಯಂಗ್ಯವಾಗಿ, ದಯನೀಯವಾಗಿ, ವೈದ್ಯರಿ
ಸಮಾಧಾನ ಮಾಡಲು ಪ್ರಯತ್ನಿಸಿದ.

ಇದ್ದಕ್ಕಿದ್ದಂತೆಯೇ ವೈದ್ಯರಿಗೆ, ಈ
ದಂಪತಿಗಳಿಗೆ ಹಣದ ಬಗ್ಗೆ ನೆನಪು ಮಾಡಿದರೆ ತ
ಉದ್ದೇಶ ಈಡೇರಬಹುದೆಂದು ಅನ್ನಿಸಿತು.

''ನಾನು ನಿಮ್ಮ ಕೈಯನ್ನು ಕತ್ತರಿಸಲಿ ಅಥ
ಬಿಡಲಿ, ಆದ್ರೆ ನೀವು ನನ್ನ ಫೀಸನ್ನ

ೂಡಲೇಬೇಕಾಗುತ್ತೆ. ಆಪರೇಶನ್ ಮಾಡಿಸಿ ೂಳ್ಳದಿದ್ರೆ, ನಿಮ್ಮ ಹಣ ಲುಕ್ಸಾನಾಗುತ್ತೆ. ಯಾವು ಕ್ಕೂ ಇನ್ನು ಐದು ನಿಮಿಷದಲ್ಲಿ ನಿರ್ಧರಿಸಿ''

''ನೀವು ಫೀಸ್ ತಗೊಂಡು ಯಾವುದಾದ್ರು ುಲಾಮು ಬರೆದುಕೊಡಿ'', ವೃದ್ಧ ರೈತ ಶಾಂತಿ ಂದ ಹೇಳಿದ.

ಇನ್ನು ರೈತನೊಂದಿಗೆ ಮಾತನಾಡುವುದರಲ್ಲಿ ಯಾವ ಅರ್ಥವಿರಲಿಲ್ಲ. ವೈದ್ಯರು ಗೊಣಗುತ್ತಾ, ರಾಸೆಯಿಂದ ಎದ್ದು ಹೊರಹೋದರು. ಅವರು ಈ ಗ್ಗೆ ಏಕಾಂತದಲ್ಲಿ ಯೋಚಿಸಲು ಬಯಸುತ್ತಿದ್ದರು. ಲ್ಲದೆ ಹಳ್ಳಿಯ ಮುಖಂಡರ ಸಲಹೆಯನ್ನೂ ಪಡೆ ುಲು ಬಯಸುತ್ತಿದ್ದರು. ಆದರೆ ಅವರಿಗೆ ಯೋಗ್ಯ ಲಹೆ ಸಿಗಲಿಲ್ಲ. ಜಿಲ್ಲಾಧಿಕಾರಿಗಳನ್ನು ರೋಗಿಯ ಳಿಗೆ ಕರೆದೊಯ್ದಿದ್ದೂ ವ್ಯರ್ಥವಾಯಿತು. ಅವನ ್ರಿಯದ ಪತ್ನಿ ಪ್ರತಿಯೊಂದಕ್ಕೂ ವಿಘ್ನವೊಡ್ಡು ದ್ದಾಳೆ. ಅವಳು ಮಧ್ಯದಲ್ಲಿ ಆಡುತ್ತಿದ್ದ ಒಂದೆರಡು ಾತುಗಳೇ ಜಾನ್ ಹಟ ಮಾಡಲು ಸಾಕಾಗುತ್ತಿತ್ತು.

''ನಾಲ್ಕು ಜನ ಸಲಹೆ ಕೊಡುವಾಗ ನೀವು ಾತಾಡಬಾರದು'', ವೈದ್ಯರು ಸಿಟ್ಟಿನಿಂದ ಅವಳೆಡೆಗೆ ೋಡಿದರು. ''ನೀವು ಕೋಳಿಯನ್ನು ಸಾವಕಾಶವಾಗಿ ೊಲ್ಲುತ್ತಿದ್ದೀರಿ'', ಅವಳೂ ರೇಗಿದಳು.

''ಕ್ರಿಸ್ಕಾ, ಹೆಚ್ಚು ಗಲಾಟೆ ಮಾಡ್ಬೇಡ. ಅತಿಥಿ ಳಿಗೆ ಮದ್ಯ ತೆಗೆದುಕೊಂಡು ಬಾ'', ಜಾನ್ ಜಗಳ ಂದ ಪಾರಾಗಲು ಹೇಳಿದ.

''ಯಾವ ಕೊಡದ ಮದ್ಯ ತರಲಿ?'', ಕ್ರಿಸ್ಕಾ ೇಳಿದಳು.

''ಸಣ್ಣ ಕೊಡದ ಮದ್ಯ ತಗೊಂಡು ಬಾ. ಆದರೆ ್ನ ತಿಥಿಯಲ್ಲಿ ದೊಡ್ಡ ಕೊಡವನ್ನು ಖರ್ಚುಮಾಡು. ದರ ಮದ್ಯ ಕಹಿಯಾಗ್ತಿದೆ.''

ಜಾನ್, ಬದುಕುವ ಆಸೆಯನ್ನು ತ್ಯಜಿಸಿ ಸಾಯಲು ಸಿದ್ಧನಾಗಿದ್ದ. ಅತಿಥಿಗಳು ಮದ್ಯ ಸೇವಿಸಿ, ಅವನು ಶಾಂತಿಯಿಂದ ಸಾಯಲು ಬಿಟ್ಟು ತಮ್ಮ-ತಮ್ಮ ಮನೆಗೆ ಹೊರಟು ಹೋದರು.

ಹೊರಗಿನ ಪಡಸಾಲೆಯಲ್ಲಿ ವೈದ್ಯರಿಗೆ ವೃದ್ಧನ ಹೊಲದಲ್ಲಿ ಕೆಲಸಮಾಡುವ ಕೂಲಿಯೊಬ್ಬ ಕಾಣಸಿದ. ಅವನೊಬ್ಬ ಸುಂದರ ಯುವಕನಾಗಿದ್ದ.

''ವಾಹನವನ್ನು ಸಿದ್ಧಮಾಡು, ನಾನು ಅರ್ಧ ಗಂಟೆಯಲ್ಲಿ ಬರ್ತೀನಿ'', ವೈದ್ಯರು ಆ ಕೂಲಿಯಾಳಿಗೆ ಹೇಳಿದರು, ''ನಿನ್ನ ಒಡತಿಗೆ ಹೇಳು, ನಾನು ಊಟದ ಸಮಯದವರೆಗೆ ಇರಲ್ಲ ಅಂತ''.

ಹೊರಗೆ ಬಂದ ವೈದ್ಯರು, ಈಗೇನು ಮಾಡ ಬೇಕೆಂದು ನಿಶ್ಚಯಿಸದಾದರು. ಅವರು ಮನೆಯ ಅರ್ಧ ತೆರೆದ ಬಾಗಿಲಿನಿಂದ, ಕೂಲಿಯಾಳು, ಜಾನ್‌ನ ಹೆಂಡತಿಯ ಬಳಿ ಹೋಗುವುದನ್ನು ನೋಡಿದರು. ಕ್ರಿಸ್ಕಾ ಮುಗುಳ್ನಕ್ಕು, ಓರೆನೋಟದಿಂದ ಕೂಲಿ ಯಾಳನ್ನು ನೋಡಿದಳು. ಕೂಲಿಯಾಳು ಕ್ರಿಸ್ಕಾಳನ್ನು ನೋಡಿ ಮುಗುಳ್ನಕ್ಕ. ವೈದ್ಯರಿಗೆ ಸಂಶಯವಾಯಿತು. ಈ ಬಗ್ಗೆ ಇನ್ನೂ ಹೆಚ್ಚು ತಿಳಿಯಬೇಕಿತ್ತು. ಎಲ್ಲರ ಮನೆಯ ಹುಳುಕನ್ನು ತಿಳಿದಂತಹ ಚಾಡಿಖೋರ ವೃದ್ಧೆಯೊಬ್ಬಳು ಈ ಹಳ್ಳಿಯಲ್ಲಿರಲೇಬೇಕೆಂದು ವೈದ್ಯರು ಯೋಚಿಸಿದರು. ವೈದ್ಯರು ಸರ್ಕಾರಿ ಅಧಿಕಾರಿಗಳ ಸಲಹೆ ಕೇಳಿದರು. ಅವರು ಓರ್ವ ವೃದ್ಧೆಯ ಹೆಸರನ್ನು ಹೇಳಿದರು.

''ಆ ಮುದುಕಿ ಜಾನ್‌ನ ಎರಡು ಮನೆಗಳ ಆಚೆಗೆ ವಾಸಿಸುತ್ತಾಳೆ'', ಅಧಿಕಾರಿಗಳು ಅವಳ ಮನೆಯ ವಿಳಾಸವನ್ನು ಹೇಳಿದರು.

ವೈದ್ಯರು ಆ ಮುದುಕಿಯ ಕೈಗೆ ಎರಡು ಬೆಳ್ಳಿಯ ನಾಣ್ಯಗಳನ್ನು ಹಾಕಿ ಹೇಳಿದರು, ''ನಾನು ಒಂದು

**ಹಂಗೇರಿ ಲೇಖಕ: ಕಾಲ್‌ಮೆನ್ ಮಿಕ್ಸ್‌ಜೆಥ್ (1849-1922)**



ಹಂಗೇರಿಯನ್ ಭಾಷೆಯ ಶ್ರೇಷ್ಠ ಲೇಖಕರು. ಮಿಕ್ಸ್ ಜೆಥ್‌ರ ಕಥೆಗಳಲ್ಲಿ ಗ್ರಾಮೀಣ ಬದುಕಿನ ಸಜೀವ ವರ್ಣನೆ ಕಾಣಬರುತ್ತದೆ. ಇವರು ಹಂಗೇರಿಯ ಸ್ವಾಧೀನತೆಯ ಪ್ರಬಲ ಸಮರ್ಥಕರಾಗಿದ್ದರು. 'ಹಸಿರು ನೊಣ'ವನ್ನು ಕನ್ನಡಕ್ಕೆ ತಂದಿರುವ ಡಿ.ಎನ್. ಶ್ರೀನಾಥ್‌ರ ಸುಮಾರು 30 ಕಾದಂಬರಿಗಳು ಹಾಗೂ 500 ಕ್ಕೂ ಹೆಚ್ಚು ಬಿಡಿ-ಬಿಡಿ ಅನುವಾದಗಳು ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಇತ್ತೀಚೆಗೆ ಪ್ರಕಟಗೊಂಡಿರುವ ಇವರ ಪುಸ್ತಕ 'ಕನ್ನಡ್‌ಕೀ ಶ್ರೇಷ್ಠ ಕಥಾಯೆಂ'.

''ಇರಬಹುದು'', ಜಾನ್ ಸಹಜವಾಗಿಯೇ ಹೇಳಿದ, ''ಅದು ಸಾಮಾನ್ಯ ನೊಣವಾಗಿತ್ತು ಅಂತ ನನಗನ್ನಿಸಲ್ಲ.''

''ಆ ನೊಣ ಒಂದು ಸತ್ತ ಶರೀರದಲ್ಲಿತ್ತು'', ಜಾನ್ ಮನಸ್ಸಿನಲ್ಲೇ ಆ ನೊಣಕ್ಕೆ ಶಪಿಸಿದ.

''ನಾನು ಸರಿಯಾದ ಸಮಯಕ್ಕೆ ಬಂದೆ, ಒಳ್ಳೆಯದಾಯಿತು. ಈಗ್ಲೂ ಪ್ರಯತ್ನ ಮಾಡಬಹುದು. ಅದೇ ನಾಳೆಯಾಗಿದ್ದರೆ ಹೇಳಲು ಬರುತ್ತಿರಲಿಲ್ಲ, ಅಷ್ಟರಲ್ಲಿ ನೀವು ಇಹಲೋಕ ತ್ಯಜಿಸಿರುತ್ತಿದ್ದಿರಿ.''

''ಇದು ವಿಚಿತ್ರವಾಯ್ತು'', ವೃದ್ಧ ಜಾನ್ ಗುಡಗುಡಿಗೆ ತಂಬಾಕು ತುಂಬಿದ.

''ವಿಷ, ಶೀಘ್ರ ಹರಡುತ್ತೆ, ಈಗ ಸಮಯ ಕಳೆಯುವುದು ಸರಿಯಲ್ಲ. ನೀವು ಮನಸ್ಸನ್ನು ಗಟ್ಟಿ ಮಾಡಿಕೊಳ್ಳಿ, ನಿಮ್ಮ ಈ ಕೈಯನ್ನು ಕತ್ತರಿಸ ಬೇಕಾಗುತ್ತೆ.''

''ಕೈಯನ್ನು ಕತ್ತರಿಸಬೇಕಾಗುತ್ತೆ?'' ಅವನಿಗೆ ಆಶ್ಚರ್ಯವಾಯಿತು. ಅವನ ಧ್ವನಿಯಲ್ಲಿ ಜಿಗುಪ್ಸೆ ಯಿತ್ತು, ನಿರಾಸೆಯಿತ್ತು.

''ಹೌದು, ವಿಧಿಯಿಲ್ಲ.''

ಜಾನ್ ಒಂದು ಮಾತನ್ನೂ ಆಡಲಿಲ್ಲ, ತಲೆ ಯಾಡಿಸಿ ತಂಬಾಕು ಸೇದಿದ.

''ನೋಡಿ, ನೀವೇ ಅರ್ಥಮಾಡಿಕೊಳ್ಳಿ'' ವೈದ್ಯರು ತಮ್ಮ ಮಾತನ್ನು ಅವನಿಗೆ ಮನದಟ್ಟು ಮಾಡುವ ವಿಚಾರದಿಂದ ಹೇಳಿದರು, ''ನಿಮಗೆ ಸ್ವಲ್ಪವೂ ತೊಂದರೆಯಾಗಲ್ಲ. ಎಚ್ಚರಗೊಂಡಾಗ ನೀವು ಬದುಕಿರ್ತೀರ. ಇಲ್ಲದಿದ್ರೆ, ನಾಳೆ ಈ ವೇಳೆಗೆ ನೀವು ಇರಲ್ಲ, ದೇವರೂ ನಿಮ್ಮನ್ನು ರಕ್ಷಿಸಲಾರ''

''ನೀವು ನನ್ನನ್ನು ಸ್ವಲ್ಪ ಒಂಟಿಯಾಗಿರಲು ಬಿಡಿ'', ಜಾನ್ ಈ ಎಲ್ಲಾ ಮಾತುಗಳಿಂದ ದಣಿದಂತಿತ್ತು. ಅವನು ಗೋಡೆಯೆಡೆಗೆ ಮುಖ ಮಾಡಿಕೊಂಡು, ಕಣ್ಣುಗಳನ್ನು ಮುಚ್ಚಿಕೊಂಡ.

ವೈದ್ಯರು ಅವನ ಈ ಹಟಕ್ಕೆ ಸಿದ್ಧರಿರಲಿಲ್ಲ. ಅವರು ಅವನ ಹೆಂಡತಿಯ ಬಳಿಗೆ ಹೋದರು. ''ನನ್ನ ಪತಿ ಹೇಗಿದ್ದಾರೆ?'', ಅವಳು ತನ್ನ ಕೆಲಸದಲ್ಲಿ ತಲ್ಲೀನಳಾಗಿಯೇ ವಿಚಾರಿಸಿದಳು. ವೈದ್ಯರ ಬಗ್ಗೆ ತನ್ನ ಜಿಗುಪ್ಸೆಯನ್ನು ವ್ಯಕ್ತಪಡಿಸಲಿಕ್ಕಾಗಿಯೇ ಅವಳು ಈ ರೀತಿ ಅಸಡ್ಡೆಯನ್ನು ತಾಳಿದ್ದಳು.

''ಪರಿಸ್ಥಿತಿ ಚೆನ್ನಾಗಿಲ್ಲ. ನೀವು ಅವರಿ
ಕತ್ತರಿಸಿಕೊಳ್ಳಲು ಒಪ್ಪಿಸಿ; ಈ ಮಾತನ್ನು ಹೇ
ನಾನಿಲ್ಲಿಗೆ ಬಂದಿರುವೆ''

''ಇದೊಂದೇ ಈಗಿರುವ ಉಪಾಯವೆ
ಅವಳ ಮುಖ ಬಿಳುಚಿಕೊಂಡಿತು.

''ಇಲ್ಲದಿದ್ರೆ ಇಪ್ಪತ್ನಾಲ್ಕು ಗಂಟೆಯೊಳಗೆ ಅ
ಇಹಲೋಕ ತ್ಯಜಿಸುತ್ತಾರೆ''.

ಅವಳ ಮುಖ ಕೆಂಪಗಾಯಿತು. ಅವಳು
ಭುಜವನ್ನು ಹಿಡಿದುಕೊಂಡು ರೋಗಿಯ ಕೊ
ಬಂದಳು. ತನ್ನೆರಡೂ ಕೈಗಳನ್ನು ತನ್ನ ತೊ
ಮೇಲಿಟ್ಟುಕೊಂಡು ಹೇಳಿದಳು, ''ನಾನು
ಹೆಳವನ ಹೆಂಡತಿಯಾಗಿರಬೇಕೇ? ನಾಚಿಕೆ
ನಾನಂತೂ ಸತ್ತೇ ಹೋಗ್ತೀನಿ''. ಅವಳು
ಪತಿಯೆಡೆಗೆ ಹೊರಳಿ ಹೇಳಿದಳು, ''ನೀವು
ಕೈಯನ್ನು ಕತ್ತರಿಸಿಕೊಳ್ಳಬೇಡಿ, ನೀವು ಡಾ
ಮಾತನ್ನು ಕೇಳಬೇಡಿ''

ವೃದ್ಧ ರೈತ ಅವಳೆಡೆಗೆ ಸ್ನೇಹದಿಂದ ನೋ
''ಚಿಂತಿಸಬೇಡ, ಕ್ರಿಸ್ಕಾ! ನಾನು ನನ್ನ ಕೈ
ಕತ್ತರಿಸಿಕೊಳ್ಳುವುದಿಲ್ಲ''

ಸಾವಿನ ಭಯಾನಕತೆ ಮತ್ತು ಬ
ಸೌಂದರ್ಯದ ಬಗ್ಗೆ ವೈದ್ಯರ ಭಾಷಣ ವ್ಯರ್ಥವಾ
ಏನೇ ಹೇಳಿದರೂ ವೈದ್ಯರ ಉದ್ದೇಶ ಈಡೇರ
ಪಾದರಿ ಹಳ್ಳಿಯಲ್ಲಿ ನ್ಯಾಯವಂತ ಎಂದು ಹ
ಗಳಿಸಿದ್ದರು, ಆದರೆ ಅವರ ಮಾತೂ ನಡೆಯ
ಜಾನ್ ತನ್ನ ಹಟದಲ್ಲಿದ್ದ. ಅವನಿಗೆ ತನ್ನ ಸಾವಿನ
ಭಯವಿರಲಿಲ್ಲ. ತನ್ನ ಅಂತ್ಯಕಾಲ ಬಂದರೆ ಅ
ತನ್ನ ತಂದೆ ಮತ್ತು ಅಜ್ಜನಂತೆ ಇಹಲೋಕ ತ್ಯಜ
ಸಿದ್ಧನಾಗಿದ್ದ. ಆದರೆ ವೈದ್ಯರು ತನ್ನ ಬಗ್ಗೆ ಇಷ್ಟೊ
ಕಾಳಜಿ ವಹಿಸುವುದನ್ನು ಕಂಡು ಅವನ ಮ
ಕರಗಿತು. ಅವರ ವ್ಯಗ್ರತೆ ಕಂಡು ಚಿಂತಿತ
ಅವನು ವ್ಯಂಗ್ಯವಾಗಿ, ದಯನೀಯವಾಗಿ, ವೈದ್ಯ
ಸಮಾಧಾನ ಮಾಡಲು ಪ್ರಯತ್ನಿಸಿದ.

ಇದ್ದಕ್ಕಿದ್ದಂತೆಯೇ ವೈದ್ಯರಿಗೆ, ಈ
ದಂಪತಿಗಳಿಗೆ ಹಣದ ಬಗ್ಗೆ ನೆನಪು ಮಾಡಿದರೆ
ಉದ್ದೇಶ ಈಡೇರಬಹುದೆಂದು ಅನ್ನಿಸಿತು.

''ನಾನು ನಿಮ್ಮ ಕೈಯನ್ನು ಕತ್ತರಿಸಲಿ ಅ
ಬಿಡಲಿ, ಆದ್ರೆ ನೀವು ನನ್ನ ಫೀಸನ್ನ

ಾಡಲೇಬೇಕಾಗುತ್ತೆ. ಆಪರೇಶನ್ ಮಾಡಿಸಿ ಾಳ್ಳದಿದ್ರೆ, ನಿಮ್ಮ ಹಣ ಲುಕ್ಸಾನಾಗುತ್ತೆ. ಯಾವು ಕ್ಕೊ ಇನ್ನು ಐದು ನಿಮಿಷದಲ್ಲಿ ನಿರ್ಧರಿಸಿ''

''ನೀವು ಫೀಸ್ ತಗೊಂಡು ಯಾವುದಾದ್ರು ುಲಾಮು ಬರೆದುಕೊಡಿ'', ವೃದ್ಧ ರೈತ ಶಾಂತಿ ುಂದ ಹೇಳಿದ.

ಇನ್ನು ರೈತನೊಂದಿಗೆ ಮಾತನಾಡುವುದರಲ್ಲಿ ಯಾವ ಅರ್ಥವಿರಲಿಲ್ಲ. ವೈದ್ಯರು ಗೊಣಗುತ್ತಾ, ರಾಸೆಯಿಂದ ಎದ್ದು ಹೊರಹೋದರು. ಅವರು ಈ ಗ್ಗೆ ಏಕಾಂತದಲ್ಲಿ ಯೋಚಿಸಲು ಬಯಸುತ್ತಿದ್ದರು. ಲ್ಲದೆ ಹಳ್ಳಿಯ ಮುಖಂಡರ ಸಲಹೆಯನ್ನೂ ಪಡೆ ುಲು ಬಯಸುತ್ತಿದ್ದರು. ಆದರೆ ಅವರಿಗೆ ಯೋಗ್ಯ ಲಹೆ ಸಿಗಲಿಲ್ಲ. ಜಿಲ್ಲಾಧಿಕಾರಿಗಳನ್ನು ರೋಗಿಯ ಳಿಗೆ ಕರೆದೊಯ್ದಿದ್ದೂ ವ್ಯರ್ಥವಾಯಿತು. ಅವನ ್ರಾಯದ ಪತ್ನಿ ಪ್ರತಿಯೊಂದಕ್ಕೂ ವಿಘ್ನವೊಡ್ಡು ್ದಾಳೆ. ಅವಳು ಮಧ್ಯದಲ್ಲಿ ಆಡುತ್ತಿದ್ದ ಒಂದೆರಡು ಮಾತುಗಳೇ ಜಾನ್ ಹಟ ಮಾಡಲು ಸಾಕಾಗುತ್ತಿತ್ತು.

''ನಾಲ್ಕು ಜನ ಸಲಹೆ ಕೊಡುವಾಗ ನೀವು ಮಾತಾಡಬಾರದು'', ವೈದ್ಯರು ಸಿಟ್ಟಿನಿಂದ ಅವಳೆಡೆಗೆ ನೋಡಿದರು. ''ನೀವು ಕೋಳಿಯನ್ನು ಸಾವಕಾಶವಾಗಿ ಕೊಲ್ಲುತ್ತಿದ್ದೀರಿ'', ಅವಳೂ ರೇಗಿದಳು.

''ಕ್ರಿಸ್ಕಾ, ಹೆಚ್ಚು ಗಲಾಟೆ ಮಾಡ್ಬೇಡ. ಅತಿಥಿ ಗಳಿಗೆ ಮದ್ಯ ತೆಗೆದುಕೊಂಡು ಬಾ'', ಜಾನ್ ಜಗಳ ದಿಂದ ಪಾರಾಗಲು ಹೇಳಿದ.

''ಯಾವ ಕೊಡದ ಮದ್ಯ ತರಲಿ?'', ಕ್ರಿಸ್ಕಾ ಕೇಳಿದಳು.

''ಸಣ್ಣ ಕೊಡದ ಮದ್ಯ ತಗೊಂಡು ಬಾ. ಆದರೆ ನನ್ನ ತಿಥಿಯಲ್ಲಿ ದೊಡ್ಡ ಕೊಡವನ್ನು ಖರ್ಚುಮಾಡು. ಅದರ ಮದ್ಯ ಕಹಿಯಾಗ್ತಿದೆ.''

ಜಾನ್, ಬದುಕುವ ಆಸೆಯನ್ನು ತ್ಯಜಿಸಿ ಸಾಯಲು ಸಿದ್ಧನಾಗಿದ್ದ. ಅತಿಥಿಗಳು ಮದ್ಯ ಸೇವಿಸಿ, ಅವನು ಶಾಂತಿಯಿಂದ ಸಾಯಲು ಬಿಟ್ಟು ತಮ್ಮ-ತಮ್ಮ ಮನೆಗೆ ಹೊರಟು ಹೋದರು.

ಹೊರಗಿನ ಪಡಸಾಲೆಯಲ್ಲಿ ವೈದ್ಯರಿಗೆ ವೃದ್ಧನ ಹೊಲದಲ್ಲಿ ಕೆಲಸಮಾಡುವ ಕೂಲಿಯೊಬ್ಬ ಕಾಣಿಸಿದ. ಅವನೊಬ್ಬ ಸುಂದರ ಯುವಕನಾಗಿದ್ದ.

''ವಾಹನವನ್ನು ಸಿದ್ಧಮಾಡು, ನಾನು ಅರ್ಧ ಗಂಟೆಯಲ್ಲಿ ಬರ್ತೀನಿ'', ವೈದ್ಯರು ಆ ಕೂಲಿಯಾಳಿಗೆ ಹೇಳಿದರು, ''ನಿನ್ನ ಒಡತಿಗೆ ಹೇಳು, ನಾನು ಊಟದ ಸಮಯದವರೆಗೆ ಇರಲ್ಲ ಅಂತ''.

ಹೊರಗೆ ಬಂದ ವೈದ್ಯರು, ಈಗೇನು ಮಾಡ ಬೇಕೆಂದು ನಿಶ್ಚಯಿಸದಾದರು. ಅವರು ಮನೆಯ ಅರ್ಧ ತೆರೆದ ಬಾಗಿಲಿನಿಂದ, ಕೂಲಿಯಾಳು, ಜಾನ್‌ನ ಹೆಂಡತಿಯ ಬಳಿ ಹೋಗುವುದನ್ನು ನೋಡಿದರು. ಕ್ರಿಸ್ಕಾ ಮುಗುಳ್ನಕ್ಕು, ಓರೆನೋಟದಿಂದ ಕೂಲಿ ಯಾಳನ್ನು ನೋಡಿದಳು. ಕೂಲಿಯಾಳು ಕ್ರಿಸ್ಕಾಳನ್ನು ನೋಡಿ ಮುಗುಳ್ನಕ್ಕ. ವೈದ್ಯರಿಗೆ ಸಂಶಯವಾಯಿತು. ಈ ಬಗ್ಗೆ ಇನ್ನೂ ಹೆಚ್ಚು ತಿಳಿಯಬೇಕಿತ್ತು. ಎಲ್ಲರ ಮನೆಯ ಹುಳುಕನ್ನು ತಿಳಿದಂತಹ ಚಾಡಿಖೋರ ವೃದ್ಧೆಯೊಬ್ಬಳು ಈ ಹಳ್ಳಿಯಲ್ಲಿರಲೇಬೇಕೆಂದು ವೈದ್ಯರು ಯೋಚಿಸಿದರು. ವೈದ್ಯರು ಸರ್ಕಾರಿ ಅಧಿಕಾರಿಗಳ ಸಲಹೆ ಕೇಳಿದರು. ಅವರು ಓರ್ವ ವೃದ್ಧೆಯ ಹೆಸರನ್ನು ಹೇಳಿದರು.

''ಆ ಮುದುಕಿ ಜಾನ್‌ನ ಎರಡು ಮನೆಗಳ ಆಚೆಗೆ ವಾಸಿಸುತ್ತಾಳೆ'', ಅಧಿಕಾರಿಗಳು ಅವಳ ಮನೆಯ ವಿಳಾಸವನ್ನು ಹೇಳಿದರು.

ವೈದ್ಯರು ಆ ಮುದುಕಿಯ ಕೈಗೆ ಎರಡು ಬೆಳ್ಳಿಯ ನಾಣ್ಯಗಳನ್ನು ಹಾಕಿ ಹೇಳಿದರು, ''ನಾನು ಒಂದು

**ಹಂಗೇರಿ ಲೇಖಕ: ಕಾಲ್‌ಮೇನ್ ಮಿಕ್ಸ್‌ಜೆಥ್ (1849-1922)**



ಹಂಗೇರಿಯನ್ ಭಾಷೆಯ ಶ್ರೇಷ್ಠ ಲೇಖಕರು. ಮಿಕ್ಸ್ ಜೆಥ್‌ರ ಕಥೆಗಳಲ್ಲಿ ಗ್ರಾಮೀಣ ಬದುಕಿನ ಸಜೀವ ವರ್ಣನೆ ಕಾಣಬರುತ್ತದೆ. ಇವರು ಹಂಗೇರಿಯ ಸ್ವಾಧೀನತೆಯ ಪ್ರಬಲ ಸಮರ್ಥಕರಾಗಿದ್ದರು. 'ಹಸಿರು ಸೋಗ'ವನ್ನು ಕನ್ನಡಕ್ಕೆ ತಂದಿರುವ ಡಿ.ಎಸ್. ಶ್ರೀನಾಥ್‌ರ ಸುಮಾರು 30 ಕಾದಂಬರಿಗಳು ಹಾಗೂ 500 ಕ್ಕೂ ಹೆಚ್ಚು ಬಿಡಿ-ಬಿಡಿ ಅನುವಾದಗಳು ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಇತ್ತೀಚೆಗೆ ಪ್ರಕಟಗೊಂಡಿರುವ ಇವರ ಪುಸ್ತಕ 'ಕನ್ನಡ್ ಕೀ ಶ್ರೇಷ್ಠ ಕಥಾಯೆಂ'.

ಹೆಣ್ಣನ್ನು ನೋಡಿ ಮೋಹಗೊಂಡಿದ್ದೇನೆ. ಅವಳೂ ನನ್ನ ಮೇಲೆ ಮೋಹಗೊಳ್ಳುವಂತಹ ಉಪಾಯ ವೊಂದನ್ನು ನೀನು ಮಾಡಬೇಕು''

''ಇಲ್ಲಪ್ಪ, ಈ ಕೆಲಸ ಸಾಧ್ಯವಿಲ್ಲ. ನಿನ್ನದು ಕಾಗೆಯಂತಹ ರೂಪ-ನಿನ್ನಂತಹವನನ್ನು ನೋಡಿ ಯಾರು ಮೋಹಗೊಳ್ಳುತ್ತಾರೆ!''

''ಅಜ್ಜ, ನಿನ್ನ ಮಾತು ನಿಜ. ಆದರೆ ನಾನು ಅವಳಿಗೆ ರೇಷ್ಮೆ ಬಟ್ಟೆಗಳನ್ನು ಕೊಡ್ತೀನಿ, ಅವಳ ಖರ್ಚಿಗೆ ಬೇಕಾದಷ್ಟು ಹಣ ಕೊಡ್ತೀನಿ''.

''ಆ ಹೆಣ್ಣು ಯಾರು?''

''ಜಾನ್‌ನ ಹೆಂಡತಿ''

''ಅವಳಾಗಲೇ ಇನ್ನೊಬ್ಬನ ವಶವಾಗಿದ್ದಾಳೆ''. ವೈದ್ಯರು ಈ ವಿಷಯವನ್ನೇ ತಿಳಿಯಲು ಬಯಸು ತ್ತಿದ್ದರು.

''ಆ ವ್ಯಕ್ತಿ ಯಾರು?''

''ಪಾಲ್ ಅಂತ- ಅವನು ಅವರ ಕೂಲಿಯಾಳು. ಅವಳೂ ಬಹುಶಃ, ಅವನನ್ನು ಪ್ರೀತಿಸುತ್ತಾಳೆ. ಯಂತ್ರ-ಮಂತ್ರ ಮಾಡಿಸಿ ಕೊಂಡು ಹೋಗಲು ಅವನಿಲ್ಲಿಗೆ ಬರ್ತಿರ್ತಾನೆ. ಮೊನ್ನೆ ಅವನಿಗೆ ನಾನೊಂದು ರಸವನ್ನು ಅವಳ ಗ್ಲಾಸಿಗೆ ಹಾಕಲು ಕೊಟ್ಟಿದ್ದೆ.

''ಜಾನ್‌ಗೆ ಅನುಮಾನ ಬರಲ್ವಾ?''

''ಅವನು ಬುದ್ಧಿವಂತ, ಆದರೆ ಹೆಣ್ಣುಗಳು ಬುದ್ಧಿವಂತರಿಗೂ ಮಣ್ಣು ಮುಕ್ಕಿಸುತ್ತಾರೆ.''

ವೈದ್ಯರು ಜಾನ್‌ನ ಮನೆಗೆ ಮರಳಿ ಬಂದಾಗ ಇಬ್ಬರೂ ಪ್ರೇಮಿಗಳು ಮಾತುಕತೆಯಾಡುತ್ತಿದ್ದರು. ಕೂಲಿಯಾಳು, ತನ್ನ ಒಂದು ಕೈಯಿಂದ ಕುದುರೆಯ ಬೆನ್ನನ್ನು ಸವರುತ್ತಿದ್ದ. ಕುದುರೆ ವೈದ್ಯರನ್ನು ಸ್ಟೇಷನ್ನಿಗೆ ಕರೆದೊಯ್ಯಲು ನಿಂತಿತ್ತು. ಜಾನ್‌ನ ಹೆಂಡತಿ ವೈದ್ಯರನ್ನು ಸಂಜ್ಞೆ ಮಾಡಿ ಕರೆದಳು. ವೈದ್ಯರು ಸಮೀಪಕ್ಕೆ ಬಂದಾಗ, ಅವಳು ತನ್ನ ಉಡುಪಿನೊಳಗಿನಿಂದ ನೋಟುಗಳ ಒಂದು ಕಟ್ಟನ್ನು ಹೊರ ತೆಗೆದಳು.

''ಡಾಕ್ಟರ್, ಇದು ನಿಮಗೆ, ನಾನು ಕಷ್ಟಕೊಟ್ಟಿದ್ದಕ್ಕಾಗಿ''

''ಸರಿ, ನನ್ನ ಬ್ಯಾಗನ್ನು ವಾಹನದಲ್ಲಿಡಿಸು. ನಾನು ನಿನ್ನ ಪತಿಯನ್ನು ನೋಡಿಕೊಂಡು ಅವರಿಗೆ ಹೇಳಿ ಬರ್ತೀನಿ''



ಜಾನ್ ಈ ಹಿಂದಿನಂತೆಯೇ ಮಂಚದ ಬದ್ದಿದ್ದ. ಅವನ ಗುಡಗುಡಿ ನಂದಿತ್ತು. ತೂಕಡಿಸ ವವನಂತೆ ಅವನು ಕಣ್ಣುಗಳನ್ನು ಮುಚ್ಚಿಕೊಂಡಿದ್ದ.

''ನಾನು ಬರ್ತೀನಿ'', ವೈದ್ಯರು ಹೇಳಿದರು.

''ನೀವು ಹೋಗ್ತಿದ್ದೀರ?'', ಜಾನ್ ಒಂದು ಕಣ ತೆರೆದು ಉಪೇಕ್ಷಾ ಭಾವನೆಯಿಂದ ಹೇಳಿದ.

''ಈಗ ಇಲ್ಲಿ ಇನ್ನೇನು ಕೆಲಸ?''

''ನನ್ನ ಹೆಂಡತಿ ನಿಮಗೆ ಹಣ ಕೊಟ್ಲಾ?''

''ಹೂಂ. ನಿಮ್ಮ ಹೆಂಡ್ತಿ ತುಂಬಾ ಚೆನ್ನಾಗಿದ್ದಾ ನಿಜವಾಗ್಩ು''. ಜಾನ್, ವೈದ್ಯರಿಗೆ ಕೈ ಕುಲುಕಲು ತ ಕೈಯನ್ನು ಮುಂದುಮಾಡುತ್ತಾ ಎರಡನೆಯ ಕಣ್ಣನ ತೆರೆದು ''ಖಂಡಿತವಾಗಿಯೂ?'' ಎಂದು ಪ್ರಶ್ನಿಸಿದ

"ಅವಳ ತುಟಿಗಳು ಹೂವಿನಂತೆ ಕೋಮಲ ವಾಗಿವೆ"

"ಹೌದು!" ಜಾನ್‌ನ ಮುಖದಲ್ಲಿ ತೃಪ್ತಿಯ ಮುಗುಳ್ನಗೆಯಿತ್ತು.

"ಆ ಬದ್ಮಾಶ್ ಪಾಲ್ ಅವಳನ್ನು ಪಡೆದು ತುಂಬಾ ಸಂತೋಷಗೊಳ್ತಾನೆ ಅಂತ ನನಗನ್ನಿಸುತ್ತೆ"

ವೃದ್ಧ ಜಾನ್ ಕಂಪಿಸಿದ, ಅವನು ತೀಕ್ಷ್ಣವಾಗಿ ಗಮನಿಸಿದ.

"ಡಾಕ್ಟ್ರೆ, ನೀವೇನಂದಿರಿ?"

ಹೇಳಬಾರದಾಗಿದ್ದ ಮಾತನ್ನು ಹೇಳಿದವರಂತೆ ವೈದ್ಯರು ತಮ್ಮ ಬಾಯಿಯನ್ನು ಮುಚ್ಚಿಕೊಂಡರು.

"ಶ್...ಶ್... ನನಗೇನು ಗೊತ್ತು! ಮನುಷ್ಯನಿಗೆ ಕಣ್ಣುಗಳಿರುತ್ತವೆ, ಮೆದುಳಿರುತ್ತೆ. ಅವನಿಗೇ ಎಲ್ಲಾ ಅರ್ಥವಾಗುತ್ತೆ. ನಿಮ್ಮ ಕೈಯನ್ನು ಕತ್ತರಿಸಲು ಯೋಚಿಸಿದಾಗ ಅವಳು ತಡೆದಳು, ಆಗಲೇ ಅವಳ ಬಗ್ಗೆ ಅನುಮಾನ ಬಂತು. ಅಲ್ಲ, ನಿಮಗೆ ಅನುಮಾನ ಆಗಲಿಲ್ವಾ? ಆದ್ರೆ ಈಗ ನನಗೆಲ್ಲಾ ತಿಳೀತಿದೆ."

ವೈದ್ಯರು ಅವನನ್ನೇ ಗಮನಿಸಿದರು.

ವೃದ್ಧ ಜಾನ್ ತನ್ನೆರಡೂ ಮುಷ್ಟಿಗಳನ್ನು ಬಿಗಿದು ಕಂಪಿಸಿದ; ಆ ಒಂದು ಕ್ಷಣ, ತನ್ನ ಕೈಯೊಂದು ಬಾತಿದೆ ಎಂಬ ವಿಷಯವನ್ನೇ ಅವನು ಮರೆತುಬಿಟ್ಟ. ಕಡೆಗೆ ನೋವಿನಿಂದ ನರಳಿದ.

"ಅಯ್ಯೋ ನನ್ನ ಕೈ... ಕೈ... ಡಾಕ್ಟ್ರೆ, ಇನ್ನು ಒಂದು ಶಬ್ದವನ್ನೂ ಹೇಳಬೇಡಿ"

"ಇಲ್ಲ, ಹೇಳಲ್ಲ"

ರೋಗಿ ಜಾನ್, ಬಲಗೈಯಿಂದ ವೈದ್ಯರ ಭುಜವನ್ನು ಹಿಡಿದುಕೊಂಡು ನರಳಿದ.

"ಪಾಲ್ ಅಂದರೆ ಯಾರು, ಡಾಕ್ಟ್ರೆ?"

"ನನಗೆ ಅವನು ಗೊತ್ತಿಲ್ಲ ಅಂತ ನೀನು ಹೇಳಲು ಬಯಸುತ್ತಿರುವೆಯಾ? ಅದೇ, ನಿನ್ನ ಮನೆಯಲ್ಲಿರುವ ಕೂಲಿಯಾಳು"

ವೃದ್ಧ ಜಾನ್‌ನ ಮುಖ ಬಿಳಿಚಿಕೊಂಡಿತು. ಅವನ ತುಟಿಗಳು ಕಂಪಿಸುತ್ತಿದ್ದವು, ಹೃದಯ ವೇಗವಾಗಿ ಹೊಡಿದುಕೊಳ್ಳುತ್ತಿತ್ತು. ಈಗ ಅವನ ಕೈಯಲ್ಲಿ ನೋವಿನ ಅನುಭವವಾಗುತ್ತಿರಲಿಲ್ಲ. ಇದ್ದಕ್ಕಿದ್ದಂತೆ, ಅವನು ತನ್ನ ಹಣೆಯನ್ನು ಚಚ್ಚಿಕೊಂಡು, ತಲೆಯೆತ್ತಿ ಮೇಲಕ್ಕೆ ನೋಡಿದ.

"ನಾನೆಷ್ಟು ಮೂರ್ಖ, ನಾನು ಮೊದಲೇ ಅರ್ಥಮಾಡಿಕೊಳ್ಳಬೇಕಿತ್ತು.... ರಾಕ್ಷಸಿಯವಳು"

"ಹೆಂಡ್ತಿಗೆ ಈಗ ಬೈಯುವುದರಿಂದ ಏನು ಪ್ರಯೋಜನ? ಅವಳಿಗೆ ಯೌವನವಿದೆ, ವಯಸ್ಸಿದೆ. ಅವಳು ಇದುವರೆಗೆ ನಿರ್ದೋಷಿಯೂ ಆಗಿರ ಬಹುದು, ಆದರೆ ನೀವು ಇಹಲೋಕ ತ್ಯಜಿಸಿದ ಮೇಲೆ ಅವಳು ಮದುವೆ ಮಾಡಿಕೊಳ್ಳಲೇಬೇಕಾಗುತ್ತೆ... ಮತ್ತೆ ನೀವು ಬದುಕಿರಲಾರಿರಿ...."

ವೃದ್ಧ ಜಾನ್ ಕಷ್ಟಪಟ್ಟು ವೈದ್ಯರ ಸಮೀಪಕ್ಕೆ ಬಂದ.

ವೈದ್ಯರು ಹೇಳುತ್ತಲೇ ಇದ್ದರು, "ನೀವು ಸತ್ತ ಮೇಲೆ, ಒಂದು ವೇಳೆ ಅವಳು ಪ್ರಾಯದ ಯುವಕ ನನ್ನು ಮದುವೆಯಾದರೆ, ಇದರಿಂದ ನಿಮಗೇನು ನಷ್ಟ? ಸತ್ತ ಮೇಲೆ ನೀವು ಅವಳನ್ನು ನೋಡಲಂತೂ ಬರುವುದಿಲ್ಲ. ಅವಳು ಓರ್ವ ಸುಂದರ ಪತಿಯನ್ನು ಪಡೆಯುತ್ತಾಳೆಂದು ನೀವು ಖುಷಿಪಡಬೇಕು. ಪಾಲ್ ಸುಂದರ ಯುವಕ."

ವೃದ್ಧ ಜಾನ್ ಹಲ್ಲುಗಳನ್ನು ಕಡಿದ.

"ನೀವು ಸ್ವಾರ್ಥಿಗಳಾಗಬಾರದು. ಅವಳ ಯೌವನ ವ್ಯರ್ಥವಾದರೆ ಅದು ದುಃಖದ ವಿಚಾರವಾಗುತ್ತದೆ. ಪಾಲ್ ಮೂರ್ಖನಲ್ಲ. ಅವನು ಅಂಥ ಸುಂದರಿಯನ್ನು ಬಿಡುವುದಿಲ್ಲ. ಅಲ್ಲದೆ, ಅವನಿಗೆ ನಿಮ್ಮ ಹಣ, ಐಶ್ವರ್ಯ ಮತ್ತು ಹೊಲಗಳು ಸಿಗುತ್ತವೆ. ನಿನ್ನ ಹೆಂಡತಿಯೂ ಒಪ್ಪಿಕೊಳ್ತಾಳೆ. ಆದರೆ ನೀವು ಮಾತ್ರ ಮೂರ್ಖರು"

ವೃದ್ಧ ಜಾನ್ ಗರ್ಜಿಸಿದ. ಅವನ ಹಣೆ ಬೆವರಿನಿಂದ ಒದ್ದೆಯಾಯಿತು. ಮನಸ್ಸು ಕುದಿಯಿತು. ವೈದರು ಮತ್ತೂ ಮುಂದುವರಿಸಿದರು "ಎಲ್ಲವನ್ನೂ ಕಳೆದುಕೊಳ್ಳುವುದಕ್ಕಿಂತ ಅವಳನ್ನು ಒಂದು ಕೈಯಿಂದಲಾದರೂ ಅಪ್ಪಿಕೊಳ್ಳುವುದೇ ವಾಸಿ ಅಂತ ನನಗನ್ನಿಸುತ್ತೆ".

ವೃದ್ಧ ಜಾನ್ ಇನ್ನು ಸಹಿಸದಾದ. ಅವನು ಹಾಸಿಗೆಯಿಂದ ಎದ್ದು ಕೂತು, ತನ್ನ ಬಾವು ಬಂದ ಕೈಯನ್ನು ವೈದ್ಯರೆಡೆಗೆ ಚಾಚುತ್ತಾ ಹೇಳಿದ, "ಡಾಕ್ಟ್ರೆ, ನನ್ನ ಕೈಯನ್ನು ಕತ್ತರಿಸಿಬಿಡಿ!"

ಕನ್ನಡಕ್ಕೆ: **ಡಿ.ಎನ್. ಶ್ರೀನಾಥ್**





# ತೆರೆದ ಅಂಚೆ

'ಭಾವನಾ' ಚೆನ್ನಾಗಿ ಬರುತ್ತಿದೆ. ಅಭಿನಂದನೆಗಳು. ಪತ್ರಿಕೆ ಈಗಾಗಲೇ ತನ್ನದೇ ಆದ ವೈಶಿಷ್ಟ್ಯ ಸಾಧಿಸಿದೆ. ಕತೆಗಳ ಆಯ್ಕೆ ಚೆನ್ನಾಗಿದೆ. ಹೊಸ ಹೆಸರುಗಳು ಕಾಣುತ್ತಿರುವುದು ಸಂತೋಷದ ವಿಷಯ. ಪ್ರಾಯೋಗಿಕತೆ ಹಾಗೂ ಜನಪ್ರಿಯತೆಗಳ ಸಮತೋಲದ ಹಿಂದೆ ಒಂದು ಉದ್ದೇಶವಿದ್ದಂತಿದೆ. ಸ್ವತಃ ಒಳ್ಳೆಯ ಕತೆಗಾರರಾದ ನೀವು ಅಭಿರುಚಿಯ ಮಟ್ಟವನ್ನು ಕಾಯ್ದುಕೊಳ್ಳುವಿರಿ ಎಂಬ ಭರವಸೆ ನನ್ನಲ್ಲಿದೆ

**ಧಾರವಾಡ ಜಿ.ಎಸ್. ಆಮೂರ**

ಜೂನ್ ಸಂಚಿಕೆ ಸ್ಪ್ಲೆಂಡಿಡ್! ಮುಖಪುಟದ ತೈಲಚಿತ್ರ, ಪ್ರತಿ ಪುಟದ ಚಿತ್ರದ ಹಲವು ವಿನ್ಯಾಸ ನಿಜಕ್ಕೂ ಮುದ ನೀಡಿದವು. ಕವಿತಾ ಗುಚ್ಛದಿಂದ ಕವಿಯನ್ನು ಇಡಿಯಾಗಿ ಕಾಣುವದು ಸಾಧ್ಯ.

**ಚೇಡಚಿತಾಳ ಚಂದ್ರಕಾಂತ ಪೋಕಳೆ**

'ಮೆಟ್ಟಿಲೇರುವ ಗಡಿಬಿಡಿಯಲ್ಲಿ ಕೊಡೆ ಮರೆತವನು' ಕತೆಯೇ ಈ ಸಂಚಿಕೆಯ ಹೈಲೈಟ್. ಆಧುನಿಕ ಭಾರತೀಯ ಸಮಾಜದಲ್ಲಿ ಅವಕಾಶದ ಬೆನ್ನೇರಿ ಹೊರಟವರಿಗೆ ತಮ್ಮ ಮನೆ, ಪರಿಸರ, ಹೆತ್ತವರು ಕಾಣಿಸುವುದಿಲ್ಲ.

**ಕೋಲಾರ ಎಚ್.ಕೆ. ರಾಘವೇಂದ್ರರಾವ್**

'ಜಾಗತೀಕರಣ', ಪ್ರತಿಭಾ ಪಲಾಯನ ದಿಂದಾಗುವ ಮಾನವೀಯ ಸಂಬಂಧಗಳ ಶೈಥಿಲ್ಯವನ್ನು ಅರ್ಥಪೂರ್ಣವಾಗಿ ಚಿತ್ರಿಸಿದ್ದಾರೆ. 'ಉಲ್ಲಾಸ'ನಂತಹವರು ಕುಸಿಯುತ್ತಿರುವ ಸಂಬಂಧಗಳ ಸೇತುವೆಗೆ ಆಶಾಕಿರಣವಾಗಿದ್ದಾರೆ.

**ಕಿನ್ನಿಗೋಳಿ ಉದಯ ಕುಮಾರ್ ಹಬ್ಬು**

ವೃದ್ಧ ಚಿದಂಬರ ದಾಮ್ಲೆ ಪಾತ್ರ ಇನ್ನೂ ನನ್ನ ಕಣ್ಣಲ್ಲೇ ಕಟ್ಟಿದಂತಾಗಿದೆ.

**ಬಳ್ಳಾರಿ ಬಸವರಾಜ**

'ಮೆಟ್ಟಿಲೇರುವ ಗಡಿಬಿಡಿಯಲ್ಲಿ ಕೊಡೆ ಮರೆತವನು' ಕಥೆ ಹೃದಯಸ್ಪರ್ಶಿಯಾಗಿದೆ.

**ರಾಯಚೂರು ಬಸವರಾಜ ಎಸ್ ತೋಟದ**

'ಪುನುಗ' ಬಸವರಾಜು ಕುಕ್ಕರಹಳ್ಳಿಯವರ ಕಥೆ ಅಲೆಮಾರಿಯ ಜೀವನವನ್ನು ತೆರೆದಿಟ್ಟಿದೆ. ಈ ತರದ ಗ್ರಾಮ್ಯ ಬದುಕಿನ ಕಥೆಗಳು ಬರಲಿ.

**ಶಿವಮೊಗ್ಗ ಅನ್ನೇಹಾಳ್ ಈಶ**

'ಪುನುಗ' ಮತ್ತು 'ಒಳ್ಳೆಯವನು' ಕತೆಗಳನ್ನು ಓದಿ ನಿಮ್ಮ ಪತ್ರಿಕೆಯಲ್ಲಿ ಎಲ್ಲಾ ಬಗೆಯ ಭಾವಗಳಿಗೂ ಜಾಗವಿದೆ ಅನಿಸಿ ಸಂತಸವಾಯಿತು

**ತಗಡೂರು ಶ್ರೀಮಂಜುನಾಥ್ ಗೀತಾ**

'ನಯನಾ ಕಾಶ್ಯಪ್' ಅವರ ಕಥೆ 'ಅಲೆಗಳು' ಹೊಸ ಕಳೆಯಿಂದ ಕೂಡಿದೆ.

**ಬೆಳಗಾಂ ಸಿದ್ದು ವಗ್ಗನವ**

'ಬೆಳಗ್ಗೆ ಹೊಸ ಸೂರ್ಯ ಬರುತ್ತಾನೆ, ಹೊ ಅಲೆಗಳೂ, ಕನಸು ತೂಗಿದೆ ಎಚ್ಚರದಲ್ಲೆ' ಎನ್ನು ಧಾಟಿ ಭಾವನಾಗೆ ಖಂಡಿತವಾಗಿ ಅನ್ವಯವಾಗಿದೆ

**ಮಹಾಲಿಂಗಪುರ ಮಹೇಶ ಶಾಂ**

ಜೂನ್ ಸಂಚಿಕೆಯ 'ಶಬ್ದತೀರ'ದಲ್ಲಿ ಒಂದು ಒಲೆಯ ಸುತ್ತ' ಬರಹ ಮರೆತದ್ದನ್ನು ಮತ್ತೆ ನೆನಪಿಸಿದ ಸುಂದರ, ಭಾವಪೂರ್ಣ ಬರವಣಿಗೆ. ಮುಖಪುಟ ಅನನ್ಯ. ಪ್ರಚಾರಕ್ಕೆ ನಾಚುವ, ಸಲ್ಲಬೇಕಾದ್ದು ಸಲ್ಲದ, ಆರ್ಥಿಕ ಮಟ್ಟಕ್ಕಿಂತ ಕ್ರಿಯಾಶೀಲತೆಯೇ ಮುಖ್ಯವಾದ ಕಲಾವಿದ ಚಂದ್ರನಾಥ್ ಕುರಿತಾದ 'ಕ್ಯಾನ್‌ವಾಸ್' ಅದ್ಭುತವಾಗಿದೆ.

**ಬೆಂಗಳೂರು** **ನಾಗರಾಜ ಹೆಗಡೆ**

ಚಂದ್ರನಾಥ ಕುರಿತ ಬರಹ ಆತ್ಮೀಯವಾಗಿತ್ತು.

**ಬೆಂಗಳೂರು** **ಓಂಕಾರ್**

''ಸಖೀಗೀತ'' ಆಹ್ಲಾದಕರ ಬರವಣಿಗೆ, ಆಲೂರರ ಬರಹ ಓದದೇ ತುಂಬಾ ಸಮಯವಾಗಿತ್ತು ಕೂಡಾ!

**ಸಾಗರ** **ಎಚ್.ಎನ್. ಶ್ರೀಧರ**

ಬದುಕಿನ ವಿಷಾದ, ಖಿನ್ನತೆಯನ್ನು ಮಾತ್ರ ಉಂಟುಮಾಡುವುದಿಲ್ಲ. ವಿಚಿತ್ರ ವಿಸ್ಮಯಕ್ಕೂ ಈಡುಮಾಡುತ್ತದೆ. ಅದರಲ್ಲೂ ತೀಕ್ಷ್ಣವಾಗಿ ತಟ್ಟುವ ಚಂ. ಆಲೂರರ ಶೈಲಿ ಮತ್ತಷ್ಟು.

**ಬೆಳಗಾವಿ** **ಅನಸೂಯ ಸಿದ್ದರಾಮ**

ಕಾಗದದ ದೋಣಿಯಲ್ಲಿ ಪ್ರಕಟವಾದ ಅಕ್ಕ ಶಶಿಕಲಾ ವೀರಯ್ಯಸ್ವಾಮಿಯವರ ನೆನಪು ತುಂಬಾ ಚನ್ನಾಗಿತ್ತು.

**ಬಿಜಾಪುರ** **ಸುಂಗಠಾಣ**

'ಶತಮಾನದ ಮೆಲಕು'ವಿನಲ್ಲಿ 'ಸ್ನೇಹಿತರು', 'ಕವಿಸಮಯ'ದಲ್ಲಿ ಸವಿತಾನಾಗಭೂಷಣರ ಕವನಗಳು, ಅಂಕಣದಲ್ಲಿ ಮಾನಸೋಲ್ಲಾಸದ 'ಖವ್ವಾಲಿ' ಚೆನ್ನಾಗಿದೆ.

**ಕುಷ್ಟಗಿ** **ನಟರಾಜ ಸೋನಾರ**

ಚಿ. ಶ್ರೀನಿವಾಸ ರಾಜು ಅವರಿಗೆ ನೀವು 'ಎಲೆಮರೆಯ (ಕಾಯಿ ಎನ್ನದೆ) ಮರ' ಎಂದದ್ದು ಅರ್ಥಪೂರ್ಣವಾಗಿದೆ.

**ಗಂಗಾವತಿ** **ತಟ್ಟಿ ಕಾಶೀಮ ಅಲಿ**

'ಬೇಟೆಯ ನಂತರ' ಕಥೆ ರಮ್ಯವಾಗಿದೆ.

**ಕೊಣ್ಣೂರು** **ಅರವಿಂದ ಜೋಶಿ**

'ಮುದುಕಿಯ ಗುಡಿಸಲು', 'ಹಕ್ಕಿ ಟೊಪ್ಪಿ' ಎಷ್ಟು ಅಕ್ಕರೆಯ ಪುಟಗಳು!

**ಬೆಂಗಳೂರು** **ಎಂ. ದಿನೇಶ್**

'ಪುಟ್ಟತ್ತೆ-ಕಮ್ಮತ್ತೆ' (ಮೇ, ಸಂಚಿಕೆ) ಲಲಿತ ಪ್ರಬಂಧದಲ್ಲಿ ನಮೂದಿತವಾಗಿರುವ 'ಕಮ್ಮತ್ತೆ'ಯ ಕೊನೆಯ ದಿನಗಳ ಬಗ್ಗೆ. ಅವರನ್ನು ನೋಡಿಕೊಂಡವರು ಬೇರೆ ಯಾರೂ ಅಲ್ಲ-ಅವರ ಮೊಮ್ಮಗಳ ಗಂಡ. ಅವರ ಕರ್ಮಾಂತರಗಳನ್ನು, ತುಂಬಾ ನಿಷ್ಠೆಯಿಂದ ಮಾಡಿದ್ದಾರೆ. ವಾಸ್ತವ ವಿವರಗಳ ಮೇಲೆ ನಿಂತ ಸ್ಮೃತಿಚಿತ್ರದಲ್ಲಿ ತಪ್ಪು ತಿಳುವಳಿಕೆ ಆಗಬಾರದು ಅಂತ ಬರೆದಿದ್ದೇನೆ.

**ಮೈಸೂರು** **ಲಕ್ಷ್ಮಿ ಐತಾಳ್**

## ಶ್ರದ್ಧಾಂಜಲಿ

ತಮ್ಮ ರಸಾರ್ದ್ರ ರೇಖೆಗಳ ಮೂಲಕ, ಮೊದಲ ಸಂಚಿಕೆಯಿಂದಲೂ 'ಭಾವನಾ'ದ ಸಂವೇದನೆ, ಶರೀರಗಳ ಅವಿಭಾಜ್ಯ ಅಂಗವಾಗಿದ್ದ ದಾವಣಗೆರೆಯ ಅಪ್ರತಿಮ ಕಲೆಗಾರ, ಕಲಾಶಿಕ್ಷಕ, ಕಲಾಚಿಂತಕ-ಶಂಕರ್ ಪಾಟೀಲ ಮೇ-15 ರಂದು ಆಕಸ್ಮಿಕ ಹೃದಯಘಾತದಿಂದ ತೀರಿಹೋದರು. ಸತ್ವಶಾಲಿ ರೇಖೆಗಳ ಈ ಕಲಾವಿದನಿಗೆ ನಮ್ಮ ಶ್ರದ್ಧಾಂಜಲಿ; ಕುಟುಂಬಕ್ಕೆ ಸಾಂತ್ವನ.

ಭಾವನಾ





# ಕೊನೇ-ಸಿಪ್

(ಈ ಸಲ 'ಕ್ರೊನ್ಯೇ ಸಿಪ್'! )

- ಪಾಕಿಸ್ತಾನಿ ಅಂಪೈರ್ ಮ್ಯಾಚ್ ಫಿಕ್ಸಿಂಗ್‌ನಲ್ಲಿ ಪಾಲ್ಗೊಂಡಿದ್ದರು ಅಂತ ಅಲಿ ಬಾಕರ್ ಹೇಳಿದ್ದಾರ ನಂತರ ಇಲ್ಲ, 'ನಾನು ಹೇಳಿಲ್ಲ' ಅಂದರೇ ವಿನಹಃ ಅಂಪೈರ್ ದುಡ್ಡು ತಿಂದಿಲ್ಲ ಅಂತ ಹೇಳಲಿಲ್ಲ ಇರಲಿ. ನಮ್ಮ ಕುತೂಹಲ: ಬುಕಿ, ಅಂಪೈರ್‌ಗೆ ವಾಕಿಟಾಕಿಯಲ್ಲಿ (ಪಾಪ ಬಡಪಾಯಿ ಅಂಪೈರುಗ ಬಳಿ ಸೆಲ್‌ಫೋನ್ ಎಲ್ಲಿ?) ಏನು ಹೇಳಿರಬಹುದು? 'ಎಲ್ ಬಿ ಡಬ್ಲ್ಯೂ ಅಪೀಲಿಗೆ ಕೈಯೆತ್ತು, ನಿ ಕೈ ಕಲ್ಪವೃಕ್ಷವಾಗುವುದು' ಅಂತ?...
- ಮ್ಯಾಚುಗಳು ಪೆಪ್ಸಿ ಸೀರೀಸ್, ಕೋಕ್ ಸೀರೀಸ್, **ಬೆಟಿಂಗ್ ಟಿ ಸೀರೀಸ್** ಅಂತ ಕಿಶನ್ ಕುಮಾ ಹೇಳಿದರೂಂತ ಬರೇ ರೂಮರ್.
- ಯಾಕಯ್ಯಾ ಔಟಾದೆ - ಅಂತ ಬ್ಯಾಟ್ಸ್‌ಮನ್ನನ್ನ ಕೇಳಿದರೆ, 'ಬೇಕಂತ ಔಟಾಗಿಲ್ಲ ಸರ್... ಬೌಲ ಚೆಂಡೆಸೆದ, ಬ್ಯಾಟಿಂಗಾ, ಬೆಟಿಂಗಾ ಅಂತ ಯೋಚನೆ ಮಾಡ್ತಾಯಿದ್ದೆ ಸರ್.... ಅಷ್ಟರ ಔಟಾಗಬೇಕೆ?...' ಅಂದ.
- ಕ್ರಿಕೆಟ್ ನೋಡೋ ಜನ ಕಡಿಮೆಯಾಗಿ ಆಟಕ್ಕೆ ಕಲಿಗಾಲ ಬಂತೆಂದು ದಾಲ್ಮಿಯಾ ಒದ್ದಾಡುತ್ತಿದ್ದ 'ಏನು ಮಾಡೋದು? ಜನತೆಯನ್ನ ಫುಟ್‌ಬಾಲ್‌ನವರು ಫಿಕ್ಸ್ ಮಾಡಿದ್ದಾರೆ' ಅಂತ ಬಿಂದಾಸ್ ಆ ಬಿಂದ್ರಾಸ್ ಹೇಳಿದರಂತೆ.
- ಮ್ಯಾಚ್‌ಫಿಕ್ಸಿಂಗ್ ವಿಪರೀತವಾಗಿ ಮಾಡುತ್ತಾನೆಂದು ಫೇಮಸ್ ಆದ ಕ್ರಿಕೆಟಿಗ ಶೋಕಿ ಬ ಹಾಕಿಕೊಳ್ಳುತ್ತಿರಲಿಲ್ಲ, ಮರ್ಸಿಡಿಸ್ ಇಟ್ಟಿರಲಿಲ್ಲ, ಮತ್ತೆ ಬಂದ ದುಡ್ಡನ್ನೆಲ್ಲಾ ಏನು ಮಾಡಿದೆಯೊ ತಮ್ಮಾಂತ ಕೇಳಿದರೆ, 'ಏನು ಮಾಡೋದು? ಗಳಿಕೆಯೆಲ್ಲಾ ಸೇವಿಂಗ್ಸ್‌ನಲ್ಲೇ ಖರ್ಚಾ ಹೋಗ್ತಾಯಿದೆ' ಅಂದನಂತೆ ಆ ಜಿಪುಣಾಗ್ರೇಸರ.
- 'ದಾಲ್ಮಿಯಾ ಮೇ ಕುಚ್ ಕಾಲಾ ಹೈ - ಪೈಸಾ ನಹೀ ಮಖ್ಖನ್ ಖಾವೋ' ಅಂತ ಅಮುಲ್ ಬೆಣ್ಣೆ ಜಾಹೀರಾತು ಕೊಟ್ಟರಂತ ಆ ಸಂಸ್ಥೆಯ ಚೇರ್‌ಮನ್ ಕುರಿಯನ್ ಮೇಲೆ ಕೆಂಡ ಕಾರುತ್ತಿದ್ದಾರಂ ದಾಲ್ಮಿಯಾ. ಬದಲಿಗೆ 'ಕುರಿ'ಯನ್ ಹಾಲು ಕೊಳ್ಳಬೇಡಿ, ದನದ ಹಾಲು ಕುಡಿಯಿರಿ ಅಂತ ಜ ಜಗ್ಗಿ ಹೇಳಬಹುದಿತ್ತಲ್ಲಾ ಜಗ್‌ಮೋಹನ? (ಮತ್ತೇನ್ರೀ ಸಾಹೇಬ್ರ... ಜಗ್‌ಮೋಹನರು ಜಗ್ಗಿ ರೊಕ್ಕ ಮಾಡ್ಯಾರಂತೀರೇನು?)
- ಸಿಬಿಐನವರು ಕ್ರಿಕೆಟ್ ಆಟಗಾರರ ಮೇಲೆ ನಡೆಸುತ್ತಿರುವ ತನಿಖೆಗೆ 'ಸಂಪತ್ತಿಗೆ ಸವಾಲ್' ಅಂ ಕೋಡ್ ಇಟ್ಟುಕೊಂಡಿದ್ದಾರಂತೆ.
- ಕಪಿಲ್ ವಿದೇಶಿ ಚಾನೆಲ್‌ನಲ್ಲಿ ಏಕೆ ಕಣ್ಣೀರು ಹಾಕಬೇಕಿತ್ತು-ನಮ್ಮ ದೂರದರ್ಶನದಲ್ಲಿ ಅತ್ತರಾಗ್ತಿರಲಿಲ್ವೆ ಅಂತ ಸ್ವದೇಶಿ ಜಾಗರಣ ಮಂಚದವರು ಮೆರವಣಿಗೆ ತೆಗೆಯುತ್ತಾರಂತೆ.
- **ಕಚಗುಳಿ:** ಒಂದು 'ಪೋಲಿ' ಫೀಲ್ಡಿಂಗ್ ವ್ಯವಸ್ಥೆ: ಎರಡು 'ಫೈನ್ ಲೆಗ್'ಗಳ ನಡುವೆ ಒಂದು 'ಗಲಿ ಮತ್ತು ಎರಡು 'ಲಾಂಗ್ ಲೆಗ್'ಗಳ ನಡುವೆ ಒಂದು 'ಫಾರ್‌ವರ್ಡ್ ಶಾರ್ಟ್ ಲೆಗ್'!

Printed, published and owned by **Vijay Sankeshwar**, Published at 1st Floor, "Giriraj Annexe", P.W.D. Circuit House Road, HUBLI - 580 029 Karnataka Ph: 253656, 253657, 253658. Fax: 0836-2536
Printed at Anand Printers & Publishers, 6/127, 5th Cross, KPN Extn., Bangalore - 560 022
Editor-in-Chief: **Santoshkumar Gulvady** Editor: **Jayant Kaikini**

